# ಹೊಸತು

ನೆಮ್ಮದಿಯ ನಾಳೆ ನಮ್ಮದು

ಒಳಗೇನಿದೆ ...




ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಗೋಪಿ
ಸುವರ್ಣ, ಬಿ. ವಿಲ್ಸನ್, ಜಿ. ಎಂ. ಬೊಮ್ನಳ್ಳಿ
ಮುಖಪುಟ : ಸುನಾಮಿ ಅಪ್ಪಳಿಸಿದಾಗ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಭಾರತೀಯ ಜನತಾ ಪಕ್ಷವು ಸಿದ್ಧಾಂತಕ್ಕೆ ಬದ್ಧವಾಗಿಲ್ಲವೆನ್ನುವುದು ಹೊಸ ವಿಷಯವಲ್ಲ. ಆದರೆ ಅದಕ್ಕೆ ಈಚಿನ ಪುರಾವೆಯನ್ನು ಮಾನ್ಯ ಯಡಿಯೂರಪ್ಪನವರು ವಿಚಿತ್ರ ವೈಖರಿಯಿಂದ ಒದಗಿಸಿದ್ದಾರೆ. ದೆಹಲಿಯಲ್ಲಿ ದೊಡ್ಡ ಆಸ್ತಿ ಮಾಡಿಕೊಂಡಿರುವ ಅನಂತ ಕುಮಾರರ ಬಲವಂತದಿಂದ ಹಾಗೆ ಮಾಡಿದ್ದೆಂದು ಬೇಕಾದರೆ ಅವರ ಪರ ವಾದಿಸಬಹುದು. ಅಂತೂ ಚೆಡ್ಡಿ - ಯಡ್ಡಿಗಳು ಕೈಜೋಡಿಸಿ ತಾರೆಯೆಂಬ ಒಂದೇ ಅರ್ಹತೆಯ ಆಯೆಷಾ ಬೀಬಿ ಯವರನ್ನು ರಾಜ್ಯಸಭೆಗೆ ಕಳಿಸಿದ್ದಾರೆ. ಹಿಂದೆ ಆರು ವರ್ಷ ರಾಜ್ಯಸಭೆಯಲ್ಲಿ ಬಾಯಿಮುಚ್ಚಿ ಘನತೆ ತೋರಿಸಿದ ಶ್ರೀಮತಿ ಹೇಮಮಾಲಿನಿ ಉರುಫ್ ಆಯೆಷಾ ಇನ್ನೂ ಒಂದು ವರ್ಷ ಮೌನವ್ರತ ಆಚರಿಸಲು ಕರ್ನಾಟಕದ ಶಾಸಕರು (ಯಥಾಪ್ರಕಾರ ಮಾನ- ಮರ್ಯಾದೆ ಬಿಟ್ಟು) ಅನುವು ಮಾಡಿಕೊಟ್ಟಿದ್ದಾರೆ. ದೇವೇಗೌಡರು ಕುದುರೆ ರಾಮಸ್ವಾಮಿಯನ್ನು ಇದೇ ರೀತಿ ಪೋಷಿಸಿದ್ದಕ್ಕೆ ಎಷ್ಟೋ ಕೋಟಿ ಪಡೆದಿದ್ದರೆಂಬ ಗುಲ್ಲು ಈಗಲೂ ಗಾಳಿಯಲ್ಲಿ ತೇಲುತ್ತಿದೆ. ಆದರೆ ೧೧೧ ಕೋಟಿ ಆಸ್ತಿಯಲ್ಲಿ ಬಿಡಿಗಾಸನ್ನೂ ಬಿಚ್ಚದೆ ರಾಜ್ಯಸಭೆಗೆ ಹೋಗಿ ಅದೇ ಮೂರು ಅಂಕಿಗಳ ಪಂಗನಾಮವನ್ನು ಯಡಿಯೂರಪ್ಪನವರ ಮುಖಕ್ಕೆ ಮೆತ್ತಿರುವ ನಟನಾ ಕೌಶಲ್ಯ ಆಯೆಷಾ - ಮಾಲಿನಿಯವರದು. ಮುಂದಿನ ತಿಂಗಳ ಚುನಾವಣೆಗಳಲ್ಲಿ ಕರ್ಪೂರದ ಬೊಂಬೆಯನ್ನು ಮೆರೆಸಲು ಭಾಜಪಕ್ಕೆ ಅವಕಾಶವಾದಂತಾಗಿದೆ. ಒಂದು ಮದುವೆ ಮಾಡಿಕೊಂಡಿದ್ದ ಮನ್ಮಥನನ್ನು ತಾನೂ ವರಿಸಬೇಕೆಂಬ ಹಠದಿಂದ ಹೇಮಮಾಲಿನಿ ಇಸ್ಲಾಂಗೆ ಕಟ್ಟುಬಿದ್ದಿದ್ದಾರೆ. ಮದುವೆಯ ದಾಖಲೆಯಲ್ಲಿ ಈಗಲೂ ಅವರು ಆಯೆಷಾನೇ. ಮತಾಂತರವನ್ನು ಶುದ್ಧ ಅತಾರ್ಕಿಕತೆಯಿಂದ ವಿರೋಧಿಸುವ ಭಾಜಪ ಈಗ ಮತಾಂತರಿಯನ್ನು ಆಯ್ಕೆ ಮಾಡಿರುವುದು ಅದರ ಸಿದ್ಧಾಂತಕ್ಕೆ ಅಪಚಾರ; ಆದರೆ ಅಷ್ಟರಮಟ್ಟಿಗೆ ಅದು ಸ್ವಾಗತಾರ್ಹ ಅಪಚಾರ. ಇನ್ನುಮುಂದೆ ಮತಾಂತರದ ಸೊಲ್ಲೆತ್ತದೆ ಒಳ್ಳೆಯ ಪ್ರಜಾಪ್ರಭುತ್ವದ ರಾಜಕೀಯ ಮಾಡಲು ಭಾಜಪಕ್ಕೆ ಹೇಮಮಾಲಿನಿ ಬುದ್ಧಿ ಹೇಳಲಿ. ಮತ್ತು ಮರೆಯದೆ ಅದೇ ಬುದ್ಧಿವಾದವನ್ನು ಹಿರಿಯ ಆತ್ಮೀಯರಾದ ಡಾ|| ಚಿದಾನಂದ ಮೂರ್ತಿಯವರಿಗೂ ಕರುಣಿಸಲೆಂದು ಆಶಿಸೋಣ.

ತಮಿಳು ಭಾಷಿಕಳೊಬ್ಬಳನ್ನು ದೆಹಲಿಗೆ ಅಟ್ಟಿದ ಯಡಿಯೂರಪ್ಪನವರು ಹಿಂದಿ ಭಾಷಿಕಳೊಬ್ಬಳನ್ನು ಬೆಳಗಾವಿಯ ವಿಶ್ವ ಕನ್ನಡ ಸಮ್ಮೇಳನಕ್ಕೆ ಕರೆತಂದು ತುಂಬ ಐಶ್ವರ್ಯವಂತರಾದರು. ತಾನು ಕನ್ನಡ ಪ್ರೀತಿಸುವುದಾಗಿ ಹಿಂದಿಯಲ್ಲಿ ನವಿರುನವಿರಾಗಿ ಪಲುಕಿದ ಐಶ್ವರ್ಯ ರೈ ಇಡೀ ಕನ್ನಡ ಜನತೆಗೆ ಹಾಲುಣಿಸಿದಂತಾಯಿತು. ಅವರನ್ನು ನೋಡಲೆಂದೇ ಒಬ್ಬ ಮೂರ್ಖ ಲಂಡನ್ನಿನಿಂದ ಬಂದಿದ್ದುದಾಗಿ ಹೇಳಿಕೊಂಡ. ತಾರೆಯೊಬ್ಬಳನ್ನು ಪ್ರದರ್ಶನಕ್ಕಿಟ್ಟು ಬೆಳಗಾವಿಯಲ್ಲಿ ಕಿಕ್ಕಿರಿದಿದ್ದ ಕನ್ನಡಿಗರನ್ನು ಮರುಳು ಮಾಡಲು ೪೫ ಕೋಟಿ ರೂಪಾಯಿ ಅಪವ್ಯಯ ಮಾಡಲಾಗಿದೆ. ಮುಂದೊಮ್ಮೆ ಯಾರಾದರೂ ಮಾಹಿತಿ ಹಕ್ಕಿನ ಕಾಯಿದೆಯಡಿ ಐಶ್ವರ್ಯಳನ್ನು ಕರೆತಂದ ಭಾಗ್ಯಕ್ಕೆ ಕರ್ನಾಟಕ ಸುರಿದ ಹಣವೆಷ್ಟೆಂಬುದನ್ನು ಬಹಿರಂಗಗೊಳಿಸಿದರೆ ಬೆಳಗಾವಿ ಸಮ್ಮೇಳನದ ನಿಜಸ್ವರೂಪ ಬಯಲಾಗುತ್ತದೆ. ಬೊಕ್ಕಸದ ಹಣವನ್ನು ಹೀಗೆ ದುಂದುವೆಚ್ಚ ಮಾಡುವುದರಿಂದ ಕನ್ನಡದ ಶ್ರೇಯಸ್ಸು ಹೆಚ್ಚುವುದಾದರೆ ಬೆಳಗಾವಿಯಲ್ಲಿ ಅದು ಫಲಿಸಿದೆ. ಹಿರಿಯ ಚೇತನ ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಅಷ್ಟು ದೊಡ್ಡ ಜನಸಂದಣಿಯನ್ನು ಯಾವ ಸಮ್ಮೇಳನದಲ್ಲೂ ಕಂಡಿರಲಿಲ್ಲವಂತೆ. ಇಷ್ಟು ಜನರನ್ನು ಸೇರಿಸಿದ ಸಮ್ಮೇಳನವು ಶಿಕ್ಷಣದಲ್ಲಿ ಕನ್ನಡಕ್ಕೇನನ್ನು ಕೊಡುಗೆಯಾಗಿ ಇತ್ತಿತೆಂಬುದನ್ನು ನಾಳೆ ಮಾನ್ಯ ಜಿ. ವಿ.ಯವರು ತಿಳಿಸ ಬೇಕೆಂಬ ಕೋರಿಕೆ ನಮ್ಮದು. ಇಡೀ ''ವಿಶ್ವ'' ಸಮ್ಮೇಳನದಲ್ಲಿ ಕನ್ನಡ ಮಾಧ್ಯಮದ ಪ್ರಶ್ನೆ ಬರಲಿಲ್ಲ, ಎಲ್ಲ ಶಾಲೆಗಳಲ್ಲೂ ಮಕ್ಕಳಿಗೆ ಕನ್ನಡ ಕಲಿಸಲಾಗುವುದೆಂಬ ಆಶ್ವಾಸನೆ ಬರಲಿಲ್ಲ ''ಮರೆತೆಯಾದರೆ ಅಯ್ಯೋ ಮರೆತಂತೆ ಎನ್ನ' ಎಂದು ಮಾನ್ಯ ಕುವೆಂಪು ಅಲ್ಲೆಲ್ಲೋ ನಿಂತು ಇದನ್ನೆಲ್ಲಾ ವೀಕ್ಷಿಸಿದ್ದಾರೆಂಬ ಭಾವನೆ ದಟ್ಟವಾಗಿದೆ.

* * *

ನಮ್ಮ ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಲಯಗಳಲ್ಲಿ ಎಂತೆಂತಹ ಅದ್ಭುತ ವಿಷಯಗಳ ಬಗ್ಗೆ ಅಷ್ಟೇ ಅದ್ಭುತವಾದ ತೀರ್ಮಾನಗಳು ಬರುತ್ತವೆಂಬುದನ್ನು ಗಮನಿಸಿದರೆ ಭಾರತಾಂಬೆ ಎಷ್ಟು ಅದ್ಭುತ ವ್ಯಕ್ತಿತ್ವದವಳೆಂಬುದು ಅಚ್ಚರಿಯನ್ನುಂಟುಮಾಡುತ್ತದೆ. ಇತ್ತೀಚಿನ ಅಂತಹ ಒಂದು ಚರ್ಚೆ ಭೂಮಿಪೂಜೆಯ ಬಗ್ಗೆ ಗುಜರಾತು ಉಚ್ಚ ನ್ಯಾಯಾಲಯದಲ್ಲಿ ನಡೆದು ಅದೊಂದು 'ಅವಶ್ಯಕ ಆಚರಣೆ'ಯಾದ್ದರಿಂದ ಅದು ಜಾತ್ಯತೀತವೂ ಹೌದೆಂದು ತೀರ್ಪು ಕೊಡಲಾಗಿದೆ. ನಮ್ಮಲ್ಲಿ ಇದಕ್ಕೆ 'ಗುದ್ದಲಿ ಪೂಜೆ'ಯೆಂಬ ಹೆಚ್ಚು ಪ್ರಚಲಿತವಾದ ಹೆಸರಿದೆ. ಭೂಮಿ ಮತ್ತು ಗುದ್ದಲಿಗಳನ್ನು ಉತ್ಪಾದನಾ ಸಾಧನಗಳೆಂದು ಆದರಿಸುವುದು, ಅವಕ್ಕೆ ನಮಿಸುವುದು, ಎಲ್ಲ ಸಂಸ್ಕೃತಿಗಳಲ್ಲೂ ಉಂಟು. ಆದರೆ ಅದಕ್ಕೆ ಮಂತ್ರೋಚ್ಚಾರಣೆ,

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆನ್ನೆಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

**ಸಂಪುಟ-೧೨ ಸಂಚಿಕೆ - ೯ ಏಪ್ರಿಲ್ ೨೦೧೧**

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**URL : www.navakarnataka.com**
**http://navakarnataka.blogspot.com**
**http://hosathu.blogspot.com**

# ಬಜೆಟ್ ೨೦೧೧– ಇದು ಕೇವಲ ಲೆಕ್ಕಪತ್ರವಷ್ಟೆ




ಖಾಸಗೀಕರಣ ಮತ್ತು ಉದಾರೀಕರಣದ ಕನಸು, ಚಿದಂಬರಂ ವಿತ್ತ ಮಂತ್ರಿಯಾಗಿದ್ದಾಗ ಹೇಳಿದ್ದು, ಅರ್ಥಶಾಸ್ತ್ರಿ ಪ್ರಧಾನಿ ಬಹಿರಂಗವಾಗಿ ಉಚ್ಚರಿಸದ್ದು, ಅಂದರೆ ಅದು ಸರ್ಕಾರದ ಬಜೆಟ್ ಎಂಬುದು ಒಂದು ನಗಣ್ಯವಾದ ಮಿಕ್ಕ ಸರ್ಕಾರೀ ದಿನಂಪ್ರತಿ ಕೆಲಸಗಳಂತೆಯಷ್ಟೆ. ಕೇವಲ ಹಣಕಾಸು ವೆಚ್ಚ-ಆದಾಯ ಪತ್ರ ಮಂಡನೆಯಷ್ಟೆ ಆಗಬೇಕು. ಅದು ಎಂದಿನಂತೆ ಯೋಜನೆ, ಸಾಮಾಜಿಕ ಹೊಣೆಗಾರಿಕೆ ಮುಂತಾದವುಗಳನ್ನು ಕುರಿತ ನೀತಿ ಸಂಹಿತೆಗಳನ್ನು ಉಚ್ಚರಿಸದ ಸರಳ ಮುಂಗಡ ಪತ್ರ. ಈ ಉದಾರೀಕರಣದ ೨೦ ವರ್ಷಗಳಲ್ಲಿ ಈ ಸಲದ ಬಜೆಟ್ ಚಿದಂಬರಂ ಆಶಯವನ್ನು ಸಾಕಷ್ಟು ಸಾಧಿಸಿದಂತೆ ಕಾಣುತ್ತದೆ. ಅಂತರರಾಷ್ಟ್ರೀಯ ಹಣಕಾಸು ವ್ಯವಸ್ಥೆಗೆ ನಮ್ಮ ಸರ್ಕಾರ ಮುಚ್ಚಳಿಕೆ ಬರೆದುಕೊಟ್ಟಿದೆ. ೨೦೧೩-೨೦೧೪ರ ವೇಳೆಗೆ ಬಜೆಟ್ ಕೊರತೆಯನ್ನು ಶೇ. ೩ರೊಳಗೆ ಇರುವಂತೆ ನಿರ್ವಹಿಸುತ್ತೇವೆ ಎನ್ನುವುದೇ ಆ ಒಪ್ಪಂದ. ಈ ಸಲದ ಬಜೆಟ್ಟಿನ ಉದ್ದಕ್ಕೂ ಈ ಉದ್ದೇಶವನ್ನು ಮಂತ್ರದಂತೆ ಉಚ್ಚರಿಸಲಾಗಿದೆ. ಅಭಿವೃದ್ಧಿಶೀಲವೆಂದು ಕರೆದುಕೊಂಡರೂ, ಇನ್ನೂ ಹಿಂದುಳಿದ ಅರ್ಥವ್ಯವಸ್ಥೆಯಾಗಿರುವ ನಮ್ಮೊಳಗೆ ಈಗಲೆ ಸರ್ಕಾರದ ಬಜೆಟ್ಟಿನ ಮೊತ್ತಕ್ಕಿಂತ ಖಾಸಗಿಯ ಕೆಲವೇ ಕಾರ್ಪೊರೇಟ್‌ಗಳ ಸಂಪತ್ತಿನ ಮೊತ್ತವೆ ಅಗಾಧವಾಗಿದ್ದು, ರಾಷ್ಟ್ರದ ಆರ್ಥಿಕತೆಯು ಬೆಳೆಯುತ್ತಿರುವ ದಿಕ್ಕಿನ ಮೇಲೆ ಸರ್ಕಾರದ ವಾರ್ಷಿಕ ಬಜೆಟ್ಟು ಅಂಥ ಪ್ರಭಾವವನ್ನೇನೂ ಬೀರದೆ, ಅದೊಂದು ಸುದ್ದಿಯಲ್ಲದ ಸುದ್ದಿಯಷ್ಟೆ ಆಗಿದೆ. ಆ ಪ್ರಭಾವದ ಅಗತ್ಯವಿಲ್ಲ; ಆ ಕೆಲಸವನ್ನು ಮಾರುಕಟ್ಟೆ ನಿರ್ವಹಿಸುತ್ತದೆ! ಅದರ ಒಂದು ಪುರಾವೆ : ನಮ್ಮಲ್ಲಿ ಈಗ ೫೫ ಬಿಲಿಯನೈರುಗಳು. ಚೀನದ ೧೧೫ ಬಿಲಿಯನೈರುಗಳ ಒಟ್ಟು ಆಸ್ತಿಗಿಂತ ಹೆಚ್ಚು ಇವರದು. ಈ ಬಜೆಟ್ಟಿನ ಅಂಕಿಸಂಖ್ಯೆಗಳನ್ನೆಲ್ಲ ಈಗಾಗಲೆ ಮಾಧ್ಯಮಗಳು ಹಿಂಜಿ ಹೆಕ್ಕಿಯಾಗಿದೆ. ಪ್ರಗತಿಶೀಲ, ಯೋಜನಾಬದ್ಧ, ಸಮಾಜಮುಖಿ ನಿಲುವಿನ ನಮಗೆ ಇಲ್ಲಿ ಗಮನಿಸಬೇಕಾದ ಒಂದೆರಡು ವಿಷಯಗಳಿವೆ. ಬೆಲೆ ಏರಿಕೆಯನ್ನು ಸಹಜ ಬೆಳವಣಿಗೆ, ವಿಕಾಸದರ ಶೇ. ೧೦ಕ್ಕೆ ಏರದೆ ಬಡತನ ಪರಿಹಾರ ಸಾಧ್ಯವಾಗುವುದಿಲ್ಲ, ಈ ವಿಕಾಸದರ ಹೆಚ್ಚುವ ಮಾರ್ಗದಲ್ಲಿ ಹಣದುಬ್ಬರ, ಬೆಲೆ ಏರಿಕೆಗಳು ಅನಿವಾರ್ಯವೆಂದು ಪುನಃ ಪುನಃ ಸರ್ಕಾರ ಹೇಳುತ್ತಿರುವುದು ಈ ಬಜೆಟ್ಟಿನಲ್ಲೂ ಇದೆ. ಅದು ಖಾಸಗಿ ಬಂಡವಾಳ ಸಂಗ್ರಹಣೆಗೆ ಬೇಕು ಎಂದು ಅದು ಹೇಳುವುದಿಲ್ಲ. ತನ್ನ ಆದಾಯ ವೆಚ್ಚವನ್ನು ಸಮತೂಗಿಸಬೇಕು ಎನ್ನುವ ನಿಯಮವನ್ನು ಮಾತ್ರ ಕಠಿಣವ್ರತವನ್ನಾಗಿ ಕೈಗೊಂಡ ಸರ್ಕಾರ, ತನ್ನ ತೆರಿಗೆಯ ಆದಾಯ ಹೆಚ್ಚಿಸಿಕೊಳ್ಳಲು ಇಚ್ಛಿಸುತ್ತಿಲ್ಲ. ಅವರಿಗೆ ಹಿಂದಿನಂತೆ ಈಗ ಅದರ ಅಗತ್ಯವಿಲ್ಲ. ರಕ್ಷಣಾ ವೆಚ್ಚವನ್ನು ಈ ವರ್ಷ ಶೇ. ೪೦ರಷ್ಟು ಹೆಚ್ಚಿಸಲಾಗಿದೆ. ರಕ್ಷಣಾ ಸಚಿವರು ರಕ್ಷಣಾ ಸಮಸ್ಯೆಗಳೂ ಹೆಚ್ಚಿವೆ, ಆದರೂ ಬೆಲೆ ಏರಿಕೆಯಿಂದಾಗಿ ಅದು ಹೆಚ್ಚಿದಂತೆ ಕಾಣುತ್ತದೆ. ವಾಸ್ತವದಲ್ಲಿ ಹಾಗಲ್ಲ ಅನ್ನುತ್ತಾರೆ. ಹಾಗಾದರೆ ಆರೋಗ್ಯ, ಶಿಕ್ಷಣ ಕ್ಷೇತ್ರಗಳಿಗೆ ಹೆಚ್ಚಿಸಿರುವುದಾಗಿ ಹೇಳಿರುವ ಮೊತ್ತವೂ ವಾಸ್ತವದಲ್ಲಿ ಹಿಂದಿನ ವರ್ಷಕ್ಕಿಂತ ಕಡಿಮೆಯೇ.

ಹೋಗಲಿ, ಬಜೆಟ್ ಕೊರತೆಯನ್ನು ಕಡಿಮೆ ಮಾಡಿಕೊಳ್ಳಲಾಗಿದೆಯೆ ? ಕಳೆದ ವರ್ಷ ಅನಿರೀಕ್ಷಿತವಾಗಿ ಟೆಲಿಕಾಂನ ಸ್ಪೆಕ್ಟ್ರಂ ಹರಾಜಿನಲ್ಲಿ ಅಪಾರವಾದ ಹಣ ಸಂಗ್ರಹವಾಯ್ತು. ಲಾಟರಿ ಹಣದಂತೆ ಅದಿಲ್ಲದಿದ್ದರೆ ಕಳೆದ ವರ್ಷದ್ದು ವಿಪರೀತ ಖೋತಾ ಬಜೆಟ್ಟು ಆಗುತ್ತಿತ್ತು. ಜಿಡಿಪಿ ಲೆಕ್ಕ ಹಾಕುವ ವಿಧಾನದಲ್ಲಿ, ಬೆಲೆ ಏರಿಕೆಯ ಸೂಚ್ಯಂಕವನ್ನು ಲೆಕ್ಕ ಹಾಕುವ ಪ್ರಾರಂಭ ವರ್ಷವನ್ನು ೨೦೧೦ಕ್ಕೆ ಬದಲಾಯಿಸಿ ಪರಿಷ್ಕರಿಸಿದ ಜಾಣತನದಿಂದ, ಈಗ ಲೆಕ್ಕದಲ್ಲಿ ಜಿಡಿಪಿ ಹೆಚ್ಚೆಂದು ಕಾಣಲಾರಂಭಿಸಿದೆ. ನೆನಪಿರಬಹುದು, ಆಹಾರ ಬೆಲೆ ಏರಿಕೆಯನ್ನು ಕಳೆದ ಅಕ್ಟೋಬರ್ ಸುಮಾರಿನಲ್ಲಿ ಶೇ. ೨೦ ಎಂದು ಲೆಕ್ಕ ಹಾಕುತ್ತಿದ್ದು ಅದನ್ನು ಡಿಸೆಂಬರ್ ವೇಳೆಗೆ ಶೇ. ೧೧ ಎಂದು ಹೇಳಲಾರಂಭಿಸಿದರು, ಮೇಲ್ನೋಟಕ್ಕೆ ಪರವಾಗಿಲ್ಲ ಎಂದೆನಿಸುವಂತೆ ಇದು ಮುಂದುವರಿದು ಈಗ ಕಾರ್ಮಿಕರ ಜೀವನಮಟ್ಟ ಸೂಚ್ಯಂಕಗಳನ್ನು ಸಣ್ಣ ಸಂಖ್ಯೆಯಲ್ಲಿ ಹೇಳಲಾಗುತ್ತಿದೆ. ಈ ಸಂಖ್ಯಾಶಾಸ್ತ್ರದ ಚಮತ್ಕಾರ ವಾಸ್ತವವನ್ನು ಮುಚ್ಚಿಡಲಾಗುತ್ತದೆಯೇ ? ವಾಸ್ತವ ದರದಲ್ಲಿ ಜಿಡಿಪಿಯ ಬೆಳವಣಿಗೆ ಶೇ. ೬ ರಷ್ಟಿದ್ದೀತು ಅಷ್ಟೆ. ಅದನ್ನು ಶೇ. ೯-೧೦ ಅಂತ ಪ್ರಚಾರ ಮಾಡಿದರೆ ವಿದೇಶೀ ಬಂಡವಾಳ ಹರಿದುಬರುತ್ತದೆ ಎನ್ನುವುದು ಭ್ರಮೆ. ಕಾರಣ ಅವರಿಗೂ ಲೆಕ್ಕ ಹಾಕಲು ಬರುತ್ತದೆ. ಆದರೆ ಹಾಗೆ ಹರಿದುಬರುವುದಿಲ್ಲ ಎನ್ನುವುದನ್ನು ಗಮನಿಸಿಯೇ ಈಗ ವಿದೇಶೀ ಕಪ್ಪು ಹಣ ಮುಂತಾದ ಕೆಟ್ಟ ಬಂಡವಾಳ ಬರಲು ಅನುವು ಮಾಡಿಕೊಟ್ಟಿದೆ. ಅದೇ ಬಜೆಟ್ ಇನ್ನೊಂದೆಡೆ ಕಪ್ಪು ಹಣವನ್ನು ತಡೆಹಿಡಿಯುತ್ತೇವೆ ಅಂತಲೂ ಹೇಳುತ್ತದೆ! ಈಗಾಗಲೆ ಸ್ಪೆಕ್ಟ್ರಂ ಹರಾಜಿಗೆ ಬಂದ ಹಣ ಹವಾಲಾರೂಪದ ಕಪ್ಪು ಹಣ ಅಂತ ಸಿಬಿಐಗೆ ಸುಳಿವು ಸಿಕ್ಕಿದೆ. ಬರುವ ವರ್ಷದ ಜಿಡಿಪಿ ವಿಕಾಸದ ದರ ಹೆಚ್ಚಿ, ಹೆಚ್ಚು ತೆರಿಗೆ ಸಂಗ್ರಹವಾಗುತ್ತದೆ ಎನ್ನುವ ಅಂದಾಜಿನಲ್ಲಿ ವೆಚ್ಚದ ಬಾಬ್ತು ನಿಗದಿಪಡಿಸಲಾಗಿದೆ. ಈ ಲೆಕ್ಕಾಚಾರಗಳೆಲ್ಲಾ ತಲೆಕೆಳಗಾಗಿ, ಬರುವ ವರ್ಷ ಬಜೆಟ್ ಕೊರತೆ ಕಡಿಮೆಯಾಗುವ ಬಯಕೆ ಕೈಗೂಡುವಂತಿಲ್ಲ. ಪೆಟ್ರೋಲ್ ಬೆಲೆ ಇನ್ನೂ ಗಗನಕ್ಕೆ ಏರುತ್ತದಲ್ಲ!

ರಾಜ್ಯಗಳಿಗೆ ಕೇಂದ್ರ ನೀಡುವ ತೆರಿಗೆಯ ಪಾಲು ಮೇಲ್ನೋಟಕ್ಕೆ ಹೆಚ್ಚಿದಂತೆ ಕಂಡರೂ, ವಸೂಲಿ ಕಡಿಮೆ ಆದರೆ ಇದೂ ಕಡಿಮೆಯಾಗುತ್ತದೆಯಾಗಿ, ಈ ಸಾರಿ ರಾಜ್ಯಗಳಿಗೂ ಈ ಕುರಿತು ತೊಂದರೆಯಾಗಲಿದೆ. ಕೇಂದ್ರ ನೀಡುವ ಗ್ರಾಂಟುಗಳೂ, ನೆರವುಗಳೂ, ಸಾಮಾಜಿಕ ಆಸ್ತಿ ಸೃಷ್ಟಿಸುವ ಮೂಲಭೂತ ಅನುಕೂಲಗಳ ಸೃಷ್ಟಿಗೆ, ಶಾಲಾ, ಆಸ್ಪತ್ರೆ, ಗ್ರಾಮೀಣ ರಸ್ತೆ ಮುಂತಾದುವಕ್ಕೆ ನೀಡುವ ಸಹಾಯಧನ ಇವುಗಳೆಲ್ಲವನ್ನು ರಾಜ್ಯ ಬಜೆಟ್ಟುಗಳೂ ಬಜೆಟ್ ಕೊರತೆಯನ್ನು ಶೇ. ೩ರೊಳಗೆ ನಿರ್ವಹಿಸುವ ಪ್ರಯತ್ನವನ್ನು ಅವಲಂಬಿಸಿದೆ. ಅವರಿಗೆ ಈ ಕುರಿತ ಒತ್ತಾಯ, ರಾಜ್ಯಗಳ ಸ್ವಾಯತ್ತತೆಯನ್ನು ಮೊಟಕು ಮಾಡುತ್ತಿದೆ. ಕೇರಳ ಸರ್ಕಾರದ ಗ್ರಾಮ ಪಂಚಾಯಿತ್ತಿಗಳಲ್ಲಿ ಮೂಲಭೂತ ಸೌಕರ್ಯಗಳ ವೃದ್ಧಿಗೆ ಯೋಜನಾ ವೆಚ್ಚದ ಶೇಕಡ ಅರ್ಧದಷ್ಟನ್ನು ವಿನಿಯೋಗಿಸುತ್ತಿದ್ದು, ಇದನ್ನು ಬಂಡವಾಳ ಹೂಡಿಕೆ ಎಂದು ಪರಿಗಣಿಸಿದರೆ, ಅದು ಸಾಲವೆನಿಸುವುದಿಲ್ಲ. ಅವನ್ನು ಸಾಲ ಎಂದು ಹೇಳಿ ನೀವು ಖೋತಾ ನಿರ್ವಹಿಸಲಿಲ್ಲ ಎನ್ನುವುದು ಯಾವ ನ್ಯಾಯ ? ರಾಜ್ಯಗಳ ಎಲ್ಲ ಬಜೆಟ್ಟಿನ ಕೊರತೆಯನ್ನು ಒಟ್ಟಾರೆ ಸರಾಸರಿ ಲೆಕ್ಕ ಹಾಕಿದರೆ ಅದು ಕೇವಲ ೨.೭, ಕೇಂದ್ರದ್ದು ಶೇ. ೪.೩. ಹೀಗಿರುವಾಗ ತಪ್ಪು ಲೆಕ್ಕ ಹಾಕಿ, ರಾಜ್ಯಗಳು ತಮ್ಮ ಹಣಕಾಸನ್ನು ಸರಿಯಾಗಿ ನಿರ್ವಹಿಸುತ್ತಿಲ್ಲ ಎಂದು ನೆಪಹೂಡಿ, ಅವರಿಗೆ ಸಹಾಯ ಧನ ಕಡಿತ ಮಾಡುತ್ತೇವೆ ಎನ್ನುವುದು ಯಾವ ನ್ಯಾಯ ?

ಜಿಎಸ್‌ಟಿ ಎನ್ನುವ ರಾಷ್ಟ್ರವ್ಯಾಪಿ ಏಕರೂಪ ವ್ಯಾಪಾರ ತೆರಿಗೆಯ ವ್ಯವಸ್ಥೆ ಬರಬೇಕು ಎನ್ನುವುದೇನೋ ಸರಿ. ಆದರೆ ರಾಜ್ಯಗಳಲ್ಲಿರುವ ವಿರೋಧ ಪಕ್ಷದ ಆಡಳಿತಗಳೂ ತಮ್ಮ ಪಾಲಿನ ಆದಾಯ ಕಮ್ಮಿಯಾಗಿರುವ ಕೆಲವು ಆತಂಕಗಳನ್ನು ವ್ಯಕ್ತಪಡಿಸಿದರೆ ಅದನ್ನು ಪರಿಹರಿಸದೆ, ರಾಜಕೀಯ ಉದ್ದೇಶವಿಟ್ಟು ಅವರನ್ನು ಟೀಕಿಸಲಾಗಿರುವುದು ಸರಿಯಲ್ಲ.

ಈಗಾಗಲೆ ಎರಡನೆಯ ಯುಪಿಎ ಸರ್ಕಾರ ಖಾಸಗಿ ಕ್ಷೇತ್ರದ ಶ್ರೀಮಂತರಿಗೆ ಆರು ಲಕ್ಷ ಕೋಟಿಗೂ ಹೆಚ್ಚು ತೆರಿಗೆ ವಿನಾಯ್ತಿ ನೀಡಿದ್ದು, ಈ ವರ್ಷವೂ ಅದು ಸುಮಾರು ೮೦ ಸಾವಿರ ಕೋಟಿಯಿದೆ. ಅದೇ ಸಮಯದಲ್ಲಿ ಗೊಬ್ಬರ, ಸೀಮೆಎಣ್ಣೆ ಗಳಿಗೆ ನೀಡುವ ಸಹಾಯಧನವನ್ನು ತಪ್ಪಿಸುವ ಯೋಜನೆಗಳನ್ನು ಹೇಳಲಾಗಿದೆ. ಪಡಿತರ ವ್ಯವಸ್ಥೆಯನ್ನು ಈ ಸ್ವರೂಪದಲ್ಲಿ ಮುಂದುವರಿಸುವುದು ಸರಿಯಲ್ಲ ಎನ್ನುವ ಸರ್ಕಾರ ಮತ್ತೊಂದು ಕಡೆ ಆಹಾರ ರಕ್ಷಣೆಯ ವಿಷಯ ಉದ್ದುದ್ದ ಭಾಷಣ ಮಾಡುತ್ತಿದೆ. ಬಡವರು ಎಷ್ಟು ಸಂಖ್ಯೆ ಎಂದು ಲೆಕ್ಕ ಹಾಕಲು ಮನಸ್ಸಿನಲ್ಲದ ಸರ್ಕಾರ ಬಡವರಿಗೆ ನೇರ ಸಹಾಯಧನ ನೀಡಿ, ಪಡಿತರ ವ್ಯವಸ್ಥೆಯನ್ನು ಮುಚ್ಚಿಬಿಟ್ಟರೆ ಹೇಗೆ ಎಂದು ಯೋಚಿಸುತ್ತಿದೆ. ನೀಡುವ ಕಾರಣ ಈ ವ್ಯವಹಾರಗಳಲ್ಲಿ ಸರ್ಕಾರದ ಆಡಳಿತದ ಗುಣಮಟ್ಟ ಕೊರತೆ, ಭ್ರಷ್ಟಾಚಾರ, ಸೋರಿಕೆ ಮುಂತಾದುವು. ಸರ್ಕಾರದ ಆದ್ಯ ಕರ್ತವ್ಯವೇ ಇವನ್ನು ಸರಿಪಡಿಸುವುದು; ಅದು ಆಗದು ಅಂತ ಕೈಚೆಲ್ಲಿ, ಆ ವ್ಯವಸ್ಥೆಯನ್ನೇ ಮುಚ್ಚುತ್ತೇವೆ ಎನ್ನುವುದಲ್ಲ. ನಿಮ್ಮಿಂದ ಅಂಥ ಸಮರ್ಪಕ ಆಡಳಿತ ನೀಡಲಾಗದಿದ್ದರೆ ನಿಮಗೆ ಯಾಕೆ ಸ್ವಾಮಿ ಅಧಿಕಾರದ ಬಯಕೆ ? ಪಡಿತರ ವ್ಯವಸ್ಥೆ ಮುಚ್ಚಿದ್ದೆ ವಿದೇಶೀ ಚಿಲ್ಲರೆ ವ್ಯಾಪಾರದ ಮಾಲುಗಳು ಬರಲಾಗುವುದಿಲ್ಲ. ಅವರು ಒಳಗೆ ಬರಲು ಅನುವುಮಾಡಿಕೊಡುತ್ತೇವೆ ಅಂತ ಗುಟ್ಟಾಗಿ ಮಾತು ಕೊಟ್ಟಿರುವ ಈ ಸರ್ಕಾರದ ಕಪಟ, ಈಗ ಅನುಭೋಗಿ ಬಡವರಿಗೆ ನೇರ ನಗದು ನೀಡುವ ಮಾತು ತೆಗೆದಿದೆ. ಜನ ಎಚ್ಚೆತ್ತುಕೊಳ್ಳಬೇಕು. ಸರ್ಕಾರದ ಕೆಲಸ ಕೇವಲ ರಕ್ಷಣೆ, ಕಾನೂನು ವ್ಯವಸ್ಥೆಯಷ್ಟೆ ಎನ್ನುವ ವಾದವನ್ನು ನಾವು ಒಪ್ಪುವುದಿಲ್ಲ. ಹಾಗೆ ಹೇಳುತ್ತಲೆ ಖಾಸಗಿ ಕ್ಷೇತ್ರಕ್ಕೆ ಮಾತ್ರ ಸವಲತ್ತು ನೀಡುತ್ತಿದ್ದಾರೆ. ಸರ್ಕಾರದ ಪ್ರಥಮ ಕರ್ತವ್ಯವೇ ಸಾಮಾಜಿಕ ಹೊಣೆಗಾರಿಕೆ. ಈ ಬಜೆಟ್ಟು ಈ ಮುಖ್ಯ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳುವ ಪ್ರಯತ್ನವಾಗಿದೆ. ಇದು ನಮಗೆ ಒಪ್ಪಿಗೆಯಿಲ್ಲ. ನಮ್ಮನ್ನು ನಾವೇ ಆಳಬೇಕು, ದೊಡ್ಡಣ್ಣನ ಐಎಂಎಫ್ ಅಲ್ಲ.

## ಜಪಾನಿನ ತ್ರಿವಳಿ ದುರಂತ

ಜಪಾನಿನಲ್ಲಿ ಸರಣಿ ದುರಂತ. ದೇಶದ ಈಶಾನ್ಯ ಕರಾವಳಿಯಲ್ಲಿ ಶುಕ್ರವಾರ (ಮಾರ್ಚ್ ೧೧)ದಂದು ಸಂಭವಿಸಿದ ಭೂಕಂಪನ ಶತಮಾನದಲ್ಲೇ ಅತಿ ಹೆಚ್ಚು ವಿನಾಶಕಾರಿಯಾದದ್ದು. ರಿಕ್ಟರ್ ಮಾಪಕದಲ್ಲಿ ೮.೯. ಅದರ ಹಿಂದೆಯೇ ಸಂಭವಿಸಿದ್ದು ಸುನಾಮಿ. ಆಳೆತ್ತರದ ಅಲೆಗಳು ಅಪ್ಪಳಿಸಿ ಇಡೀ ಕರಾವಳಿ ಪ್ರದೇಶ ನೆಲಸಮ. ಕಾರುಗಳು, ವಾಹನಗಳು, ವಿಮಾನ ನಿಲ್ದಾಣದಲ್ಲಿದ್ದ ವಿಮಾನಗಳೂ ಎಲ್ಲ ತೇಲಾಡಿದುವು. ಗಗನಚುಂಬಿ ಕಟ್ಟಡಗಳು ನೆಲಕ್ಕುರುಳಿದುವು. ಈ ದಾರುಣ ದೃಶ್ಯಗಳನ್ನು ಟೆಲಿವಿಷನ್ ಪರದೆಯ ಮೇಲೆ ನೋಡಿದ್ದೇವೆ. ಹತ್ತು ಸಾವಿರಕ್ಕೂ ಹೆಚ್ಚು ಮಂದಿ ಮೃತರಾದರೆಂದು ಅಂದಾಜು. ಲಕ್ಷಗಟ್ಟಲೆ ಜನ ನಿರಾಶ್ರಿತರಾಗಿದ್ದಾರೆ. ದುರಂತದಲ್ಲಿ ಮೃತರಾದವರಿಗೆ 'ಹೊಸತು' ತನ್ನ ಸಂತಾಪ ಸೂಚಿಸುತ್ತದೆ. ಜಪಾನೀ ಜನರ ಈ ಸಂಕಷ್ಟದ ಸಮಯದಲ್ಲಿ ನಾವೂ ಅವರೊಂದಿಗಿದ್ದೇವೆ. ಇದರ ಬೆನ್ನಲ್ಲೇ ಬಂದಿರುವ ಘೋರ ಅಪಘಾತ ನ್ಯೂಕ್ಲಿಯರ್ ರಿಯಾಕ್ಟರುಗಳಲ್ಲಿ ಸಂಭವಿಸಿರುವ ಸ್ಫೋಟ. ಇರುವ ಐದು ಘಟಕಗಳಲ್ಲಿ ಮೂರು ವಿಪತ್ತನ್ನು ಎದುರಿಸುತ್ತಿವೆ. ರೇಡಿಯೋ ಆಕ್ಟಿವ್ ವಿಕಿರಣದ ಪ್ರಸರಣದ ಭೀತಿ ಇಡೀ ಜಪಾನನ್ನು, ಆಸುಪಾಸಿನ ದೇಶಗಳನ್ನು ಆವರಿಸಿದೆ. ಈ ನ್ಯೂಕ್ಲಿಯರ್ ದುರಂತದ ಪರಿಣಾಮಗಳನ್ನು ನಿಯಂತ್ರಿಸಲು ಸಕಲ ಪ್ರಯತ್ನಗಳೂ ನಡೆಯುತ್ತಿವೆ.

ಜಪಾನ್ ದ್ವೀಪಕ್ಕೆ ಭೂಕಂಪನ ಹೊಸದೇನಲ್ಲ, ಆಗಾಗ ಈ ಅವಘಡ ಸಂಭವಿಸುತ್ತಲೇ ಇರುತ್ತದೆ. ಆದರೆ ಈ ಬಾರಿ ಸಂಭವಿಸಿದ ಕಂಪನ ಹಿಂದೆಂದೂ ಕಂಡಿರದಂಥದ್ದು. ಈ ಕಂಪನದ ಶಕ್ತಿ ಸುಮಾರು ಸಾವಿರದ ಇನ್ನೂರು ಪರಮಾಣು ಬಾಂಬುಗಳ (ಹಿರೋಷಿಮಾದ ಮೇಲೆ ಹಾಕಿದ ಪರಮಾಣು ಬಾಂಬು) ಸ್ಫೋಟಕ್ಕೆ ಸಮ ಎಂದು ಅಂದಾಜು. ಈ ದುರಂತದಲ್ಲಿ ಸಂಭವಿಸಿರುವ ನಷ್ಟ ಅಪಾರವಾದ್ದು. ಅಂತರರಾಷ್ಟ್ರೀಯ ಸಮುದಾಯದ ಸಹಾಯ ಹಸ್ತ ತಕ್ಕಮಟ್ಟಿಗೆ ನೆರವಾದೀತು. ಆದರೆ ಹೊರೆ ಜಪಾನಿ ಜನತೆಯ ಮೇಲೆ. ಅರವತ್ತೈದು ವರ್ಷಗಳ ಹಿಂದೆ ಪ್ರಪಂಚದ ಯಾವ ದೇಶವೂ ಅನುಭವಿಸದಿದ್ದ ದುರಂತವನ್ನು ಜಪಾನೀ ಜನತೆ ಅನುಭವಿಸಿತು. ವಿಶ್ವದ ಮೊದಲ ಪರಮಾಣು ಬಾಂಬು ದಾಳಿಯಾದದ್ದು ಎರಡನೆಯ ಮಹಾಯುದ್ಧ ಕಾಲದಲ್ಲಿ ಹಿರೋಷಿಮಾ-ನಾಗಸಾಕಿಗಳ ಮೇಲೆ. ರೇಡಿಯೋ ಆಕ್ಟಿವ್ ವಿಕಿರಣದ ಪರಿಣಾಮಗಳಿಂದ ಈಗಲೂ ಅದು ಹೊರಬಂದಿಲ್ಲ. ಈಗ ಮತ್ತೆ ವಿಕಿರಣದ ಭೀತಿ ಆವರಿಸಿಕೊಂಡಿದೆ. ಜಪಾನ್ ಬೇರಾವುದೇ ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿಲ್ಲವಾದ್ದರಿಂದ ನ್ಯೂಕ್ಲಿಯರ್ ಶಕ್ತಿಯ ಮೇಲೆ ಹೆಚ್ಚು ಅವಲಂಬಿತವಾಗಿದೆ. ದೇಶದ ಮೂರನೇ ಒಂದು ಭಾಗ ವಿದ್ಯುಚ್ಛಕ್ತಿ ಪೂರೈಕೆಯಾಗುತ್ತಿರುವುದು ಪರಮಾಣು ಶಕ್ತಿಯಿಂದ. ಇಲ್ಲಿ ಐವತ್ತಕ್ಕೂ ಹೆಚ್ಚು ರಿಯಾಕ್ಟರುಗಳಿವೆ. ಈಗ ಸಂಭವಿಸಿರುವ ದುರಂತ ಮತ್ತೊಮ್ಮೆ ನ್ಯೂಕ್ಲಿಯರ್ ವಿದ್ಯುತ್ತಿನ ಸುರಕ್ಷತೆಯ ಬಗ್ಗೆ ವಿವಾದವನ್ನು ಪ್ರಪಂಚದಾದ್ಯಂತ ಸೃಷ್ಟಿಸಿದೆ.

ಜಪಾನಿನಲ್ಲಿ ಸಂಭವಿಸಿರುವ ದುರಂತದ ಸಂದರ್ಭದಲ್ಲಿ ಪ್ರಳಯ ಸಂಭವದ ಪ್ರತಿಪಾದಕರುಗಳು ಜನರಲ್ಲಿ ಭೀತಿ ಉಂಟುಮಾಡುತ್ತಿದ್ದಾರೆ. ಕಳೆದ ತಿಂಗಳಷ್ಟೆ ಪುರೋಹಿತಶಾಹಿ ಮತ್ತು ಜ್ಯೋತಿಷಿಗಳು ಪ್ರಳಯದ ಭೀತಿ ಹುಟ್ಟಿಸಿ ಜನರನ್ನು ಪೂಜೆ ಪುನಸ್ಕಾರಗಳಲ್ಲಿ ತೊಡಗಿಸಿದ್ದರು. ಜಪಾನಿನ ದುರಂತವನ್ನು ಬಳಸಿಕೊಂಡು ಈ ಜ್ಯೋತಿಷಿಗಳು ತಮ್ಮ ಭವಿಷ್ಯವಾಣಿ ರುಜುವಾತಾಗಿದೆ ಎಂದು ಹೇಳತೊಡಗಿದ್ದಾರೆ. ನೈಸರ್ಗಿಕ ದುರಂತವನ್ನು ಬಳಸಿಕೊಂಡು, ಜನರಲ್ಲಿ ಮೂಢನಂಬಿಕೆ ಉಂಟುಮಾಡಿ ಲಾಭಗಳಿಸಲು ಹೊರಟಿದ್ದಾರೆ ಇವರು. ಜನ ಇದರ ಬಗ್ಗೆ ಎಚ್ಚರದಿಂದಿರಬೇಕಾಗಿದೆ.

ಜಪಾನಿನ ಈ ದುರಂತದಲ್ಲಿ ಸಾವು ನೋವಿಗೀಡಾಗಿರುವ ಜನರಿಗೆ 'ಹೊಸತು' ಮತ್ತೊಮ್ಮೆ ತನ್ನ ಸಂತಾಪ ಸೂಚಿಸುತ್ತದೆ, ಸಾಂತ್ವನದ ನುಡಿಗಳನ್ನು ಅರ್ಪಿಸುತ್ತದೆ.


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

*ಈ ತಿಂಗಳು (೩ನೇ ಪುಟದಿಂದ)*

ಮಂಗಳಾರತಿ, ಕಡೆಯಲ್ಲಿ ಕೊಡಲಾಗುವ ಚರ್ಪು, ಇವೆಲ್ಲಾ ನಮ್ಮ ವೈಶಿಷ್ಟ್ಯ. ಅದಕ್ಕಿಂತಲೂ ಮುಖ್ಯವಾಗಿ ಪುರೋಹಿತನಿಗೆ ನೀಡಲಾಗುವ ಅಕ್ಕಿ, ಬಟ್ಟೆ, ದಕ್ಷಿಣೆ, ಇತ್ಯಾದಿಗಳು 'ಪೂಜೆ'ಯ ಅವಿಭಾಜ್ಯ ಅಂಗ. ಅವನ್ನು ಕೊಟ್ಟು ಪುನೀತರಾಗುವವರಿದ್ದರೆ ಪುರೋಹಿತರಿಗೂ ಅನುಕೂಲ! ಆದರೆ ಮುಖ್ಯ ವಿಷಯ ಅದಲ್ಲ, ಪ್ರಶ್ನೆ ಇರುವುದು ಅದು 'ಸೆಕ್ಯುಲರ್' ಹೌದೇ, ಅಲ್ಲವೇ, ಎಂದು. ಪಾಪ, ಪ್ರಶ್ನೆ ಎತ್ತಿದ ದಲಿತ ಕಾರ್ಯಕರ್ತ ರಾಜೇಶ ಸೋಲಂಕಿಗೆ ಉಚ್ಚ ನ್ಯಾಯಾಲಯ ಇಪ್ಪತ್ತು ಸಾವಿರ ರೂಪಾಯಿಗಳ ದಂಡ ಬೇರೆ ವಿಧಿಸಿತು. ಇದು ತೀರಾ ಪ್ರಶ್ನಾರ್ಹವಾದ ಮನೋಭಾವ. ''ನಿನಗೇನು ಅರ್ಹತೆ ಇದೆ ಇಂತಹ ಪ್ರಶ್ನೆ ಕೇಳಲು'' ಎಂಬಂತೆ ನ್ಯಾಯಾಲಯವು ಸೋಲಂಕಿಯನ್ನು ದಂಡಿಸಿದ್ದು ಉದ್ಧಟತನ. ನ್ಯಾಯಾಲಯವು ''ವಸುಧೈವ ಕುಟುಂಬಕಂ'' (ಇಡೀ ವಿಶ್ವವೇ ಕುಟುಂಬ) ಮತ್ತು ''ಸರ್ವೇ ಜನಾಸ್ಸುಖಿನೋ ಭವಂತು'' (ಎಲ್ಲರೂ ಸುಖವಾಗಿರಲಿ ಎಂಬರ್ಥದ ಈ ವಾಕ್ಯವನ್ನು ನ್ಯಾಯಾಲಯ ಸರಿಯಾಗಿ ಬರೆದಿಲ್ಲ ಕೂಡ) ಎಂಬ ವಾಕ್ಯಗಳನ್ನುದ್ಧರಿಸಿ ತನ್ನ ಘನವಾದ ತೀರ್ಪಿಗೆ ಹಿನ್ನೆಲೆಯೊದಗಿಸಿದೆ. ಭೂಮಿ ಪೂಜೆಯು ''ಬಾಳು ಮತ್ತು ಇತರರನ್ನು ಬಾಳಲು ಬಿಡು, ಯಾರಿಗೆ ಧಾರ್ಮಿಕ ಆಚರಣೆ ಬೇಕೋ ಅವರು ಮಾಡಿಕೊಳ್ಳಲಿ'' ಎಂಬ ಗಹನವಾದ ಆಶಯವನ್ನು ಪ್ರತಿನಿಧಿಸುತ್ತದೆಂದು ನ್ಯಾಯಾಲಯ ಹೇಳಿದೆ. ಭೂಮಿಯನ್ನು ಅಗೆದಾಗ ಭೂಮಿತಾಯಿಗೆ ನೋವಾಗುತ್ತದಾದ್ದರಿಂದ ಕ್ಷಮೆ ಯಾಚಿಸುವ ಪ್ರಕ್ರಿಯೆಯು ಈ ಪೂಜೆಯ ಅಂಗವೆಂಬುದು ನಿಜ. ಋಗ್ವೇದ, ಅಥರ್ವವೇದಗಳಲ್ಲಿ ಈ ರೀತಿಯ ಭಾವನೆ ಹಲವು ವಿಧಗಳಲ್ಲಿ ಪ್ರಕಟವಾಗಿದೆ. ಉದಾಹರಣೆಗೆ, ಓಷಧಿ ಸೂಕ್ತದಲ್ಲಿ ಔಷಧಿಗಾಗಿ ಯಾವುದಾದರೂ ಮೂಲಿಕೆಯನ್ನು ಕೀಳುವಾಗಿನ ಸಂದಿಗ್ಧ ವ್ಯಕ್ತವಾಗಿದೆ. ಕಿತ್ತರೆ ಮೂಲಿಕೆಗೆ ಅಪಚಾರ, ಕೀಳದಿದ್ದರೆ ಅದು ಔಷಧಿಯಾಗಿ ಉಪಯೋಗಕ್ಕೆ ಬರಲಾಗುವುದಿಲ್ಲ. ಆದ್ದರಿಂದ ಕವಿ ಓಷಧಿಗೆ ಹೇಳುತ್ತಾನೆ ''ನನ್ನ ಮೇಲೆ ಕೋಪ ಮಾಡಿಕೊಳ್ಳಬೇಡ,'' ಎಂದು. ಇದೆಲ್ಲಾ ಸರಿ, ಆದರೆ ಭೂಮಿಪೂಜೆಯನ್ನು ಜಾತ್ಯತೀತ ಎನ್ನಬಹುದೆ? ಅಂತಹ ಆಚರಣೆ ಬೇರೆ ಧರ್ಮಗಳ ತಥಾಕಥಿತ ಅನುಯಾಯಿಗಳಲ್ಲಿ ಇಲ್ಲದಿದ್ದರೆ ಅವರು ಇದನ್ನು ಹೇಗೆ ಅರ್ಥೈಸಿಕೊಳ್ಳುತ್ತಾರೆ? ಒಬ್ಬ ವ್ಯಕ್ತಿಯು ತನ್ನ ಸ್ವಂತದ ವ್ಯವಹಾರದಲ್ಲಿ ಆಚರಿಸಿಕೊಳ್ಳುವ ಪೂಜಾವಿಧಿಗಳು ಸಂವಿಧಾನ ನಿರ್ದೇಶಿತ ಸಾರ್ವಜನಿಕ ವಲಯದಲ್ಲಿ ಮಾನ್ಯವೆ? ಅದು ಇತರರ ಮೇಲೆ ಹೇರಿಕೆಯಾಗುತ್ತದಲ್ಲವೆ? ಜೊತೆಗೆ, ಸಂವಿಧಾನವು ಪ್ರಭುತ್ವಕ್ಕೆ ಕೊಟ್ಟ ನಿರ್ದೇಶಕ ನಿಯಮಗಳಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸುವ ಕರ್ತವ್ಯ ವಿಧಿಸಲಾಗಿದೆಯಲ್ಲವೆ? ಅದನ್ನು ಮೀರಲು ಪ್ರಭುತ್ವಕ್ಕೆ ಹಕ್ಕನ್ನು ನ್ಯಾಯಾಲಯ ನೀಡಬಹುದೆ? ಇದೆಲ್ಲವನ್ನೂ ಪರಿಶೀಲಿಸದೆ ನ್ಯಾಯಾಲಯವು ವೈಯಕ್ತಿಕ ಪೂರ್ವಗ್ರಹದ ನೆಲೆಯಲ್ಲಿ ತೀರ್ಪು ನೀಡಿರುವುದು ಹಿಮ್ಮುಖದ ಚಲನೆಗೆ ಕುಮ್ಮಕ್ಕು ನೀಡಿದಂತಾಗಿದೆ.

* * *

ಪುತ್ತೂರಿನಲ್ಲಿ ಆರೆಸ್ಸೆಸ್ ವರಿಷ್ಠರ ಸಭೆಯೊಂದನ್ನು ನಡೆಸಲಾಯಿತು. ಆ ಸಂಘದ ಸದಸ್ಯರು ಜೀವನ ಮೌಲ್ಯಗಳಿಗೆ ಮತ್ತು ರಾಜ್ಯಾಡಳಿತದಲ್ಲಿ ಮೌಲ್ಯಗಳಿಗೆ ಎಷ್ಟು ಬೆಲೆ ನೀಡುತ್ತಾರೆಂಬುದು ಈಗ ಗುಟ್ಟಾಗಿ ಉಳಿದಿಲ್ಲ. ಭಯೋತ್ಪಾದಕತೆಯನ್ನು ಮೌಲ್ಯದ ಗೌರವಕ್ಕೆ ಪಾತ್ರವಾಗಿಸುವ ಕೆಲಸವನ್ನು ಸಹ ಆರೆಸ್ಸೆಸ್ ಕಾರ್ಯಕರ್ತರು ಮಾಡಿದ್ದಾರೆಂಬುದು ಸಂಘದ ವರಿಷ್ಠರಿಗೆ ತಿಳಿದಿದೆ. ಆ ವರಿಷ್ಠರಲ್ಲಿ ಅನಂತಕುಮಾರ್, ಯಡಿಯೂರಪ್ಪ, ವೆಂಕಯ್ಯ ನಾಯಿಡು, ನರೇಂದ್ರ ಮೋದಿ, ಮುಂತಾದವರಲ್ಲದೆ ಮಸೀದಿ ಉರುಳಿಸುವ ವೀರರೂ ಇದ್ದಾರೆ. ಅವರೆಲ್ಲಾ ಒಟ್ಟುಗೂಡಿ ಪುತ್ತೂರಿನಲ್ಲಿ ಭ್ರಷ್ಟಾಚಾರ ನಿರ್ಮೂಲನಕ್ಕೆ ಹಾದಿ ಕಂಡುಹಿಡಿಯಲು ಸಮಾಲೋಚನೆ ನಡೆಸಿದ್ದು ಒಂದು ವಿಪರ್ಯಾಸ. ಲೋಕಾಯುಕ್ತ ಸಂತೋಷ ಹೆಗ್ಡೆಯವರಲ್ಲಿ ವಿಚಾರ ಮಾಡಿದ್ದರೆ ಆರೆಸ್ಸೆಸ್ ಹಿನ್ನೆಲೆಯ ಇನ್ನಷ್ಟು ಮಹಾನ್ ಪ್ರತಿಭಾವಂತರ ಪಟ್ಟಿ ಕೊಡುತ್ತಿದ್ದರು, ಅವರನ್ನೂ ಪುತ್ತೂರಿಗೆ ಕರೆಸಿಕೊಳ್ಳಬಹುದಿತ್ತು. ಇರಲಿ, ಭ್ರಷ್ಟಾಚಾರವನ್ನು ವಿರೋಧಿಸುವ ಸಂಕಲ್ಪವಿದ್ದರೆ ನಾವೇಕೆ ಅದಕ್ಕೆ ತೊಡರೊಡ್ಡಬೇಕು! ಅವರು ಸೂಚಿಸಿದ ಪರಿಹಾರ ಎರಡು ಬಗೆಯದು: (ಅ) ಭ್ರಷ್ಟರ ನಿಗ್ರಹಕ್ಕೆ ಬಹಳ ಕಟ್ಟುನಿಟ್ಟಾದ ನಿಯಮಗಳನ್ನು ರೂಪಿಸಬೇಕು, ಮತ್ತು (ಆ) ಭ್ರಷ್ಟಾಚಾರದ ಪಿಡುಗನ್ನು ತೊಡೆದುಹಾಕಲು ವ್ಯಕ್ತಿತ್ವ ವಿಕಸನಕ್ಕೆ ಯತ್ನಿಸಬೇಕು. ಅಂದರೆ, ಅನಂತಕುಮಾರಾದಿಗಳ ವ್ಯಕ್ತಿತ್ವವನ್ನು ರೂಪಿಸಲು ಹಿಂದೆ ಯತ್ನಿಸಿರಲಿಲ್ಲವೆಂದೆ? ಅವರೆಲ್ಲಾ ಈಗ ಕಂಡುಂಡ ದೈತ್ಯರು. ಅವರ ವ್ಯಕ್ತಿತ್ವವನ್ನು ಶುಭ್ರಗೊಳಿಸಲು ಯಾವ ಮುಲಾಮು ಬಳಸಬೇಕು? ಆರೆಸ್ಸೆಸ್ ವರಿಷ್ಠರು ಹೇಳಿದರು, ''ಸಂಸ್ಕೃತಿಯನ್ನು ಕಟ್ಟುವ ಮೂಲಕ ವ್ಯಕ್ತಿತ್ವಗಳನ್ನು ರೂಪಿಸೋಣ,'' ಎಂದು. ಶುಭಮಸ್ತು, ಆದರೆ ಯಾವುದು ಸಂಸ್ಕೃತಿ ಎಂಬ ಪ್ರಶ್ನೆ ಬರುವುದಿಲ್ಲವೆ? ಭಾರತೀಯ ಸಂಸ್ಕೃತಿಯ ಶೂರ್ಪನಖಾ ಸ್ವರೂಪವನ್ನು ಸರಸಂಘ ಚಾಲಕ ಎಂ. ಎಸ್. ಗೋಲ್ವಾಲ್ಕರ್ ಪರಿಚಯಿಸಿದ್ದು, ಅದು ಅವರ ಸಂಸ್ಕೃತಿಯ ವೈಚಿತ್ರ್ಯವೆಂದು ಪ್ರದಿಪಾದಿಸಿದವರಿದ್ದಾರೆ, ಅದನ್ನು ಸಮರ್ಥಿಸಲು ಗೋಲ್ವಾಲ್ಕರ್ ಅವರ ಕೃತಿಗಳಿಂದ ಆಧಾರಗಳನ್ನು ಕೊಟ್ಟಿದ್ದಾರೆ. ಮಾನ್ಯ ರಾಮ ಮಾಧವ ಅವರು ಸಂಸ್ಕೃತಿಯ ಕವಚ ತೊಡಿಸಿದರೆ ಭ್ರಷ್ಟರನ್ನು ಬದಲಿಸಬಹುದೆಂದು ಪುತ್ತೂರಿನಲ್ಲಿ ಹೇಳಿದ್ದಾರೆ. ಒಂದು ಸಾಮಾನ್ಯ ಹೇಳಿಕೆಯಾಗಿ ಅದು ನಿಜ. ಆದರೆ ದೇಶದ ಜನರನ್ನು ಒಡೆಯುವ, ದ್ವೇಷಿಸುವ, ಸಂವಿಧಾನದತ್ತವಾದ ಹಕ್ಕುಗಳನ್ನು ಕಿತ್ತುಕೊಳ್ಳುವ, ಎಲ್ಲರನ್ನೂ ಒಳಗೊಳ್ಳುವಂತಹ ಕ್ರಿಯೆಗೆ ಇಂಬುಗೊಡದ, ನಡತೆಯು ಸಂಸ್ಕೃತಿ ಎನಿಸಿಕೊಳ್ಳಲು ಯೋಗ್ಯವಲ್ಲ. ಭ್ರಷ್ಟ ಆಚಾರವೆಂದರೆ ಕೇವಲ ಆದರ್ಶ ಡೆವಲಪರ್ಸ್ ಬಳಿ ಹಣ ಪಡೆದುಕೊಳ್ಳುವುದೊಂದೇ ಅಲ್ಲ; ಭ್ರಷ್ಟ ಆಲೋಚನೆಗೆ ಪಕ್ಕಾಗುವುದು ಸಹ ಒಂದು ಭ್ರಷ್ಟ ಆಚಾರವೇ ಆಗುತ್ತದೆ. ನಮ್ಮ ದೇಶದಲ್ಲಿ ಈ ಎರಡೂ ಆಚಾರಗಳ ಮತ್ತು ಅವನ್ನು ಪೋಷಿಸುವ ಆಚಾರ್ಯರುಗಳ ವಿರುದ್ಧವೂ ಎಚ್ಚರ ಅಗತ್ಯ.

* * *

ಬಹುಕೋಟಿ ಹಗರಣದ ನಾಡಿನಲ್ಲಿ ಬಹುಕೋಟಿ ವೆಚ್ಚದಲ್ಲಿ ಮೂರು ದಿನಗಳೂ ವಿಜೃಂಭಣೆಯಿಂದ ನಡೆದ 'ವಿಶ್ವ ಕನ್ನಡ ಸಮ್ಮೇಳನ' ಮುಕ್ತಾಯಗೊಂಡು, ಕನ್ನಡ, ಕನ್ನಡಿಗರು ಯಥಾಸ್ಥಿತಿಗೆ ಮರಳಿದ್ದಾರೆ. ಅದ್ದೂರಿಯ ಈ ಸಮಾರಂಭದಲ್ಲಿ ಉಂಡವನೇ ಜಾಣ. ಹೇಗೂ ಸರಕಾರಿ ಸಮ್ಮೇಳನ ತಾನೆ! ಈ ಸಮ್ಮೇಳನದಿಂದ ಕನ್ನಡಕ್ಕೆ,ಕನ್ನಡಿಗರಿಗೆ ಆದ ಲಾಭವೇನು? ಹೇಳಿಕೊಳ್ಳುವಂಥದ್ದೇನಿಲ್ಲ. ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪನವರು ಹೇಳಿದಂತೆ ಸರಕಾರದಿಂದ ಕನ್ನಡ ಮಾಧ್ಯಮವನ್ನು ಕಡ್ಡಾಯವಾಗಿಸುವ ಸೂಚನೆಯೂ ಬರಲಿಲ್ಲ. ನಡೆದ ಗೋಷ್ಠಿಗಳೆಲ್ಲ ಔಪಚಾರಿಕ. ಈ ಬಾಜಾಬಜಂತ್ರಿಗೆ ಆದ ನೇರ ವೆಚ್ಚ ಮೂವತ್ತೇಳು ಕೋಟಿ ರೂಪಾಯಿಗಳು. ಇತರ ವೆಚ್ಚಗಳು ಸುಮಾರು ಐವತ್ತು ಕೋಟಿ ಎಂದು ಅಂದಾಜು. ಈ ಸಲ ಕಲಾವಿದರಿಗೆ, ಗೋಷ್ಠಿಗಳಲ್ಲಿ ಭಾಗವಹಿಸಿದ್ದವರಿಗೆ ಸ್ವಲ್ಪ ಧಾರಾಳವಾಗಿ ಸಂಭಾವನೆ ನೀಡಿದ್ದೊಂದು ಸಮಾಧಾನದ ಸಂಗತಿ. ಜಾನಪದ ಕಲಾವಿದರನ್ನು ಮಾತ್ರ ರಾತ್ರಿ ೯ ಗಂಟೆಗೆ ರೂಮು ಖಾಲಿ ಮಾಡುವಂತೆ ಒತ್ತಾಯಿಸಿ ಅವರನ್ನು ಬೀದಿಗೆ ತಳ್ಳಿದರು. ಅವರ ಹೆಸರಲ್ಲಿ ಯಾರೋ ಧೂರ್ತರು ಹಣ ನುಂಗಿರುತ್ತಾರೆ. ಅದೂ 'ನಮ್ಮ ಸಂಸ್ಕೃತಿ'ಯ ಭಾಗವೇ ತಾನೆ! ಐದು ವರ್ಷಕ್ಕೊಮ್ಮೆ ಈ ಜಾತ್ರೆ ನಡೆಸಬೇಕೆಂಬುದು ಸರಕಾರದ ಅಪೇಕ್ಷೆ. ಇದು ಬೇಕೆ ಎನ್ನುವುದೇ ಪ್ರಶ್ನೆ ಈಗ.

* * *

ಬೆಳಗಾವಿ ಸರಕಾರಿ ಸಮ್ಮೇಳನದ ಉದ್ಘಾಟಕರು ಮತ್ತು ಮುಖ್ಯ ಅತಿಥಿಗಳ ಬಗ್ಗೆ ಸಾಕಷ್ಟು ವಿವಾದಗಳು ಎದ್ದಿದ್ದುವು. ಕನ್ನಡ ಮಾಧ್ಯಮ ಶಿಕ್ಷಣ ಬೇಡ, ಇಂಗ್ಲಿಷ್ ಮಾಧ್ಯಮ ಬೇಕು ಎನ್ನುವ ಕನ್ನಡ ಉದ್ಯಮಿ ನಾರಾಯಣಮೂರ್ತಿ ವಿವಾದಗಳ ಮಧ್ಯೆಯೇ ಉದ್ಘಾಟನೆ ಮಾಡಿದರು. ಕನ್ನಡ ಬಾರದ ತಾರೆ ಐಶ್ವರ್ಯ ರೈ ಮಂಗಳೂರಿನ ಸಂಜಾತೆ ಎನ್ನುವುದನ್ನು ಬಿಟ್ಟರೆ ಬೇರೇನೂ ಅರ್ಹತೆಯಿಲ್ಲ ಮುಖ್ಯ ಅತಿಥಿಯಾಗಲು. ಇಬ್ಬರ ಮಾತುಗಳೂ ಸಪ್ಪೆ.

ಇನ್ಫೋಸಿಸ್ ಸಂಸ್ಥೆ ಬೆಂಗಳೂರಿನಲ್ಲಿದೆ. ಸ್ಥಾಪಕ ಕನ್ನಡಿಗ. ಆದರೆ ಅವರೇ ಹೇಳಿರುವಂತೆ ಕಳೆದ ಕಾಲು ಶತಮಾನದಲ್ಲಿ ಕಂಪೆನಿಯ ಸುಮಾರು ಎರಡೂವರೆ ಲಕ್ಷ ಸಿಬ್ಬಂದಿಯಲ್ಲಿ ಕನ್ನಡಿಗರ ಪಾಲು ಐವತ್ತೈದು ಸಾವಿರ. ಸಮ್ಮೇಳನದಲ್ಲಿ ಅವರು ಹೊಸ ಉದ್ಯೋಗದ ಭರವಸೆ ಏನೂ ನೀಡಲಿಲ್ಲ ಕನ್ನಡಿಗರಿಗೆ. ಕನ್ನಡ ಮತ್ತು ಕನ್ನಡಿಗರಿಗೆ ಅವರು ನೀಡಿರುವ ಕೊಡುಗೆ ಇತರರಿಗೆ ಹೋಲಿಸಿದರೆ ತೀರಾ ಕಡಿಮೆ. ಆದರೆ ಕನ್ನಡದ ನೆಲದಿಂದ ಅವರು ಪಡೆದುಕೊಂಡಿರುವುದು ನೂರಾರು ಪಟ್ಟು. ತೆರಿಗೆ ರಿಯಾಯಿತಿಗಳನ್ನು ಅನುಭವಿಸಿದ ಈ ಉದ್ಯಮ ಬೇಕಾದಷ್ಟು ಭೂಮಿಯನ್ನು ಅಗ್ಗದ ಬೆಲೆಯಲ್ಲಿ ಕಬಳಿಸಿದೆ. ಮೈಸೂರಿನಲ್ಲಿ ೩೧೫ ಎಕರೆ ಭೂಮಿಯನ್ನು ಹೊಂದಿದೆ. ಮಂಗಳೂರಿನಲ್ಲಿ ಸುಮಾರು ಒಂದು ಸಾವಿರ ಎಕರೆ ಭೂಮಿಯನ್ನು ಪಡೆದಿದೆ. ಇಲೆಕ್ಟ್ರಾನಿಕ್ಸ್ ಸಿಟಿಯಲ್ಲಿರುವ ಇನ್ಫೋಸಿಸ್ ಸಂಸ್ಥೆ ೭೯ ಎಕರೆ ಪ್ರದೇಶದಲ್ಲಿ ಹರಡಿಕೊಂಡಿದೆ. ಬೆಂಗಳೂರಿನ ಹೊರವಲಯದಲ್ಲಿರುವ ಸರ್ಜಾಪುರದಲ್ಲಿ ೮೪೫ ಎಕರೆ ಜಮೀನಿಗಾಗಿ ಲಾಬಿ ನಡೆಸುತ್ತಿದೆ. ಎಲ್ಲ ನಾರಾಯಣ ಮಹಿಮೆ.

* * *

ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಸದಸ್ಯರ ಪೈಕಿ ಅತಿ ಹೆಚ್ಚು 'ವೀಟೋ' ಹಕ್ಕು ಚಲಾಯಿಸಿರುವ ದೇಶ ಅಮೆರಿಕ. ಕಳೆದ ಹತ್ತು ವರ್ಷಗಳಲ್ಲಿ ಅದು ಶೇಕಡ ೭೦ರಷ್ಟು ವೀಟೋ ಅನ್ನು ಇಸ್ರೇಲಿನ ಪರವಾಗಿ ಮಾಡಿದೆ. ಸಾಮಾನ್ಯವಾಗಿ ಅಮೆರಿಕಕ್ಕೆ ಯಾವತ್ತೂ ಅದರ ಮಿತ್ರ ರಾಷ್ಟ್ರಗಳ ಬೆಂಬಲ ಇರುತ್ತದೆ. ಈಗ ಹಾಗಿಲ್ಲ. ಇಸ್ರೇಲಿನ ವಿಚಾರದಲ್ಲಿ ಮಿತ್ರರಾಷ್ಟ್ರಗಳು ಅಮೆರಿಕದ ಕೈಬಿಟ್ಟಿವೆ. ಈಚೆಗೆ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಸಭೆಯಲ್ಲಿ ಇಸ್ರೇಲ್ ಅಕ್ರಮವಾಗಿ ಪಶ್ಚಿಮ ದಂಡೆ ಪ್ರದೇಶದಲ್ಲಿ ಎಲ್ಲ ವಿಶ್ವಸಂಸ್ಥೆ ಆದೇಶಗಳನ್ನು ಉಲ್ಲಂಘಿಸಿ ನಿರ್ಮಿಸುತ್ತಿರುವ ಸ್ವಾಸ್ಥ್ಯಗಳ ನಿರ್ಮಾಣವನ್ನು ಖಂಡಿಸುವ ನಿರ್ಣಯ ಚರ್ಚೆಗೆ ಬಂದಿತ್ತು. ಈ ವಿಷಯದಲ್ಲಿ ಸಭೆ ಮುಂದೆ ಬಂದದ್ದು ಸರ್ವಸದಸ್ಯರ ಸಭೆಯಲ್ಲಿ ೧೨೨ ಸದಸ್ಯ ಬೆಂಬಲಿತ, ಅನುಮೋದಿತ ನಿರ್ಣಯ. ಹದಿನೈದು ಮಂದಿ ಸದಸ್ಯರ ಪೈಕಿ ನಿರ್ಣಯವನ್ನು ವಿರೋಧಿಸಿ ತಡೆಹಿಡಿದದ್ದು ಅಮೆರಿಕ ಮಾತ್ರ. ಬ್ರಿಟನ್, ಫ್ರಾನ್ಸ್, ಜರ್ಮನಿಗಳು ಬೆಂಬಲಕ್ಕೆ ಬರದೆ ಅಮೆರಿಕವನ್ನು ಏಕಾಂಗಿಯಾಗಿದುವು. ಸದ್ಯ

ಭಾರತ ಅಮೆರಿಕದ ಜೊತೆ ಕೈಜೋಡಿಸದಿದ್ದುದು ನಮ್ಮ ಪುಣ್ಯ.

* * *

ಅಣುಶಕ್ತಿಯ ಎಲ್ಲ ಅನಿಷ್ಟ ಮುಖಗಳೂ ಜಪಾನಿನಲ್ಲಿ ತೆರೆದುಕೊಂಡಿವೆ. ಅಲ್ಲಿಯ ಅಣುವಿದ್ಯುತ್ ಘಟಕ ಹದ್ದುಮೀರಿ, ಅದನ್ನು ನಿಯಂತ್ರಿಸಲಾರದೆ ಎಲ್ಲ ಕೆಲಸಗಾರರೂ ಜೀವಭಯಕ್ಕೆ ಹೆದರಿ ಓಡಿಬಿಟ್ಟಿದ್ದಾರೆ. ಯಾವ ಸೇನೆ ಅಣುಬಾಂಬು ಹಾಕಿ ಅವರ ಎರಡು ನಗರಗಳನ್ನು, ಅಪಾರ ಜನಸ್ತೋಮವನ್ನು, ಅದರ ಆರ್ಥಿಕತೆಯನ್ನು ಹಾಳುಗೆಡವಿತೋ ಆ ಅಮೆರಿಕಾ ಸೈನ್ಯದ ಮೊರೆ ಹೋಗಿದ್ದಾರೆ, ಬನ್ನಿ ಈ ಭಸ್ಮಾಸುರನನ್ನು ಹತ್ತಿಕ್ಕಿ ಎಂದು. ಅವರಿಂದಲೂ ಅದು ಸಾಧ್ಯವಾಗುವುದು ಅಸಂಭವ. ಕಾರಣ ಈ ತಂತ್ರಜ್ಞಾನದ ಪರಿಮಿತಿ ಅಂಥದು. – ಒಳಗೆ ಹೋಗಲು ತಿಳಿದಿದೆಯೇ ವಿನಾ ಕ್ಷೇಮವಾಗಿ ಹಿಂತಿರುಗಿ ಬರುವುದು ಹೇಗೆ ಎಂದು ತಿಳಿಯದಂತೆ ಆಗಿದೆ ಈ ವ್ಯೂಹ. ಯೂರೋಪಿನ ಇಂಧನ ಶಕ್ತಿ ಕಮಿಷನರ್ ಅಣುಶಕ್ತಿ ಇಲ್ಲದ ಭವಿಷ್ಯದ ತಯಾರಿ ನಡೆಸಲು ಪ್ರಾರಂಭಮಾಡಬೇಕೆಂದು ಕರೆ ನೀಡಿದ್ದಾರೆ. ಅಮೆರಿಕದಲ್ಲಿ ಆಂತರಿಕವಾಗಿ ಅಣುಶಕ್ತಿಯನ್ನು ವಿಸ್ತರಿಸುವ ಬಗ್ಗೆ ಪುನರ್ ವಿಮರ್ಶೆ ನಡೆಯುತ್ತಿದೆ. ಇವರು ಯಾರಿಗೂ ನಮ್ಮ ದೇಶಕ್ಕೆ ನಮ್ಮ ಪ್ರಧಾನಿ ವ್ಯಾಪಾರ ಮಾಡಿರುವ ಅಣು ರಿಯಾಕ್ಟರ್‌ಗಳನ್ನು ಪೂರೈಸಲು ಆಗದಿರಲಿ ಎಂದು ಆಶಿಸೋಣ. ಇಲ್ಲದಿದ್ದರೆ ಅವರೆಲ್ಲ ನಮ್ಮ ಭೂಮಿಯನ್ನು ತಮ್ಮ ಪ್ರಾಯೋಗಿಕ ಕ್ಷೇತ್ರವಾಗಿ ಮಾಡಿಕೊಂಡಾರು.

ಕಲ್ಲಿದ್ದಲಿನ ಗಣಿಯೊಂದರಲ್ಲಿ ಅಮೆರಿಕದಲ್ಲಿ ಭಯಂಕರ ಅಕಸ್ಮಿಕವಾಗಿ, ಅಪಾರ ನಷ್ಟವಾಗಿ ಅದರ ಕ್ಷೇಮದ ಬಗ್ಗೆ ಇನ್ನೂ ತಲೆ ತುರಿಸಿಕೊಳ್ಳುತ್ತಿದ್ದಾರೆ. ಫ್ಲಾರಿಡಾ ಸಮುದ್ರದಲ್ಲಿ ಬಿಪಿ – ಬ್ರಿಟಿಷ್ ಪೆಟ್ರೋಲಿಯಂ –ಥಳಿದೆ, ಯಾವ ಕಂಪನಿಯನ್ನು, ಸ್ವಾವಲಂಬನೆಯ ಮೊದಲ ಹೆಜ್ಜೆಯಾಗಿ ಕೆ. ಡಿ. ಮಾಳವೀಯರು ದೇಶಬಿಟ್ಟು ಉಚ್ಚಾಟಿಸಿದ್ದರೋ, ಯಾವ ಕಂಪನಿ ಈಗ ರಿಲೈಯನ್ಸ್ ಮೂಲಕ ಮತ್ತೊಮ್ಮೆ ದೇಶವನ್ನು ಜಯಭೇರಿ ಬಾರಿಸುತ್ತಾ ದೊಡ್ಡ ಪ್ರಮಾಣದಲ್ಲಿ ಮರು ಪ್ರವೇಶ ಮಾಡುತ್ತಿದೆಯೋ – ಅದೇ ಬಿಪಿ – ಫ್ಲಾರಿಡಾ ಸಮುದ್ರದಲ್ಲಿ ಕ್ಷೇಮದ ತಂತ್ರಗಾರಿಕೆಯಲ್ಲಿ ಹೆಚ್ಚು ವೆಚ್ಚಮಾಡದೆ, ಬೇಜವಾಬ್ದಾರಿಯಿಂದ ಹಣ ಉಳಿಸಹೋಗಿ ಜಗತ್ತಿನ ಒಂದು ದೊಡ್ಡ ಪೆಟ್ರೋಲ್ ದುರಂತ ಮಾಡಿದೆ. ಆ ಪ್ರಸಂಗ ಇನ್ನೂ ಮುಗಿದಿಲ್ಲ. ಈಗ ಈ ಎರಡು ಇಂಧನ ಮೂಲಗಳ ವಿಶ್ವಾಸಾರ್ಹತೆಯ ಬಗ್ಗೆ ಪ್ರಶ್ನೆ ಎದ್ದಿರುವಾಗ, ಜಪಾನಿನ ಅಣು ದುರಂತ, ಜಗತ್ತಿನ ಇಂಧನದ ಭವಿಷ್ಯದ ಬಗ್ಗೆ ದೊಡ್ಡ ಪ್ರಶ್ನೆಯನ್ನೇ ಎತ್ತಿದೆ. ಪೆಟ್ರೋಲ್ ಖಾಲಿಯಾಗುತ್ತ ಕಲ್ಲಿದ್ದಲು ಪರಿಸರ ವಿರೋಧೀ ಎನ್ನುತ್ತ, ಅಣುಶಕ್ತಿ ಪರಿಸರ ಸ್ನೇಹಿ ಎನ್ನುತ್ತಾ, ಅಣುಶಕ್ತಿ ಪರ ವಾಣಿಜ್ಯದ ಪರಿಸರವಾದಿಗಳ ತಲೆಕೆಡಿಸುತ್ತಿದ್ದಂತೆಯೇ, ಅದು ನಿಜವಲ್ಲ ಎನ್ನುವ ಪ್ರಶ್ನೆ ಉದ್ಭವಿಸಿದೆ. ಇವಕ್ಕೆಲ್ಲಾ ಉತ್ತರ ಹುಡುಕಬೇಕು. ಯಾವುದೇ ತಾತ್ಕಾಲಿಕ ತುರ್ತು ತೀರ್ಮಾನಗಳೂ ದುರಂತಕ್ಕೀಡಾಗುತ್ತವೆ. ಸ್ವಲ್ಪ ತಾಳ್ಮೆಯಿಂದ, ಜಗತ್ತಿನ ಎಲ್ಲರೂ ಕೂಡಿ ಚರ್ಚಿಸಲಿ.

ಸುನಾಮಿಗಳು, ಪ್ರವಾಹಗಳು, ಮಳೆಯಿಲ್ಲದೆ ಕ್ಷಾಮ ಡಾಮರಗಳು, ಅಗ್ನಿಪರ್ವತಗಳು, ಭೂಕಂಪನಗಳು ಈ ಪ್ರಾಕೃತಿಕ ವಿಕೋಪಗಳು ಯಾವುದಕ್ಕೂ ನಮ್ಮಲ್ಲಿ ಇಲ್ಲಿಯವರೆಗೂ ನಿರ್ಣಾಯಕ ಪರಿಹಾರಗಳು ದೊರೆತಿಲ್ಲ. ಎಲ್ಲ ಪ್ರಯತ್ನಗಳೂ ತಾತ್ಕಾಲಿಕ, ಸರಿಯಲ್ಲದವು ಎನಿಸಿಬಿಟ್ಟಿವೆ. ಒಂದು ಸ್ವಾರಸ್ಯ ಸಂಗತಿ ಎಂದರೆ ಮೇಲಿನ ಯಾವುದೇ ಪ್ರಾಕೃತಿಕ ವಿಕೋಪಗಳೂ ಜಗತ್ತನ್ನೇ ಶಾಶ್ವತವಾಗಿ ನಾಶಮಾಡುವಂಥವಾಗಿಲ್ಲ. ತತ್ಕಾಲಿಕವಾಗ ತ್ರಾಸ ನೀಡಿದ್ದರೂ, ಬಹುಕಾಲೀನವಾಗಿ, ಭೂಮಿಯನ್ನು ಫಲವತ್ತಾಗಿಸಿವೆ, ಪ್ರಯೋಜನಕಾರಿ ಪರಿಣಾಮಗಳನ್ನೇ ಮಾಡಿವೆ; ಜೀವಸ್ನೇಹಿಯೇ ಎನ್ನುವ ಅನುಭವ ನೀಡಿವೆ. ಆದೇ ಮನುಷ್ಯ ನಿರ್ಮಿತ ಅಣುಶಕ್ತಿಗೆ ವಾತಾವರಣವನ್ನು ಕಲ್ಲಿದ್ದಲಿನ ಹೊಗೆಯಂತೆ ಜಾಗತಿಕ ತಾಪಮಾನವನ್ನು ಹೆಚ್ಚಿಸುವ ಗುಣವಿಲ್ಲ ಎನ್ನಲಾಗಿದೆ. ಆದರೆ ಅದರ ವಿಕಿರಣ – ಸಹಸ್ರಾರು ವರ್ಷಗಳಾದರೂ ನಿಲ್ಲದ ಭಯಂಕರ ಸ್ವರೂಪದ್ದು – ಭೂಗರ್ಭದ ಕೇಂದ್ರಕ್ಕೇ ಒಯ್ದು ಹೂಳಬೇಕಾದ ತ್ಯಾಜ್ಯಗಳನ್ನು ನೀಡುವ ಈ ಶಕ್ತಿಮೂಲ ಅದು ಹೇಗೆ ಪರಿಸರ ಸ್ನೇಹಿಯಾಗಲು ಸಾಧ್ಯ? ಒಂದು ಅಣುವಿದ್ಯುತ್ ಘಟಕ ೩೦ರಿಂದ ೪೦ ವರ್ಷ ಆಯುಸ್ಸಿದೆ ಎಂದಾಗ, ಅದು ಕೆಟ್ಟು ತರಲೆಮಾಡುವ ಕಾಲಕ್ಕೆ ಅದನ್ನು ಹುಟ್ಟುಹಾಕಿದವರು, ಅದರ ಪ್ರಯೋಜನ ಪಡೆದವರು ಬದುಕುಳಿದಿರುವುದಿಲ್ಲ, ಮುಂದಿನ ಪೀಳಿಗೆಯ ಬಗ್ಗೆ ನಮಗೇಕೆ ಚಿಂತೆ ಎಂಬಂತಲ್ಲವೆ ಈ ಎಲ್ಲ ವಾದಗಳು ?

ಈ ಕುರಿತ ಎಲ್ಲ ಪ್ರಚಾರಗಳೂ ಅಣುಶಕ್ತಿಯ ಖಾಸಗಿ ಉದ್ಯಮಗಳ ಹುನ್ನಾರ. ಜಪಾನಿನ ಖಾಸಗಿ ಅಣುಶಕ್ತಿಯ ಖಾಸಗಿ ಉದ್ಯಮಗಳು ಅವರ ಸರ್ಕಾರದ ಅಂಕೆಗೇ ಸಿಗದೆ, ಹಿಂದಿನ ದುರಂತಗಳನ್ನೆಲ್ಲ ಮುಚ್ಚಿಟ್ಟಿವೆ, ಈಗಲೂ ಇದನ್ನು ಬರೆಯುವವೇಳೆಗೆ, ಅದರ ಕಾರ್ಮಿಕರೆಲ್ಲಾ ಓಡಿಹೋದ ಮೇಲೆಯೇ ಗುಟ್ಟುಗಳು ಹೊರಬರುತ್ತಿರುವುದು. ಭಾರತದ ಅಣುಶಕ್ತಿ ಲಾಬಿ ನಮಗೆ ನಿಜ ಹೇಳುತ್ತಿದೆ ಎನ್ನಲು ಯಾವ ಆಧಾರವೂ ಇಲ್ಲ. ಜನತೆ ತಮ್ಮ ಸರ್ಕಾರಗಳ ವಿರುದ್ಧ ಅಷ್ಟೊಂದು ಅಶಕ್ತರೆ ? ಎಣ್ಣೆ ದೀಪದಲ್ಲಿ ಓದಿದರೆ ಜ್ಞಾನ ದೊರೆಯದೆ ? ಎಲ್ಲವೂ ಒಂದಿಷ್ಟು ಮಂದಗತಿಯಲ್ಲಿ ನಡೆದರೆ ಒಳ್ಳೆಯದಲ್ಲವೆ? ಎಲ್ಲರಿಗೂ ಕನಿಷ್ಠ ಜೀವನಾವಕಾಶ ದೊರಕಿದರೆ ಸಾಕಲ್ಲವೆ ಸುಖೀರಾಜ್ಯಕ್ಕೆ ?

* * *

ಭಾರತಕ್ಕೆ ಶಸ್ತ್ರಾಸ್ತ್ರ ಆಮದುಮಾಡಿಕೊಳ್ಳುವಲ್ಲಿ ಜಗತ್ತಿನಲ್ಲೇ ಮೊದಲ ಸ್ಥಾನ! ಜಗತ್ತಿನ ಈ ವ್ಯಾಪಾರದಲ್ಲಿ ನಮ್ಮದು ೯%. ಚೀನಾ ಮತ್ತು ದಕ್ಷಿಣ ಕೊರಿಯ ಎರಡಕ್ಕೂ ೬% ಮಟ್ಟದಲ್ಲಿ ಎರಡನೇ ಸ್ಥಾನ. ಪಾಕಿಸ್ತಾನ ೫%ರ ಮಟ್ಟದಲ್ಲಿ ಮೂರನೇ ಸ್ಥಾನ. ಸಾಕೋ ಇಷ್ಟು ಮಾಹಿತಿ ಮುಂದಿನ ಮಹಾಯುದ್ಧ ಎಲ್ಲಿ ಅನ್ನುವುದಕ್ಕೆ ? ಈ ಮೂರೂ ಅಭಿವೃದ್ಧಿಶೀಲ ರಾಷ್ಟ್ರಗಳ ಅರ್ಥವ್ಯವಸ್ಥೆಯಾಗಿದ್ದ ಅಂಥದೊಂದು ಯುದ್ಧದಲ್ಲಿ ನೆಲಸಮ ಆದರೆ ಪಶ್ಚಿಮದ ದೇಶಗಳಿಗೆ ಅದೆಷ್ಟು ಸಂತೋಷ ಆಗಬೇಡ ? ನಮಗೆ ಎಂದು ಬುದ್ಧಿ ಬರುವುದು ? ಮುಂದಿನ ಮಹಾ ಯುದ್ಧ ಪಶ್ಚಿಮಕ್ಕೆ ಬೇಕೇಬೇಕು ಅದರ ಬಂಡವಾಳ ವ್ಯವಸ್ಥೆ ಬದುಕಬೇಕಾದರೆ... ಆದರೆ ಅದು ಇದನ್ನು ಯೂರೋಪಿನಲ್ಲಿ ಆಗಲು ಬಿಡುವುದಿಲ್ಲ, ನಾವೂ, ಅರಬರೂ ಸೇರಿ ಅವರಿಗೆ ರಣರಂಗ ನಿರ್ಮಿಸಿಕೊಡಬೇಕು ಎನ್ನುವುದು ಅವರ ಹುನ್ನಾರ. ನಮ್ಮ ಸರ್ಕಾರಗಳಿಗೂ ಈ ಕುರಿತು ವಿವೇಕವಿದ್ದಂತೆ ತೋರುವುದಿಲ್ಲ. ಜನತೆ ಎಚ್ಚೆತ್ತು ಅವರ ಸರ್ಕಾರಗಳನ್ನು ನಿಯಂತ್ರಿಸಬೇಕು. ನಮ್ಮ ವಿತ್ತ ಮಂತ್ರಿ ಈ ಸಾರಿ ಬಜೆಟ್‌ನಲ್ಲಿ ರಕ್ಷಣಾ ವೆಚ್ಚವನ್ನು ೪೦%ರಷ್ಟು ಹೆಚ್ಚಿಸಿದ್ದಾರೆ ! ನಮ್ಮ ಶಾಂತಿ ಚಳುವಳಿಗಳು ಕಾರ್ಯಶೀಲವಾಗಬೇಕು. ನಮ್ಮ ಈ ರಾಷ್ಟ್ರಗಳ ನಡುವೆ ಅಪರಿಹಾರ್ಯವಾದ ಸಮಸ್ಯೆಗಳು ಇಲ್ಲ. ನಮಗಾಗದವರು ನಮ್ಮ ನಡುವೆ ಜಗಳ ಹುಟ್ಟಿಸುತ್ತಿದ್ದಾರೆ. ನಮ್ಮ ಮಧ್ಯೆ ಇತಿಹಾಸದುದ್ದಕ್ಕೂ ಸ್ನೇಹವೇ ಇದ್ದದ್ದು... ಸಾಮ್ರಾಜ್ಯಶಾಹಿಗಳು ಮಧ್ಯೆ ಪ್ರವೇಶಿಸುವುದಕ್ಕೆ ಮುಂಚೆ. ನಮ್ಮ ಬಂಡವಳಿಗರೂ ಅಂಥದೊಂದು ಯುದ್ಧದಿಂದ ಲಾಭವಾಗುವುದು ಎಂಬ ಭ್ರಮೆ ಬೇಡವೆಂದು ತಿಳಿಸಿಹೇಳಬೇಕು.

* * *

ವಿಜಿಲೆನ್ಸ್ ಕಮಿಶನರ್ ಅವರನ್ನು ಆರಿಸಿದ್ದರಲ್ಲಿ ತಮ್ಮದು 'ಎರರ್ ಆಫ್ ಜಡ್ಜ್‌ಮೆಂಟ್' ಅಂತ ಹೇಳಿದ್ದಾರೆ ನಮ್ಮ ಪ್ರಧಾನಿ. ಆದರೆ ಸರ್ವೋಚ್ಚ ನ್ಯಾಯಾಲಯಕ್ಕೆ ಹಾಗನಿಸಲಿಲ್ಲ. ಅದು ಅವರು ತಿಳಿದೂ ತಿಳಿದೂ ಮಾಡಿದ ಬೇಜವಾಬ್ದಾರಿಯ ತಪ್ಪು ಎಂದಿದೆ. ಹೀಗೆ ನ್ಯಾಯಾಲಯದ ತೀರ್ಪನ್ನು ಅರ್ಥೈಸುವುದರಲ್ಲಿ ಪುನಃ ಪ್ರಧಾನಿಯವರು 'ಎರರ್ ಆಫ್ ಅಂಡರ್‌ಸ್ಟಾಂಡಿಂಗ್ ದಿ ಜಡ್ಜ್ಮೆಂಟ್' ಮಾಡಿದಂತಾಯಿತು. ಅದಿರಲಿ. ಪುನಃ ಪುನಃ ಈ ರೀತಿ ತಪ್ಪು ಮಾಡಿದರೂ, ನಮ್ಮ ಎರಡೂ ಮುಖ್ಯ ಪಕ್ಷಗಳಿಗೂ ಅವರು ಪ್ರತಿನಿಧಿಸುವ ಹಿತಾಸಕ್ತಿಗಳು ಒಂದೇ ಆಗಿರುವುದರಿಂದ, ಆ ಹಿತಾಸಕ್ತಿಗಳ ಕಿಂಕರ ನಮ್ಮ ಪ್ರಧಾನಿ ಇಷ್ಟವಾಗಿರುವುದು ಆಶ್ಚರ್ಯವೇನೂ ಅಲ್ಲ. ಅವರು ತುಂಬ ಅದೃಷ್ಟ ಶಾಲಿ. ಎಂಥ ತಪ್ಪು ಮಾಡಿದರೂ ರಾಜೀನಾಮೆ ಕೊಡಬೇಕಾಗಿಲ್ಲ! ಪ್ರಜೆಗಳ ದುರದೃಷ್ಟ ಇನ್ನೂ ಮುಂದುವರಿದಿದೆ ಅಷ್ಟೇ. ಆದರೆ ಕಾನೂನನ್ನು ಕೋರ್ಟು ಬದಲಾಯಿಸಲಾಗುವುದಿಲ್ಲ ಎನ್ನುವ ನಮ್ಮ ಕಾನೂನು ಮಂತ್ರಿಗೆ ಏನು ಹೇಳಬೇಕು ? ಆ ಕಾನೂನು ಮತ್ತು ಯಾವುದೇ ಸರ್ಕಾರದ ನಡವಳಿಕೆಗಳು ರಾಜ್ಯಾಂಗ ಬದ್ಧವಾಗಿಲ್ಲದಿದ್ದರೆ ಅವನ್ನು ತೆಗೆದುಹಾಕುವ ಹಕ್ಕು ಕೋರ್ಟಿಗೆ ಇದೆ ತಾನೇ ? ಇಂತಹ ನ್ಯಾಯಾಂಗ ಮಂತ್ರಿ ಸಂಪುಟಕ್ಕೆ ಸರಿಯಾದ ಸಲಹೆ ನೀಡುವುದು ಹೇಗೆ ಸಾಧ್ಯ ? ಆಡಳಿತಾತ್ಮಕ ಭ್ರಷ್ಟಾಚಾರ ನಿಲ್ಲುವುದು ಹೇಗೆ ಸಾಧ್ಯ?

* * *

''ಮೊದಲು ಮನೆ ಮತ್ತು ಮಕ್ಕಳನ್ನು ನೋಡಿಕೊಂಡು ಮನೆಯಲ್ಲಿರಿ. ಇದು ನಿಮ್ಮ ನೈತಿಕ ಜವಾಬ್ದಾರಿ. ಇದೇ ನಮ್ಮ ಸಂಸ್ಕೃತಿ.'' - ಮಹಿಳಾ ದಿನಾಚರಣೆಯು ನೂರು ವರ್ಷ ತಲುಪಿದ್ದರೂ ಮಹಿಳೆಯ ಸ್ಥಿತಿ ಇದ್ದಲ್ಲೇ ಇದೆ ಎನ್ನುವುದನ್ನು ಸೂಚಿಸುವುದರ ಸ್ಪಷ್ಟ ನಿದರ್ಶನ ಈ ಮಾತುಗಳು. ಹಿಂದೆ 1990ರಲ್ಲಿ ಸುಪ್ರೀಂಕೋರ್ಟಿನ ನ್ಯಾಯಾಧೀಶರಾಗಿದ್ದ ರಂಗನಾಥ ಮಿಶ್ರರು ಸಾರ್ವಜನಿಕ ಸಭೆಯಲ್ಲಿ ಅಪ್ಪಣೆ ಕೊಡಿಸಿದ್ದರು: ಕಛೇರಿಗಳಲ್ಲಿ ಕೆಲಸ ಮಾಡುವುದನ್ನು ನಿಲ್ಲಿಸಿ, ಮನೆಗೆ ಮರಳಿ, ಮಹಿಳೆಯ ಸ್ಥಾನ ಮನೆಯಲ್ಲಿ, ಎಂದು. ಅದೇ ಧ್ವನಿಯ ಈ ಮಾತುಗಳನ್ನು ಈಗ ಆಡಿರುವವರು ಕೋಮುವಾದಿ ಬಾಳ ಠಾಕ್ರೆಯ ಶಿವಸೇನೆ ಮೂಲದಿಂದ ಬಂದಿದ್ದು ಈಗ ಕಾಂಗ್ರೆಸ್ ಪಕ್ಷ ಸೇರಿ ಮಂತ್ರಿಯಾಗಿರುವ ಮಹಾರಾಷ್ಟ್ರದ ಉದ್ದಿಮೆ ಸಚಿವರಾದ ನಾರಾಯಣ ರಾಣೆಯವರು. 'ಮೀಸಲಾತಿ ಏಕೆ? ಮಹಿಳೆಯರೆಲ್ಲಾ ತಮ್ಮ ಸಾಮರ್ಥ್ಯದಿಂದಲೆ ಅಧಿಕಾರಕ್ಕೆ ಬರಬೇಕು' ಎಂದು ಕರೆ ನೀಡುವ ಮೂಲಕ ತಮ್ಮ ಪೂರ್ವಾಶ್ರಮದ ಮತ್ತು ಈಗಿನ ಪಕ್ಷಗಳ ಒಳಗಿರುವ ಪುರುಷಶಾಹಿಯನ್ನು ಅವರು ಹೊರಗೆಡಹಿದ್ದಾರೆ.

ಇಂದು ದೇಶದಲ್ಲಿ ಭ್ರಷ್ಟಾಚಾರ, ವಂಚನೆ, ಕ್ರೌರ್ಯಗಳು ತಾಂಡವವಾಡಿ ಪರಿಸರ ಪೂರ್ತಿ ಗಬ್ಬಾಗಿರುವಾಗ, ಅದನ್ನು ಶುಚಿ ಮಾಡುವ, ಸಂರಕ್ಷಿಸುವ ಜವಾಬ್ದಾರಿ ಹೆಣ್ಣಿನದು ಮಾತ್ರ, ಎಂದು ಈತನು ಭ್ರಮಿಸಿದಂತಿದೆ. 'ಇ'ಕಾರಾಂತವಾಗಿರುವ ಸಂಸ್ಕೃತಿ ಎನ್ನುವ ಶಬ್ದವನ್ನು ಮಹಿಳೆಯರಿಗೇ ಅಂಟಿಸಿ, ತಾವು ಮಾತ್ರ ಸಂಸ್ಕೃತಿಗೆ ನೈತಿಕ ಪೊಲೀಸ್‌ಗಿರಿ ನಡೆಸೋಣವೆಂಬ ಆಲೋಚನೆ ಸಚಿವರದಿರಬೇಕು. ಮಹಿಳೆಯರನ್ನು ರಾಜಕೀಯದಿಂದ ದೂರ ಸರಿಸಿದರೆ ಅವರ ಸ್ಥಾನಗಳು ತಮಗೆ ಸಿಕ್ಕುತ್ತವೆ ಮತ್ತು ಮಹಿಳೆಯರು ಗೃಹದಲ್ಲಿ

ಬಂಧಿಯಾಗಿದ್ದರೆ, ತಾವು ನಿರಾತಂಕವಾಗಿ ಸಾರ್ವಜನಿಕ ಲೋಕವನ್ನು ಮತ್ತಷ್ಟು ರಾಡಿ ಮಾಡಲು ಸಮಯ ಮತ್ತು ಅವಕಾಶ ಸಿಕ್ಕುತ್ತದೆ. ಇಂಥ ಒಂದು ಕಲ್ಲಿನಲ್ಲಿ ಎರಡು ಹಣ್ಣು ಉದುರಿಸುವ ದಿವ್ಯ ಆಲೋಚನೆ ಈ ಸಚಿವರದು ! ಈತನಾಡಿರುವ ಮಾತುಗಳ ಅರ್ಥವನ್ನು ಅಂಥವೇ ಬೇರೆ ಮಾತುಗಳಲ್ಲಿ ನಮ್ಮ ಮುಂದೆ ಇನ್ನೂ ಎಷ್ಟೋ ಖದೀಮರು ಆಗಾಗ್ಗೆ ನಿವೇದಿಸುತ್ತಿರುತ್ತಾರೆ. ಅಭ್ಯಾಸ ಬಲದಿಂದ ಇವರನ್ನೆಲ್ಲ ಕೋಡಂಗಿಗಳು ಎಂದು ಉಪೇಕ್ಷಿಸುತ್ತೇವೆ.

ಈ ಸಭೆಗೆ ಮುಖ್ಯ ಅತಿಥಿಯಾಗಿದ್ದವರು ಉತ್ತರಾಖಂಡ್‌ನ ರಾಜ್ಯಪಾಲರಾದ ಮಾರ್ಗರೇಟ್ ಆಳ್ವ ಅವರು ಎನ್ನುವುದೊಂದು ವಿಪರ್ಯಾಸ. ಅವರು ಈ ಮಾತಿಗೆ ಹೇಗೆ ಸ್ಪಂದಿಸಿರಬಹುದು? ಇದು ಪತ್ರಿಕೆಗಳಲ್ಲಿ ವರದಿಯಾಗಿಲ್ಲ.

* * *

**ಎಂಥ ನಾಚಿಕೆ !**

ಕೇರಳದ ಮುಖ್ಯಮಂತ್ರಿ ಕಾಮ್ರೇಡ್ ಅಚ್ಯುತಾನಂದನ್ ಈ ಬಾರಿ ಚುನಾವಣೆಯಲ್ಲಿ ಸ್ಪರ್ಧಿಯಲ್ಲ, ಪಕ್ಷವು ಅವರನ್ನು ಅಭ್ಯರ್ಥಿಯನ್ನಾಗಿಸಲು ನಿರಾಕರಿಸಿದೆ, ಎಂದು ಮೊದಲ ವರದಿಗಳು ತಿಳಿಸಿದ್ದವು. ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದ ಧೀಮಂತರ ನಾಯಕತ್ವದ ಛಾಯೆ ಇದರಲ್ಲಿ ದಟ್ಟವಾಗಿದೆಯಂತೆ. ಅಥವಾ ಪಿಂಡರಾಯಿ ವಿಜಯನ್‌ರ ಕರಾಮತ್ತೋ ? ನಾಳೆ ಚುನಾವಣೆಯಲ್ಲಿ ಸೋತಾಗ ಗೂಬೆ ಕೂರಿಸಲು ಅಚ್ಯುತಾನಂದನ್ ಭುಜಗಳು ಬೇಕಾಗುತ್ತವೆಂಬ ಒಬ್ಬ ಕಟ್ಟಾ ಕಮ್ಯುನಿಸ್ಟನ ಟೀಕೆ ಕೇವಲ ಕುಹಕವೆನ್ನಬಹುದೆ ? ಇದಕ್ಕೆ ದೆಹಲಿಯ ಪಾಲಿಟ್‌ಬ್ಯೂರೋ ಔಷಧಿಯ ಗುಳಿಗೆ ನೀಡಿ ಅಚ್ಯುತಾನಂದನ್‌ರವರನ್ನು ಅಭ್ಯರ್ಥಿಯಾಗಿ ಆಯ್ಕೆ ಮಾಡಿದೆಯಂತೆ. ಇಷ್ಟು ಗೊಂದಲ ಬೇಕಿತ್ತೆ ?

* * *

ಶಾಲಾ ಇತಿಹಾಸ ಪಠ್ಯಪುಸ್ತಕಗಳಲ್ಲಿ ಹಿಂದೆ 'ಗುಲಾಮಿ ಸಂತತಿ' ಎಂಬ ಅಧ್ಯಾಯವಿರುತ್ತಿತ್ತು. ಈಗಲೂ ಇವೆಯೋ ಇಲ್ಲವೋ ಗೊತ್ತಿಲ್ಲ. ಆದರೆ ಮನಮೋಹನ ಸಿಂಗ್ ಸರ್ಕಾರವು ಆ ನಾಮಧೇಯಕ್ಕೆ ಯೋಗ್ಯವಾಗಿದೆ. ಅಮೆರಿಕಾ ದೂತಾವಾಸವು ಈಗ ಕೆಲವು ವರ್ಷಗಳಲ್ಲಿ ದೆಹಲಿಯಿಂದ ವಾಷಿಂಗ್‌ಟನ್ನಿಗೆ ಕಳಿಸಿದ್ದ ಅನೇಕ ಸಂದೇಶಗಳನ್ನು ವಿಕಿಲೀಕ್ಸ್ ಬಹಿರಂಗಗೊಳಿಸಿದೆ. ಅದರಲ್ಲಿ ಹೊಸದೇನೂ ಇಲ್ಲ. ಸಂದೇಶ ಕಳಿಸಿದವರು ಸಿ.ಐ.ಎ. ಪ್ರತಿನಿಧಿಗಳೂ ಆಗಿದ್ದಿರಬಹುದು. ಆ ವ್ಯವಹಾರಗಳನ್ನು ನೋಡಿದರೆ ಸಿಂಗ್ ಸರ್ಕಾರವು ಅಮೆರಿಕಾದ ಗುಲಾಮಿ ಸಂತತಿಯೆಂಬ ಭಾವನೆ ಬಂದು ಅಸಹ್ಯವೆನಿಸುತ್ತದೆ. ಪಾಕಿಸ್ತಾನದಲ್ಲಿ ಮೊನ್ನೆ ಮೊನ್ನೆ ಹಂತಕ ಡೇವಿಸ್ ಬಿಡುಗಡೆಯಾಯಿತಲ್ಲ, ಹೇಗೆ ? ಅವನು ಎಲ್ಲರಿಗೂ ತಿಳಿದಂತೆ ಸಿ.ಐ.ಎ. ಪ್ರತಿನಿಧಿ. ಅವನನ್ನು ಬಿಡದಿದ್ದರೆ ಬಾಂಬು ಹಾಕುತ್ತೇವೆಂಬ ಬೆದರಿಕೆ ಹಾಕಿ ಒಂದಷ್ಟು ಹಣ ಸುರಿದು ಅವನನ್ನು ಅಮೆರಿಕಾ ಬಿಡುಗಡೆ ಮಾಡಿಸಿಕೊಂಡಿದೆ. ಅಲ್ಲೂ ಒಂದು ಗುಲಾಮಿ ಸಂತತಿಯ ಸರ್ಕಾರ !

* * *

ಡಾ|| ಭೈರಪ್ಪಾದಿ ವಿದ್ವಾಂಸರು ಸಂಸ್ಕೃತ ವಿಶ್ವವಿದ್ಯಾನಿಲಯದ ಸ್ಥಾಪನೆಯಿಂದ ಏನೆಲ್ಲಾ ಭವ್ಯ ಭವಿಷ್ಯವಿರುತ್ತದೆಂದು ಆಗ್ರಹಿಸಿದ್ದುದು ನೆನಪಿದೆಯೆ ? ಅವರ ಆಶಯ ಕೈಗೂಡಿತು. ವಿಶ್ವವಿದ್ಯಾನಿಲಯದ ಮೊದಲ ಅಪ್ರತಿಮ ಕೊಡುಗೆಗಳಲ್ಲಿ ಒಂದು ಅ-ಆ-ಇ-ಈ ಕಲಿಯುತ್ತಿರುವ ಬಾಲಕ-ಬಾಲಿಕೆಯರಿಗೆ ಪ್ರಥಮ ತರಗತಿಯ ಪರೀಕ್ಷೆ ನಡೆಸಿದ್ದು. ಎಂಥ ಅದೃಷ್ಟಶಾಲಿಗಳಿವರು, ಒಂದು ವಿಶ್ವವಿದ್ಯಾನಿಲಯದಿಂದ ಆ ಪರೀಕ್ಷೆ ಮಾಡಿಸಿಕೊಂಡಿದ್ದಾರೆ ! ಹಿಂದೆ ಅದನ್ನು ಸೆಕೆಂಡರಿ ಎಜುಕೇಶನ್ ಬೋರ್ಡ್ ಮಾಡುತ್ತಿತ್ತು. ಕೆಂಪೇಗೌಡ ನಗರದ ಸರ್ಕಾರಿ ಪ್ರಾಥಮಿಕ ಶಾಲೆಯ ಮಕ್ಕಳು ತಮಗೂ ಒಂದು ವಿಶ್ವವಿದ್ಯಾನಿಲಯವು ಪರೀಕ್ಷೆ ನಡೆಸಬೇಕೆಂದು ಹಠ ಮಾಡಬಾರದೇಕೆ ? ■

## ಹೊಸ ಜನಾದೇಶದತ್ತ

ರಾಜ್ಯದಲ್ಲಿ ಮತ್ತೊಂದು ಚುನಾವಣಾ ಪ್ರಹಸನ ಆರಂಭವಾಗಲಿದೆ. ಚನ್ನಪಟ್ಟಣ, ಬಂಗಾರಪೇಟೆ ಹಾಗೂ ಜಗಳೂರು ವಿಧಾನಸಭಾ ಕ್ಷೇತ್ರಗಳಿಗೆ ಈ ಉಪಚುನಾವಣೆ ನಡೆಯಲಿದೆ. ಈ ಮೂರೂ ಕ್ಷೇತ್ರಗಳಲ್ಲಿ ಸಾಮಾನ್ಯ ರೀತಿಯಲ್ಲಿ ಚುನಾವಣೆ ನಡೆಯುತ್ತಿಲ್ಲ. ಕಾಂಗ್ರೆಸ್ ಮತ್ತು ಜೆ.ಡಿ.ಎಸ್. ಶಾಸಕರು ಬಿ.ಜೆ.ಪಿ.ಯ ಆಪರೇಶನ್ ಕಮಲಕ್ಕೆ ಬಲಿಯಾಗಿ, ಹಣದಾಸೆಗೋ ಮಂತ್ರಿಸ್ಥಾನದ ಆಸೆಗೋ ಬಲಿಬಿದ್ದು ತಮ್ಮ ಶಾಸಕ ಸ್ಥಾನಕ್ಕೆ ರಾಜೀನಾಮೆ ಕೊಟ್ಟು ಬಿ.ಜೆ.ಪಿ ಸೇರಿದ ಕ್ಷೇತ್ರಗಳಿವು. ಕರ್ನಾಟಕದಲ್ಲಿ ಈಗ ಜನಮನ ಗೆದ್ದು ರಾಜಕಾರಣ ಮಾಡುವ ಪರಿಪಾಠ ಹೊರಟು ಹೋಗಿದೆ. ಐದು ವರ್ಷದವರೆಗೆ ತಾವು ಆಯ್ಕೆ ಆಗಿ ಬಂದ ಪಕ್ಷಕ್ಕೆ ನಿಷ್ಠರಾಗಿರಬೇಕೆಂಬ ರಾಜಕೀಯದ ಪ್ರಾಥಮಿಕ ಪಾಠ ಇಂದು ಉಳಿದಿಲ್ಲ. ಇದಕ್ಕೆ ಕಾರಣ ಮತ್ತೆ ಹಣ ಚೆಲ್ಲಿ ನಾವು ಆಯ್ಕೆ ಆಗಿ ಬರಬಹುದೆಂಬ ಆತ್ಮವಿಶ್ವಾಸ. ಅಂದರೆ ಜನರನ್ನು ಸುಲಭವಾಗಿ ಖರೀದಿಸಬಹುದೆಂಬ ನಂಬಿಕೆ. ವಿರೋಧ ಪಕ್ಷಗಳಾದ ಕಾಂಗ್ರೆಸ್ ಮತ್ತು ಜೆ.ಡಿ.ಎಸ್.ಗಳೂ ಸಹ ಚುನಾವಣೆಗಳ ಹಣದ ಚೀಲ ಹಿಡಿದುಕೊಂಡೇ ಇಳಿಯುತ್ತವೆ. 'ಪಕ್ಷಾಂತರ' ಎಂಬುದು ಅಪರಾಧ, ಅನೈತಿಕ ರಾಜಕಾರಣ ಎಂಬುದನ್ನು ಜನರಿಗೆ ಮನದಟ್ಟು ಮಾಡುವಲ್ಲಿ ವಿರೋಧ ಪಕ್ಷಗಳು ಸಂಪೂರ್ಣ ವಿಫಲವಾಗಿವೆ. ಕಾರಣ ಪಕ್ಷಾಂತರ ರಾಜಕಾರಣಕ್ಕೆ ಈ ಮೂರೂ ರಾಜಕೀಯ ಪಕ್ಷಗಳು ಹೊರತಾಗಿಲ್ಲ. ಈ ಮೂರೂ ಪಕ್ಷಗಳಲ್ಲಿರುವ ರಾಜಕಾರಣಿಗಳು ಯಾವ ಸಂದರ್ಭದಲ್ಲಿ, ಯಾವ ಪಕ್ಷದಲ್ಲಿ ಇರುತ್ತಾರೆ ಎಂಬುದನ್ನು ಹೇಳಲಾಗುವುದಿಲ್ಲ. ಹೀಗಾಗಿ ಜನರಿಗೆ ಆಪರೇಶನ್ ಕಮಲ ಎನ್ನುವುದಾಗಲೀ ಪಕ್ಷಾಂತರವಾಗಲೀ ಒಂದು ಅಪರಾಧ, ಅನೈತಿಕ ರಾಜಕಾರಣವಾಗಿ ಕಾಣುತ್ತಿಲ್ಲ. ಹಾಗೇನಾದರೂ ಜನರಲ್ಲಿ ಈ ಪಕ್ಷ ರಾಜಕಾರಣದ ನೀತಿ ಪ್ರಬಲವಾಗಿದ್ದರೆ ಪಕ್ಷಾಂತರಗಳು, ಆಪರೇಶನ್‌ಗಳು ನಡೆದಾಗ ಬೀದಿಗಿಳಿಯುತ್ತಿದ್ದರು. ತಾವು ಅಭಿಮಾನ ಪಡುವ ಪಕ್ಷದಿಂದ ಆರಿಸಿ ಕಳಿಸಿದ್ದರೆ ಹಾದಿಬೀದಿಯಲ್ಲಿ ಪಕ್ಷಾಂತರಿಗಳಿಗೆ ಛೀಮಾರಿ ಹಾಕುತ್ತಿದ್ದರು. ಹೀಗಾಗಿ ಪಕ್ಷಾಭಿಮಾನ ಅಂದರೆ ಒಂದು ರಾಜಕೀಯ ಪಕ್ಷದ ನೀತಿ, ಕಾರ್ಯಕ್ರಮವನ್ನು ಮೆಚ್ಚಿ ಮತದಾನ ಮಾಡಿದ್ದರೆ ಅದು ಜನತೆಗೆ ಪಕ್ಷಾಂತರದಿಂದ ರಾಜಕಾರಣಿಗಳು ಮಾಡುವ ದ್ರೋಹ ಎಂದು ಪರಿಗಣಿತವಾಗುತ್ತಿತ್ತು. ಚುನಾವಣೆ ಮುಗಿಯುವವರೆಗೆ ಮಾತ್ರ ಭಿನ್ನ ಘೋಷಣೆ. ಚುನಾವಣೆ ಮುಗಿದನಂತರ ಈ ಪಕ್ಷಗಳ ನೀತಿಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ. ಹೀಗಾಗಿ ಜನರಿಗೆ ಈ ಆಪರೇಶನ್‌ಗಳು ಮಾಮೂಲಿ ಆಗಿಹೋಗಿವೆ. ಗೆದ್ದಮೇಲೆ ಎಲ್ಲ ಬೂರ್ಷ್ವಾ ಪಕ್ಷಗಳ ಜನ ಪ್ರತಿನಿಧಿಗಳಿಗೂ ಒಂದೇ ಗುರಿ ದುಡ್ಡು ಮಾಡುವುದು. ಇನ್ನು ಭಿನ್ನವೆಂದರೆ ಬಿ.ಜೆ.ಪಿ.ಗೆ ಕೋಮುವಾದದ ಘೋಷಣೆಯಾದರೆ ಕಾಂಗ್ರೆಸ್, ಜೆ.ಡಿ.ಎಸ್.ಗಳಿಗೆ ಬಾಯಿಮಾತಿನ ಜಾತ್ಯತೀತ ಘೋಷಣೆ. ಇಷ್ಟುಬಿಟ್ಟರೆ ದುಡ್ಡು, ಅಧಿಕಾರ, ಮಂತ್ರಿ ಪದವಿ ಮಾತ್ರವೇ ಇವರ ಗುರಿ. ಹೀಗಾಗಿ ಈಗ ಬರುವ ಉಪಚುನಾವಣೆಯಲ್ಲಿ ಜನರಿಗೆ ಭಾರೀ ನಿರೀಕ್ಷೆಗಳೇನೂ ಇಲ್ಲ. ಯಾರು ಬಂದರೂ ಅಷ್ಟೆ. ಧನಬಲ, ಜಾತಿಬಂಧ ಈ ಚುನಾವಣೆಗಳಲ್ಲಿ ಪರೀಕ್ಷೆಗಿರುವುದು. ಅದರಲ್ಲೂ ಬಿ.ಜೆ.ಪಿ. ಸೋಲಲಿ ಎಂಬುದು ಕನಿಷ್ಠ ಜನಪರ ಆಶಯ ಹೊಂದಿರುವ ರಾಜಕೀಯ ಚಿಂತಕರ ಬಯಕೆ. ಅದಕ್ಕೆ ಕಾರಣ ವಿವರಿಸಬೇಕಿಲ್ಲ.

* * *

ಎಡಪಕ್ಷಗಳ ಸತ್ವ ಪರೀಕ್ಷೆ ಆರಂಭವಾಗಿದೆ. ಕೇವಲ ಸಿದ್ಧಾಂತ ಸರಿ ಇದ್ದರೆ ಸಾಲದು, ಅದರ ಪ್ರಯೋಗ ಪ್ರಾಮಾಣಿಕವಾಗಿರಬೇಕು. ಕೇರಳ ಮತ್ತು ಪಶ್ಚಿಮ ಬಂಗಾಳಗಳಲ್ಲಿ ಎಡಪಕ್ಷಗಳು ಈಗ ತಮ್ಮ ಶಕ್ತಿಯನ್ನು, ಜನಪರತೆಯನ್ನು ಪಣಕ್ಕೊಡ್ಡುವ ಸಮಯ ಬಂದಿದೆ. ಖಂಡಿತ ದೇಶದ ಯಾವುದೇ ರಾಜಕೀಯ ಪಕ್ಷಗಳಿಗಿಂತ ಎಡಪಕ್ಷಗಳು ಭಿನ್ನ ಮತ್ತು ನೀತಿ ಕಾರ್ಯಕ್ರಮವಿರುವ ಪಕ್ಷಗಳು. ಆದರೂ ಕೇರಳದಲ್ಲಿ ಪ್ರತಿ ಐದು ವರ್ಷಗಳಿಗೊಮ್ಮೆ ಎಡಪಕ್ಷಗಳು ಮತ್ತು ಕಾಂಗ್ರೆಸ್ ಮೈತ್ರಿಕೂಟ ಸರತಿಯಂತೆ ಅಧಿಕಾರಕ್ಕೆ ಬರುತ್ತಿವೆ. ಪಶ್ಚಿಮ ಬಂಗಾಳದಲ್ಲಿ ದಶಕಗಳಿಂದ ಎಡಪಕ್ಷಗಳು ಅಧಿಕಾರದಲ್ಲಿವೆ. ಕೇರಳದ ರಾಜಕಾರಣವನ್ನು ಮಾಮೂಲಿ ಎಂದು ಬರೆದರೂ ಎಡಮೈತ್ರಿಕೂಟ ಮತ್ತೊಮ್ಮೆ ಅಧಿಕಾರಕ್ಕೆ ಬಂದು ಸರತಿಯ ಪರಂಪರೆಗೆ ಕೊನೆ ಹಾಡಬೇಕು. ಯಾಕೆಂದರೆ ದೇಶದಲ್ಲಿ ಮತ್ತು ಅಧಿಕಾರವಿರುವ ರಾಜ್ಯಗಳಲ್ಲಿ ಕಾಂಗ್ರೆಸ್ ಹೇಳಿಕೊಳ್ಳುವಂಥ ಸಾಧನೆಯನ್ನೇನೂ ಮಾಡಿಲ್ಲ. ಅದರಲ್ಲೂ ಎಡಪಕ್ಷಗಳನ್ನು ಕೆಳಗಿಳಿಸಿ ಅಧಿಕಾರಕ್ಕೆ ಬರುವ ನೈತಿಕತೆಯಂತೂ ಅದಕ್ಕಿಲ್ಲವೇ ಇಲ್ಲ. ಏನೇ ಭಿನ್ನಾಭಿಪ್ರಾಯಗಳಿದ್ದರೂ ಎಡಪಕ್ಷಗಳ ಕೇರಳ ಸರಕಾರ ಇತರ ರಾಜ್ಯಗಳ ಬೇರೆ ಪಕ್ಷಗಳ ಆಡಳಿತಕ್ಕಿಂತ ಭಿನ್ನ. ಇದನ್ನು ಕೇರಳ ಜನತೆ ಹೇಗೆ ಪರಿಗಣಿಸುತ್ತಾರೋ ಕಾಯ್ದುನೋಡಬೇಕು. ಅದೇ ರೀತಿ ತಮ್ಮ ಐದು ವರ್ಷಗಳ ಆಡಳಿತ ಮತ್ತು ಭವಿಷ್ಯದ ಕನಸುಗಳನ್ನು ಜನತೆಯ ಮಧ್ಯೆ ಹೇಗೆ ಬಿಂಬಿಸುತ್ತಾರೆನ್ನುವುದು ಕುತೂಹಲದ ವಿಷಯ. ಆದರೆ ಪಶ್ಚಿಮ ಬಂಗಾಲದ ಸ್ಥಿತಿ ಇದಕ್ಕಿಂತಲೂ ಭಿನ್ನ. ಅಲ್ಲಿ ಹೋಲಿಕೆಯ ಅಗತ್ಯವಿಲ್ಲ. ಎಡಪಕ್ಷಗಳು ತಮ್ಮ ಸಾಮರ್ಥ್ಯ ಮತ್ತು ಜನಪರ ನೀತಿಗಳ ಇತಿಹಾಸದಿಂದಲೇ ಆಯ್ಕೆ ಆಗಬೇಕು. ಇದೇ ಸಂದರ್ಭದಲ್ಲಿ ಮಾಧ್ಯಮಗಳೂ ಮತ್ತು ಬಲಪಂಥೀಯ ಜನತೆ ಎಡಪಕ್ಷಗಳ ಪತನವನ್ನು ಬಯಸುತ್ತಿವೆ. ಪಶ್ಚಿಮ ಬಂಗಾಳದಲ್ಲಿ ಸೋಲಾದರೆ ಅದು ಬರೀ ಆ ರಾಜ್ಯದ ಎಡಪಕ್ಷಗಳ ಸೋಲಾಗುವುದಿಲ್ಲ. ಇಡೀ ದೇಶದ ಎಡಪಕ್ಷಗಳ ರಾಜಕೀಯ ಹೋರಾಟದ ಮೇಲೆ ದುಷ್ಪರಿಣಾಮ ಬೀರುತ್ತದೆ. ಅಷ್ಟೇ ಅಲ್ಲ, ಭಾರತದಲ್ಲಿ ಕಮ್ಯುನಿಸಂ ವಿಫಲ ಎಂದು ಮಾಧ್ಯಮಗಳೂ ಬಿಂಬಿಸುತ್ತವೆ. ಖಂಡಿತ ಎಡಪಕ್ಷಗಳಿಗೆ ತೃಣಮೂಲ ಕಾಂಗ್ರೆಸ್ ಹಾಗೂ ಕಾಂಗ್ರೆಸ್ ಯಾವ ರೀತಿಯಲ್ಲೂ ಪರ್ಯಾಯವಲ್ಲ. ಆದರೆ ಎಡಪಕ್ಷಗಳು ಅಲ್ಲಿ ಇನ್ನೊಂದೆಡೆ ಕೈತೋರಿಸುವ ಸ್ಥಿತಿಯಲ್ಲಿಲ್ಲ. ಸ್ವಯಂ ಸಮರ್ಥನೆಯ ಅವಶ್ಯಕತೆಯಲ್ಲಿವೆ. ಇಷ್ಟು ವರ್ಷಗಳ ಆಡಳಿತ, ಪಕ್ಷದ ನೀತಿ, ಕಾರ್ಯಕ್ರಮ, ಸಿದ್ಧಾಂತ ಸಮೇತವಾಗಿ ಎಲ್ಲವೂ ಪರೀಕ್ಷೆಗೊಳಪಟ್ಟಿವೆ ಅಷ್ಟೇ ಅಲ್ಲ ಇಡೀ ದೇಶದಲ್ಲಿ, ಬಲಪಂಥೀಯ ಪಕ್ಷಗಳಿಗೆ ಪರ್ಯಾಯ ಎಡಪಕ್ಷಗಳು ಮಾತ್ರ ಎಂಬುದು ಸಾಬೀತುಪಡಿಸಬೇಕಿದೆ. ಇತ್ತೀಚೆಗೆ ಪಶ್ಚಿಮ ಬಂಗಾಳ ಎಡಪಕ್ಷಗಳ ಮೇಲೆ ಬರುತ್ತಿರುವ ಟೀಕೆಗಳಿಗೆ ಉತ್ತರ ಕೊಡುವುದು ಈ ಚುನಾವಣೆಯ ಸಂದರ್ಭದಲ್ಲಿ ಸಾಧ್ಯವಾಗಬೇಕಿದೆ. ಸುದೀರ್ಘ ಅವಧಿಯ ಆಡಳಿತದಲ್ಲಿ ದೋಷಗಳಾಗಿ ಅವುಗಳನ್ನೂ ಜನರ ಮುಂದಿಟ್ಟು ಜನಾದೇಶ ಪಡೆಯಬೇಕು.

*– ಡಾ|| ಸಿದ್ದನಗೌಡ ಪಾಟೀಲ*




## ಚೀಣಾದ ಕಿರಿಕಿರಿ

ಫೆಬ್ರವರಿ ಸಂಚಿಕೆಯ ಪುಟ ೫೮ರಲ್ಲಿ ಸೀಯಾರ್ಕೆ ಅವರು ಬರೆದ 'ಚೀಣಾದ ಕಿರಿಕಿರಿಗೆ ಕೊನೆ ಎಂದು ?' ಟಿಪ್ಪಣಿಯನ್ನು ಓದಿದೆ. ಬಹುಶಃ ಸ್ಥಳಾವಕಾಶದ ಕೊರತೆಯಿಂದ ಅಂಕಣಕಾರರು ಹಲವಾರು ವಿಷಯಗಳನ್ನು ಮೊಟಕುಗೊಳಿಸಿದ್ದಾರೆ. ಅವರು ಬರೆದಿರುವಂತೆ 'ಚೀಣಾದ ಕಿರಿಕಿರಿ ಪ್ರಾರಂಭವಾದದ್ದು, ಕಳೆದ ಶತಮಾನದ ೫೦ರ ದಶಕದ ಉತ್ತರಾರ್ಧದಲ್ಲಿ' ಅಷ್ಟೇ ಅಲ್ಲ, ಅದಕ್ಕೂ ಮೊದಲಿನಿಂದ. ಇರಲಿ.

ನನ್ನ ಪಾಲಿಗಂತೂ ಈ ಬರಹದ ಒಟ್ಟಾರೆ ಆಶಯ ಭಾರಿ ಆಶ್ಚರ್ಯ ತಂದಿತು. ಹಿರಿಯ ಸೀಯಾರ್ಕೆ ಅವರು ಈ ಬಗ್ಗೆ ಇನ್ನಷ್ಟು ಬರೆಯುತ್ತಾರೆಂದು ಆಶಿಸುತ್ತೇನೆ. ಚೀಣಾ-ಭಾರತ ವಿಶ್ವದಲ್ಲೇ ಅತ್ಯಂತ ಮಹತ್ವದ ಜೋಡಿಯಾಗಬಲ್ಲ ದೇಶಗಳು. ಚೀಣಾ ಈ ಕುರಿತು ದೂರದೃಷ್ಟಿ, ನ್ಯಾಯೋಚಿತ ಹಾಗೂ ವಿವೇಕದ ನಿಲುವು ತಾಳುವ ಅವಶ್ಯಕತೆ ಇದೆ. ವಿಶ್ವವನ್ನು ಏಕಬಣದ ವಶಕ್ಕೇ ಬಿಡುವುದು ಖಂಡಿತ ಸಾಧುವಲ್ಲ; ಹಾಗೆಂದು ಎರಡು ಬಣಗಳಲ್ಲಿ ವಿಶ್ವವನ್ನು ಹಂಚುವ ಅವಿವೇಕವೂ ಸಲ್ಲ. ವಿಭಿನ್ನ ದೇಶಗಳು ತಮಗೆ ಹಿತ ತರುವ ಬಣಗಳನ್ನು ನಿರ್ಮಿಸಿಕೊಳ್ಳಲು ಸ್ವಾತಂತ್ರ್ಯ ಹೊಂದಿರುವುದು ಸೂಕ್ತ. ಇಂಥ ಬದಲಾವಣೆ ಭವಿಷ್ಯದಲ್ಲಿ ಸಾಕಾರಗೊಳ್ಳುವುದಕ್ಕೆ ಭಾರತ ಕೂಡ ಮುತ್ಸದ್ದಿ ಮನೋಭಾವವನ್ನು ಮುಕ್ತವಾಗಿ ಅಭಿವ್ಯಕ್ತಿಸಬೇಕು.

ಬೆಂಗಳೂರು **ಮಂಗ್ಳೂರ ವಿಜಯ**

## ಮಾರ್ಚ್ ಸಂಚಿಕೆ

ಬಿಳುಮನೆ ರಾಮದಾಸರ 'ಕಪ್ಪು ಮತ್ತು ಬಿಳಿಯ ಮುಖಗಳು' ಬಹುಶಃ ಕಾಲ್ಪನಿಕ ಕಥೆಯಲ್ಲ. ಯಾರದೋ ಜೀವನದಲ್ಲಿ ನಡೆದ ಸತ್ಯ ಘಟನೆಯಾಗಿರಬಹುದು. ನನ್ನ ಜೀವನದಲ್ಲಿ ಇಂತಹುದೇ ಘಟನೆ ನಡೆದುಹೋಯಿತು. ಇಂದಿಗೂ ನಾನು ಅದರ ಕಹಿ ಅನುಭವಿಸುತ್ತಿದ್ದೇನೆ. ನನ್ನ ಹೊಸ ಮನೆ ಗೃಹಪ್ರವೇಶಕ್ಕೆ ನನ್ನ ಗೆಳೆಯನಿಗೆ ಆಹ್ವಾನ ನೀಡಿದ್ದೆ. ಅವನು ಕಾರ್ಯಕ್ರಮಕ್ಕೆ ಬಂದವನೇ ನನ್ನ ವಿರುದ್ಧ ಅಪಪ್ರಚಾರ ಮಾಡತೊಡಗಿದ. ಈ ಘಟನೆಯು ನಮ್ಮಿಬ್ಬರನ್ನು ದೂರಮಾಡಿತು. ಇಂದಿಗೂ ನಾವು ದೂರವಾಗಿದ್ದೇವೆ.

ತುಮಕೂರು **ವಾಮನ ರಾವ್**

೨೦೧೧ರ ವಾರ್ಷಿಕ ಸಂಚಿಕೆಯ ಲೇಖನಗಳ ವೈವಿಧ್ಯತೆ, ಪರಿಪಕ್ವತೆ, ವಿದ್ವತ್ಪೂರ್ಣ ಚರ್ಚೆಗಳ ಮೇಲೆ ಪ್ರಭಾವ ಬೀರಿದವು. ಅದರ ಬಗ್ಗೆ ವಿಚಾರ ಅಭ್ಯಾಸ ಮಾಡಿ ನಿಮಗೆ ಬರೆವೆ.

ಮಾರ್ಚ್ ಸಂಚಿಕೆಯಲ್ಲಿ ದಿ। ಎಂ. ಪಿ. ಪ್ರಕಾಶ, ಗಾನ ಗಂಧರ್ವ ಪಂ॥ ಭೀಮಸೇನ ಜೋಶಿ ಅವರುಗಳ ಬಗ್ಗೆ ವಿವರವಾದ ತಿಳಿವಳಿಕೆಯ ಮಾಹಿತಿ ಲಭಿಸಿದೆ. ೭೭ರ ಸಾಹಿತ್ಯ ಸಮ್ಮೇಳನದ ಫಲಶ್ರುತಿ ಬಗ್ಗೆ ಕ್ಷಕಿರಣ ಬೀರಿರುವಿರಿ. ಇನ್ನು ಬೆಳಗಾವಿಯ ವಿಶ್ವ ಕನ್ನಡ ಸಮ್ಮೇಳನದ ಬಗೆಗೆ ನಿಮ್ಮ ಪತ್ರಿಕೆಯಲ್ಲಿ ಬರಲಿ.

ಬೆಳಗಾವಿ **ಪಿ. ವಿಜಯ**

'ನೆಮ್ಮದಿಯ ನಾಳೆ ನಮ್ಮದು' ಎನ್ನುವ ನನ್ನ ಮೆಚ್ಚಿನ 'ಹೊಸತು' ಇಂದು ಮತ್ತು ನಾಳೆಗೆ ಬಹಳ ತಲೆನೋವಾಗಿರುವ 'ಪ್ಲಾಸ್ಟಿಕ್' ಕವರಿನಲ್ಲಿ ಬರುತ್ತಿದೆಯಲ್ಲ!!

ನಂಜನಗೂಡು **ಸಂತೋಷ ಗುಡ್ಡಿಯಂಗಡಿ**




ಶಿವಕುಮಾರ್ ಕಂಪ್ಲಿಯವರು 'ಹೊಸ ಬಾಳಿಗೆ ಹೊರಟ ಮಗಳಿಗೆ...' ಲೇಖನದಲ್ಲಿ ಜಿ. ಎಸ್. ಶಿವರುದ್ರಪ್ಪನವರ 'ಬೀಳ್ಕೊಡುಗೆ' ಎಂಬ ನೀಳ್ಗವನವನ್ನು ಅಗತ್ಯವಾಗಿ ಪರಿಗಣಿಸಬೇಕಿತ್ತು. ಉಳಿದ ಕವಿಗಳು ಬಹುಮಟ್ಟಿಗೆ ತೌರಿನ ದೃಷ್ಟಿಯಿಂದ ಸಂದರ್ಭವನ್ನು ಚಿತ್ರಿಸಿದ್ದರೆ, ಹೆಣ್ಣಿನ ದೃಷ್ಟಿಯಿಂದ ಅದನ್ನು ಚಿತ್ರಿಸಿರುವುದು 'ಬೀಳ್ಕೊಡುಗೆ'ಯ ವೈಶಿಷ್ಟ್ಯ.

ಮೈಸೂರು **ಸಿ.ಪಿ.ಕೆ.**

### ತಿದ್ದುಪಡಿ

ಮಾನ್ಯರೇ,

ಮಾರ್ಚ್ ೨೦೧೧ರ ಸಂಚಿಕೆಯಲ್ಲಿ ನನ್ನ 'ಕನ್ನಡ ಮರಾಠಿ ಭಾಷಾ ಬಾಂಧವ್ಯ' ಲೇಖನದಲ್ಲಿ ಒಂದು ತಪ್ಪು ನುಸುಳಿದೆ. ತಿಲಕರ ಗೀತಾ ರಹಸ್ಯವನ್ನು ಕನ್ನಡಕ್ಕೆ ಅನುವಾದಿಸಿದವರು ಆಲೂರು ವೆಂಕಟ ರಾಯರು. ಮುದವೀಡು ಕೃಷ್ಣರಾಯರಲ್ಲ. ಗುರ್ಲ ಹೊಸೂರಿನ ಅಂದಿನ ಸಭೆಯಲ್ಲಿ ತಿಲಕರ ಜೊತೆಯಲ್ಲಿ ಆಲೂರರು, ಮುದವೀಡರು ಇದ್ದರು. ಅಂದು ತಿಲಕರು ಮಾಡಿದ ಭಾಷಣವನ್ನು ಕನ್ನಡಸಿದವರು ಮುದವೀಡರು. (ಮಾಹಿತಿ : ಆಳ್ವಾಸ್ ನುಡಿಸಿರಿ, ೨೦೦೮. ಕನ್ನಡ ಮನಸ್ಸು ಶಕ್ತಿ ಮತ್ತು ವ್ಯಾಪ್ತಿ, ಪುಟ ೨೨, ೨೩)

– ಡಾ॥ ನಾ. ಡಿಸೋಜ

ಭಾ.ಜ.ಪದ ಗೋಸುಂಬೆತನವನ್ನು ಬಯಲು ಮಾಡುವಲ್ಲಿ ಮಾರ್ಚ್-೨೦೧೧ರ ಸಂಪಾದಕೀಯ ಯಶಸ್ವಿಯಾಗಿದೆ.

ನಾ. ಡಿಸೋಜ ಅವರ ಕನ್ನಡ ಮರಾಠಿ ಭಾಷಾ ಬಾಂಧವ್ಯ ಕುರಿತ ಲೇಖನ ಕೂಡ ಗಮನಾರ್ಹವಾಗಿದೆ. ಇತರ ಭಾಷಾ ಬಾಂಧವರ ಮಧ್ಯೆ ಸಂಬಂಧಗಳು ಚೆನ್ನಾಗಿಯೇ ಇದ್ದರೂ ಸಹ ಇಂದಿನ ರಾಜಕಾರಣಿಗಳಿಂದಾಗಿ ಜನರ ನಡುವೆ ಬಿರುಕು ಮೂಡಿಸುವ ಪ್ರಕ್ರಿಯೆ ಸಾಗುತ್ತಿದೆ. ಅನೇಕ ಸಲ ನನಗನ್ನಿಸಿದ್ದುಂಟು. ನಮ್ಮ ಕಾರ್ಯಕ್ರಮಗಳಿಗೆ, (ಉದಾಹರಣೆ, ಸಾಹಿತ್ಯ ಸಮ್ಮೇಳನ ಇತ್ಯಾದಿ) ಇತರ ಭಾಷಾ ವಿದ್ವಾಂಸರು ಉದ್ಘಾಟನೆ ಮಾಡುವುದು, ಅನುವಾದಗಳ ಬಗ್ಗೆ ಮಾತನಾಡುವುದು... ಇತ್ಯಾದಿ ನಡೆದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು. ಹಿಂದೆಲ್ಲಾ ಹಲವು ಕಾರ್ಯಕ್ರಮಗಳನ್ನು ಗಡಿನಾಡಲ್ಲಿ ನಡೆಸಿದಾಗ ಹೀಗೇ ವ್ಯವಸ್ಥೆಯಾದದ್ದನ್ನು ನಾನು ಕಂಡಿದ್ದೇನೆ. ಈಗ ಪರಭಾಷಿಗರೆಂದರೆ ಪಾಕಿಸ್ತಾನದವರೆನ್ನುವಂತೆ ಮೈಮೇಲೆ ದೇವರನ್ನು ಕರೆಸಿಕೊಳ್ಳುವ ಹಲವಾರು "ಉಟ್ಟು ಹೋರಾಟಗಾರರು" ಹುಟ್ಟಿಕೊಂಡಿದ್ದಾರೆ, ಇದು ವಿಷಾದನೀಯ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಈ ಸಂಚಿಕೆಯಲ್ಲಿ ನಾಗವೇಣಿ ಅವರು ಬೇಂದ್ರೆಯವರ 'ನಾದಲೀಲೆಯ ಭಾವಲೀಲೆ' ಲೇಖನದ ಮೂಲಕ ಕವನ ಪ್ರಿಯರಿಗೆ ರಸದೌತಣವನ್ನು ಶಿವರಾತ್ರಿ ಹಬ್ಬಕ್ಕೆ ಉಣಬಡಿಸಿದರು. ಜನಪದ ಕಾವ್ಯದಲ್ಲಿ ಸ್ತ್ರೀ ಸಂವೇದನೆ ಕುರಿತು ಅರ್ಥಪೂರ್ಣವಾಗಿ ತಿಳಿಸಿದ್ದಾರೆ. ಮತ್ತಷ್ಟು ಕವನಗಳನ್ನು ಪ್ರಕಟಿಸಿದ್ದರೆ ಚೆನ್ನಿತ್ತು.

ಗೌರಿಬಿದನೂರು **ಡಿ. ಎ. ರಾಘವೇಂದ್ರ ರಾವ್**

## ಅಭಿಪ್ರಾಯ

### ಜಾತಿ ರಾಜಕಾರಣ ಮತ್ತು ಪ್ರಜಾಪ್ರಭುತ್ವ

ಸ್ವಾತಂತ್ರ್ಯ ಬಂದ ನಂತರದ ರಾಜಕಾರಣದಲ್ಲಿ ದೇಶದ ಅಭಿವೃದ್ಧಿ ಮತ್ತು ಸರ್ವಜನರ ಕಲ್ಯಾಣ ಕುರಿತ ಅಂಶಗಳು ಒಳಗೊಂಡಿದ್ದವು. ಇಂದಿನ ರಾಜಕಾರಣದಲ್ಲಿ ಅಕ್ರಮವಾಗಿ ಆದಾಯ ಮಾಡುವುದು, ಸ್ವಜನ ಪಕ್ಷಪಾತ ಮಾಡುವುದು, ಅಲ್ಪಸಂಖ್ಯಾತರ ಮೇಲೆ ದೌರ್ಜನ್ಯ ಎಸಗುವುದು ಮುಂತಾದವನ್ನು ಕಾಣಬಹುದು. ಮತ್ತೊಂದು ಮುಖ್ಯವಾದ ಅಂಶವೆಂದರೆ, ಈ ಹಿಂದಿನ ರಾಜಕಾರಣದಲ್ಲಿ ಜಾತಿರಾಜಕಾರಣಗಳು ಅಷ್ಟಾಗಿ ಮೇಲುಗೈ ಪಡೆದಿರಲಿಲ್ಲ. ಸಮಗ್ರ ಅಭಿವೃದ್ಧಿಯ ನೋಟ ಅವರಲ್ಲಿತ್ತು. ಇಂದು ಈ ಎಲ್ಲಾ ಉತ್ತಮ ಅಂಶಗಳು ಮಾಯವಾಗಿವೆ. ಕೇವಲ ಹಣ ಸಂಪಾದನೆಗಾಗಿ ವಾಮ ಮಾರ್ಗ ಅನುಸರಿಸುತ್ತಿರುವುದನ್ನು ಇಂದು ನೋಡಬಹುದು. ಅಧಿಕಾರಕ್ಕಾಗಿ ಮತ್ತು ಅಕ್ರಮ ಸಂಪತ್ತು ಸಂಪಾದನೆಗಾಗಿ ಜಾತಿ ರಾಜಕಾರಣವು ವಾಮ ಮಾರ್ಗಗಳಲ್ಲಿ ತೊಡಗಿದೆ. ಪ್ರಬಲ ಜಾತಿ ರಾಜಕೀಯ ವ್ಯಕ್ತಿಯ ಸುತ್ತ ಆತನ ಕುಲಸ್ಥರದೇ ದರಬಾರು. ಒಂದು ಪ್ರದೇಶದಲ್ಲಿ ಒಂದೇ ಜಾತಿಯ ಜನರು ಹೆಚ್ಚಿನ ಪ್ರಮಾಣದಲ್ಲಿ ವಾಸಿಸುತ್ತಿದ್ದರೆ ಆ ಜಾತಿಯವನೇ ಪ್ರಧಾನ ರಾಜಕೀಯ ವ್ಯಕ್ತಿಯಾಗಿ ಹೊರಹೊಮ್ಮುತ್ತಾನೆ.

ಅವನು ಕೆಟ್ಟವನೋ ಒಳ್ಳೆಯವನೋ ಅದು ಲೆಕ್ಕಕ್ಕಿಲ್ಲದ ಅಂಶ. ಏಕೆಂದರೆ ಅವನು ತಮ್ಮ ಜಾತಿಯವನು ಎಂದು ಭಾವಿಸುವುದು ಪ್ರಜಾಪ್ರಭುತ್ವ ವ್ಯವಸ್ಥೆಗೆ ಅತ್ಯಂತ ಅಪಾಯಕಾರಿ ಅಂಶವಾಗಿದೆ. ಇದರಿಂದ ಅಭಿವೃದ್ಧಿ ಸಾಧ್ಯವಿಲ್ಲ. ಅಲ್ಪಸಂಖ್ಯಾತರು ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ಮಾಡಿದರೂ ಯಶಸ್ವಿಯಾಗುವುದಿಲ್ಲ. ಎಲ್ಲಾ ರೀತಿಗಳಿಂದ ಅಲ್ಪಸಂಖ್ಯಾತರ ಮೇಲೆ ದೌರ್ಜನ್ಯ ಅಗೋಚರವಾಗಿ ನಡೆಯುತ್ತಲೇ ಇರುತ್ತದೆ. ಇತ್ತೀಚಿಗೆ ಕರ್ನಾಟಕ ರಾಜ್ಯದಲ್ಲಿ ಚರ್ಚ್‌ಗಳ ಮೇಲೆ ದಾಳಿಯಾಗಿ ಸಾಕಷ್ಟು ಪ್ರಮಾಣದಲ್ಲಿ ಹಾನಿ ಉಂಟಾಯಿತು. ತನಿಖೆಗಾಗಿ ಒಂದು ನ್ಯಾಯಾಂಗ ಆಯೋಗ ವಿಚಾರಣೆ ನಡೆಸಿದರೂ ದುಷ್ಕೃತ್ಯ ಎಸಗಿದವರನ್ನು ಪತ್ತೆಹಚ್ಚಲು ಸಾಧ್ಯವಾಗಿಲ್ಲದಿರುವುದು ಒಂದು ದುರಂತ.

ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರು ನಮ್ಮನ್ನು ಒಡೆದು ಆಳುವ ನೀತಿಯನ್ನು ಇಂದು ಜಾತಿ ರಾಜಕಾರಣಿಗಳು ಅದೇ ರೀತಿ ಮುಂದುವರಿಸಿಕೊಂಡು ಹೋಗುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಇದು ಉತ್ತಮವಾಗಿ ಕಾಣುತ್ತದೆ. ಆದರೆ ನಿಜಸ್ಥಿತಿಯಲ್ಲಿ ಸಮಾಜವು ಬೂದಿ ಮುಚ್ಚಿದ ಕೆಂಡದ ಸ್ಥಿತಿಯಲ್ಲಿ ಇರುತ್ತದೆ. ಜಾತಿ ರಾಜಕಾರಣದ ಮುಂದೆ ಪಕ್ಷದ ತತ್ವ ಸಿದ್ಧಾಂತಗಳು ಅಸ್ತಿತ್ವ ಕಳೆದುಕೊಳ್ಳುತ್ತವೆ. ಮತದಾರ ತನ್ನ ಚಿಂತನಾಶಕ್ತಿಯನ್ನು ಕಳೆದುಕೊಳ್ಳುತ್ತಾನೆ. ಜಾತಿಯೇ ಶ್ರೇಷ್ಠವೆಂದು ನಂಬಿರುವ ಮತದಾರ, ತನ್ನ ಜಾತಿಯ ಅಭ್ಯರ್ಥಿಗಳ ಗೆಲುವಿಗಾಗಿ ಏನು ಮಾಡಲೂ ಹೇಸಲಾರ. ಜಾತಿಯ ವಿಷಯದಲ್ಲಿ ನಾಗರಿಕರು ಹೆಚ್ಚು ಭಾವೋದ್ವೇಗಕ್ಕೆ ಒಳಗಾಗುತ್ತಾರೆ. ಅದು ಸಮುದ್ರದ ಪ್ರವಾಹ ಇದ್ದಂತೆ. ಎಲ್ಲವೂ ಕೊಚ್ಚಿಕೊಂಡು ಹೋಗುತ್ತದೆ. ಅಭಿವೃದ್ಧಿ ದೃಷ್ಟಿ ಇಟ್ಟುಕೊಂಡು ರಸ್ತೆ ಅಗಲೀಕರಣ ಕೈಗೊಂಡಾಗ ದೇವಸ್ಥಾನ, ಮಸೀದಿ, ಚರ್ಚ್‌ಗಳು, ಮನೆಗಳನ್ನು ನೆಲಸಮ ಮಾಡುವ ಪ್ರಸಂಗ ಬರಬಹುದು. ಸಂಬಂಧಪಟ್ಟ ನಾಗರಿಕರು ಅದನ್ನು ಜಾತಿಗೆ ಸಂಬಂಧ ಕಲ್ಪಿಸಿ, ಹೋರಾಟ ಮಾಡಿದ ಘಟನೆಗಳು ನಿರಂತರವಾಗಿ ದಿನಪತ್ರಿಕೆಗಳಲ್ಲಿ ಆಗಾಗ ಪ್ರಕಟವಾಗುತ್ತಿವೆ. ಇದನ್ನು ಹಲವು ಜಾತಿ ರಾಜಕಾರಣಿಗಳು ಬಂಡವಾಳ ಮಾಡಿಕೊಳ್ಳುತ್ತಾರೆ.

ತುಮಕೂರು **ವಾಮನ ರಾವ್**

## ಸ್ಥಿರಾಸ್ತಿ ಬೆಳೆದುಬಂದ ಬಗೆ

ಎಲ್ಲವೂ ಬದಲಾವಣೆಗೆ ಒಳಪಟ್ಟಿರುವುದು ಪ್ರಕೃತಿಯ ನಿಯಮವಾಗಿರುತ್ತದೆ. ಆಸ್ತಿ ಕಲ್ಪನೆ ಕೂಡ ಬದಲಾವಣೆಗಳಿಗೆ ಒಳಪಟ್ಟಿರುತ್ತದೆ. ವಿಶಾಲ ದೃಷ್ಟಿಯಿಂದ ನೋಡಿದಲ್ಲಿ ಮನುಷ್ಯನ ಬಳಕೆಗೆ ಬೇಕಾಗುವ ವಸ್ತುಗಳನ್ನು ಪೂರೈಸಬಲ್ಲ ವಸ್ತುವೇ ಆಸ್ತಿಯಾಗಿರುತ್ತದೆ. ಈ ಕಾರಣದಿಂದಾಗಿಯೇ ಆಸ್ತಿ ಕಲ್ಪನೆ ಸಮಾಜದಲ್ಲಿ ಸಂಪತ್ತನ್ನು ಸೃಷ್ಟಿಮಾಡುವ ಉತ್ಪಾದಕ ಕ್ರಿಯೆಗೆ ಒಳಪಟ್ಟಿರುತ್ತದೆ.

ಸಂಪತ್ತಿನ ಸೃಷ್ಟಿಯ ಮೂಲ ಪ್ರಮುಖವಾಗಿ ನಿಸರ್ಗದ ಕೊಡುಗೆಗಳನ್ನು ಬಳಸಿಕೊಂಡು ಮಾನವ ಶ್ರಮದಿಂದ ಬಳಕೆಗೆ ಬೇಕಾಗುವ ವಸ್ತುಗಳನ್ನು ಪಡೆಯುವುದೇ ಆಗಿರುತ್ತದೆ. ಗ್ರಹಗಳು ಸೂರ್ಯನ ಸುತ್ತ ಪರಿಭ್ರಮಿಸುವ ಹಾಗೆ ಆಸ್ತಿ ಕಲ್ಪನೆ ಜಮೀನು ಒಂದು ಸ್ಥಿರ ಆಸ್ತಿ ಎಂಬ ಕಲ್ಪನೆಯ ಸುತ್ತ ಸುತ್ತುತ್ತದೆ.

ಜಮೀನು ಆಸ್ತಿ ಕಲ್ಪನೆಯ ಕೇಂದ್ರ ಬಿಂದುವಾಗಿರುವುದರಿಂದ ಜಮೀನು ಒಡೆತನದ ಕಲ್ಪನೆ ಬೆಳೆದುಬಂದ ಬಗ್ಗೆ ತಿಳಿಯುವುದು ಸೂಕ್ತ. ಆರಂಭದ ದಿನಗಳಲ್ಲಿ, ಅಂದರೆ ಪಾಳೆಯಗಾರಿಕೆ ಯುಗಕ್ಕಿಂತ ಮುಂಚೆ, ಜಮೀನು ಒಡೆತನದ ಕಲ್ಪನೆ ಆಳುವ ಒಬ್ಬ ಒಡೆಯನಿಗೆ ಅಂದರೆ ಸಾಮ್ರಾಟನಿಗೆ ಮಾತ್ರ ಸೀಮಿತವಾಗಿತ್ತು. ಸಾಮ್ರಾಜ್ಯದಲ್ಲಿರುವ ಎಲ್ಲ ಆಸ್ತಿ ಆತನ ಒಡೆತನಕ್ಕೆ ಸೇರಿತ್ತು. ಆತನ ಪರವಾಗಿಯೇ, ಆತನ ಅನುಮತಿಯಿಂದಲೇ ಜಮೀನು ಸಾಗುವಳಿ ಮಾಡಬೇಕಿತ್ತು. ಇದರ ಸ್ಪಷ್ಟ ಚಿತ್ರಣವನ್ನು ನಾವು ರೋಮನ್ ಇತಿಹಾಸದಲ್ಲಿ ಕಾಣುತ್ತೇವೆ. ರೋಮನ್ ಸಾಮ್ರಾಜ್ಯದಲ್ಲಿ ಸಾಮ್ರಾಟನ ಅಧಿಪತಿ ಕೆಳಗೆ ಗುಲಾಮ ಪದ್ಧತಿ ಬೆಳೆದುಬಂದ ಪರಿಣಾಮವಾಗಿ ಅಲ್ಲಿ ಮುಕ್ತ ಬೆಳವಣಿಗೆ, ಅಂದರೆ ಜಮೀನು ವಿಷಯದಲ್ಲಿ ಜಮೀನು ಹಕ್ಕು ಪಡೆಯುವ ಪಾಳೆಯಗಾರ, ಉಳುವ ರೈತ, ಜಮೀನು ಸಂಪತ್ತನ್ನು ಕ್ರೋಢೀಕರಿಸುವ ಆಳರಸರ ದಂಡು ಬೆಳೆದುಬರಲಿಲ್ಲ. ಈ ಕಾರಣಕ್ಕಾಗಿಯೇ ರೋಮ್ ಸಾಮ್ರಾಜ್ಯದ ಸುತ್ತಲಿನ ಗುಲಾಮರು (ಬುಡಕಟ್ಟು ಜನರು) ಆ ಸಾಮ್ರಾಜ್ಯವನ್ನು ನಾಶಪಡಿಸಿದರು. ವ್ಯವಸ್ಥೆಯೊಂದು ಬದಲಾವಣೆಗೆ, ಬೆಳವಣಿಗೆಗೆ ಇಂಬು ಕೊಡದಿದ್ದಲ್ಲಿ, ಎಂಥ ಬಲಿಷ್ಠ ವ್ಯವಸ್ಥೆ ಎನಿಸಿಕೊಂಡರೂ ಅದು ನೆಲಸಮವಾಗುತ್ತದೆ ಎಂಬುದಕ್ಕೆ ರೋಮನ್ ಸಾಮ್ರಾಜ್ಯದ ಪತನ ಒಂದು ಮೇಲ್ಪಂಕ್ತಿಯಾಗಿ ಉದಾಹರಣೆಯಾಗಿರುತ್ತದೆ. ಇತ್ತೀಚಿನದು ಸೋವಿಯತ್ ಒಕ್ಕೂಟದ ದೀರ್ಘ ಕಾಲದ ನಂತರದ ಪತನ.

ಭಾರತೀಯ ಸನ್ನಿವೇಶದಲ್ಲಿ ಹೇಳಬೇಕೆಂದರೆ ವರ್ಣಾಶ್ರಮ ಪದ್ಧತಿಯ ನಿಶ್ಚಲ ಗ್ರಾಮೀಣ ಬದುಕಿನಿಂದಾಗಿ ನಮ್ಮ ದೇಶ ತನ್ನ ಅಂತಃಸತ್ವವನ್ನು ಕಳೆದುಕೊಂಡು ಹಲವು ಶತಮಾನಗಳವರೆಗೆ ಗುಲಾಮಗಿರಿಗೆ ಒಳಪಡಬೇಕಾಯಿತು. ಪಶ್ಚಿಮದಿಂದ ಬಂದ ಹಡಗುಗಳು ನಮ್ಮ ಬಂದರುಗಳಲ್ಲಿ ಬಂದು ಹೊಸ ಅಲೆಯನ್ನು ಎಬ್ಬಿಸಿದ ಪರಿಣಾಮವಾಗಿ ನಿಶ್ಚಲತೆಯಿಂದ ಹೊರಬರಲು ನಮಗೆ ಅನುಕೂಲವಾಯಿತು.

ಪಶ್ಚಿಮದಲ್ಲಿ, ಅಂದರೆ ಯೂರೋಪದಲ್ಲಿ ರೋಮ್ ಸಾಮ್ರಾಜ್ಯದ ಪತನದ ನಂತರ ಪಾಳೆಯಗಾರಿಕೆ ವ್ಯವಸ್ಥೆ ಬಲವಾಗಿ ರೂಪುಗೊಂಡಿದ್ದರ ಪರಿಣಾಮವಾಗಿ ಅಲ್ಲಿ ಭೂಮಿ ಸಾಗುವಳಿ ಪದ್ಧತಿ ಹೊಸ ಆಯಾಮ ಪಡೆಯಿತು. ಉದಾಹರಣೆಗೆ, ರೋಮನ್ ಕಾನೂನಿನಲ್ಲಿ ಗೇಣಿದಾರನಿಗೆ ಜಮೀನಿನಲ್ಲಿ ಶಾಶ್ವತ ಹಕ್ಕಿರುವುದಿಲ್ಲ. ಅಲ್ಲಿ ಗೇಣಿದಾರನಿಗೆ ಗೇಣಿ ಮಾಡುವ ಹಕ್ಕು ವೈಯಕ್ತಿಕವಾಗಿತ್ತು. ಅಂದರೆ ತನಗೆ ಇಷ್ಟಬಂದಾಗ ಗೇಣಿಯವನನ್ನು ಸಾಗುವಳಿಯಿಂದ ಹೊರದೂಡ ಬಹುದಾಗಿತ್ತು. ಆದರೆ ಪಾಳೆಯಗಾರಿಕೆ ಯುಗದಲ್ಲಿ ಮುಂಚೂಣಿಯಲ್ಲಿದ್ದ ಇಂಗ್ಲೆಂಡ್ ಭೂಮಿ ಸಾಗುವಳಿ ವಿಷಯದಲ್ಲಿ ಕ್ರಾಂತಿಕಾರಕ ಬದಲಾವಣೆ ತಂದಿತು. ಭೂಮಿ ಸಾಗುವಳಿ ವಿಷಯದಲ್ಲಿ ಗೇಣಿದಾರನಿಗೆ ಶಾಶ್ವತ ಹಕ್ಕು ಕಲ್ಪಿಸಿತು. ಇದರ ಪರಿಣಾಮವಾಗಿ ಗೇಣಿದಾರ ಮತ್ತು ಭೂ ಒಡೆಯರ ಕಲ್ಪನೆ ಶಾಶ್ವತವಾಯಿತು. ಪಾಳೆಯಗಾರಿಕೆ ಯುಗದಲ್ಲಿ ಗೇಣಿದಾರ ರೈತನಿಂದ ಬೆಳೆ ಪಡೆಯುವ ಭೂ ಒಡೆಯ ಆಳರಸನಿಗೆ ಅದರಲ್ಲಿ ಒಂದು ಪಾಲನ್ನು ಕೊಡುತ್ತಿದ್ದ. ಈ ಕಲ್ಪನೆ ನ್ಯಾಯಶಾಸ್ತ್ರದಲ್ಲಿ ಶಾಶ್ವತವಾಗಿ ಗೇಣಿ ಹಕ್ಕಾಗಿ ಜಮೀನಿನ ಬಾಡಿಗೆಯಾಗಿ ರೂಪುಗೊಂಡಿತು. ಬೆಳೆದ ಬೆಳೆಯಲ್ಲಿ ಪಾಲು ಪಡೆಯುವ ಪಾಳೆಯಗಾರಿಕೆ ವ್ಯವಸ್ಥೆ ಮುಂದೆ ಬಂಡವಾಳವಾದಿ ವ್ಯವಸ್ಥೆಯಲ್ಲಿ ಭೂ ಬಾಡಿಗೆಯ ಕಲ್ಪನೆಯಾಗಿ ರೂಪಾಂತರಗೊಂಡಿತು.

ಬಂಡವಾಳವಾದಿ ವ್ಯವಸ್ಥೆ ಉಗಮವಾಗಿ ಎರಡು ನೂರು ವರ್ಷಗಳು ಕಳೆಯುತ್ತಾ ಬಂದರೂ ಭೂ ಬಾಡಿಗೆ ಕಲ್ಪನೆ ಎಂಬುದು ಇಂದಿಗೂ ಆಸ್ತಿ ಕಲ್ಪನೆಯ ಮೂಲಾಧಾರವಾಗಿರುತ್ತದೆ. ಏಕೆಂದರೆ ಯಾರಾದರೂ ಜಮೀನಿನಿಂದ ಬರುವ ಉತ್ಪನ್ನದ ಲೆಕ್ಕ ಹಾಕುವಾಗ ಅದು ಜಮೀನು ಇರಲಿ ಅಥವಾ ಅದರ ಮೇಲೆ ಕಟ್ಟಿದ ಕಟ್ಟಡವಿರಲಿ ಅದರ ಆದಾಯವನ್ನು ನಾವು ಭೂ ಬಾಡಿಗೆ ರೂಪದಲ್ಲಿ ಗುಣಿಸುತ್ತೇವೆ. ಇಂದಿಗೂ ಕಾಮರ್ಸ್ ವಿದ್ಯಾರ್ಥಿಗಳಿಗೆ ಪಾಠ ಕೊಡುವಾಗ ಉದ್ದಿಮೆಯ ಒಂದು ಘಟಕವಾಗಿ ಜಮೀನು ಕುರಿತು ಹೇಳುವಾಗ ಭೂ ಬಾಡಿಗೆ ಆಧಾರದ ಮೇಲೆಯೇ ಪಾಠ ಕೊಡಲಾಗುತ್ತದೆ.

ಹಾಗಿದ್ದಲ್ಲಿ ಭೂ ಬಾಡಿಗೆ ಕಲ್ಪನೆಯೊಂದು ಶಾಶ್ವತವಾದ ಆಸ್ತಿ ಮೂಲದ ಆದಾಯದ ಕಲ್ಪನೆಯಾಗಿ ಉಳಿಯುತ್ತದೆಯೇ? ಇದು ಇಂದಿನ ಜಿಜ್ಞಾಸೆಯ ಪ್ರಶ್ನೆಯಾಗಿರುತ್ತದೆ. ಎರಡು ನೂರು ವರ್ಷದಷ್ಟು ಹಳೆಯದಾದ ಬಂಡವಾಳವಾದದ ವ್ಯವಸ್ಥೆ ಭೂ ಬಾಡಿಗೆ ಎಂಬ ಪಾಳೆಯಗಾರಿಕೆ ಆಸ್ತಿ ಕಲ್ಪನೆಗೆ ರೋಸಿಹೋಗಿದೆ. ಪ್ರಪಂಚದಲ್ಲಿಂದು ಸುಮಾರು ನಾಲ್ಕು ಟ್ರಿಲಿಯನ್ ರೂಪಾಯಿ ನೆಲೆಯಿಲ್ಲದೆ ಅಂತರ ಪಿಶಾಚಿಯಂತೆ ತಿರುಗುತ್ತಲಿದೆ. ಅದಕ್ಕೆ ನೆಲೆಯಿಲ್ಲ ಅದಕ್ಕಾಗಿ ಅದು ಜಾಗತಿಕ ಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ಜಾಗತಿಕ ವ್ಯಾಪಾರಿ ಒಕ್ಕೂಟ ಮುಂತಾದುವುಗಳ ಮುಖಾಂತರ ಬಂಡವಾಳವನ್ನು ಭೂಮಿಯಲ್ಲಿ ತೊಡಗಿಸಲು ಆಯಾ ದೇಶಗಳ ಕಾನೂನಿನಲ್ಲಿ ಸೂಕ್ತ ಬದಲಾವಣೆ ತರಲು ಒತ್ತಡ ಹೇರಲಾಗುತ್ತಿದೆ. ಅದಕ್ಕಾಗಿ ಕರಾಳ ಕಾನೂನುಗಳನ್ನು ತರಲಾಗುತ್ತಿದೆ. ಈ ಸಾಲಿನಲ್ಲಿ ನಾವು ಅರ್ಬನ್ ಲ್ಯಾಂಡ್ ಸೀಲಿಂಗ್ ಮತ್ತು ಅರ್ಬನ್ ಲ್ಯಾಂಡ್ ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್‌ಗಳಂತಹ ಕಾನೂನುಗಳನ್ನು ಉದಾಹರಿಸಬಹುದು. ಈ ಕಾನೂನನ್ನು ಬಳಸಿಕೊಂಡು ನಿರ್ದಾಕ್ಷಿಣ್ಯವಾಗಿ ರೈತರನ್ನು ಭೂಮಿಯಿಂದ ಹೊರದಬ್ಬಲಾಯಿತು. ಇದೇ ಕೆಲಸವನ್ನು ಕರ್ನಾಟಕ ಉದ್ದಿಮೆ ಅಭಿವೃದ್ಧಿ ಕಾನೂನಿನ ಮುಖಾಂತರ ಈಗ ಮಾಡಲಾಗುತ್ತಿದೆ. ಇದರ ಭಯಾನಕತೆಯನ್ನು ಜಸ್ಟೀಸ್ ಶೈಲೇಂದ್ರಕುಮಾರ್ ಇತ್ತೀಚೆಗೆ ಬಯಲಿಗೆಳೆದು ಸರಕಾರಕ್ಕೆ ಛೀಮಾರಿ ಹಾಕಿದ್ದನ್ನು ಇಲ್ಲಿ ಉಲ್ಲೇಖಿಸಬಹುದು.

ಜಮಖಂಡಿ **ರವೀಂದ್ರ ಹಳಿಂಗಳಿ**

■ ಡಾ॥ ವಿಠೋಬ ಬಿ. ■ ಡಾ॥ ವೈ. ಎಸ್. ವಗ್ಗಿ

# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ : ಒಂದು ಅವಲೋಕನ



೧೯೪೭ಕ್ಕಿಂತ ಮುಂಚೆಯೇ ಗಾಂಧೀಜಿಯವರು ಕಂಡಿದ್ದ ಸರ್ವರ ಅಭಿವೃದ್ಧಿಯೇ ಸರ್ವೋದಯ ಮತ್ತು ಗ್ರಾಮ ಪಂಚಾಯಿತಿಗಳಿಗೆ ಯಾವಾಗ ಪೂರ್ಣ ಅಧಿಕಾರ ಬರುತ್ತದೆಯೋ ಆಗ ಗ್ರಾಮ ಸ್ವರಾಜ್ಯ ಕಟ್ಟಬಹುದು ಎಂಬ ಅವರ ಕನಸನ್ನು ನನಸಾಗಿಸುವ ದಿಶೆಯಲ್ಲಿ ಇಂದಿನ ಯುಪಿಎ ಸರ್ಕಾರ, ೨೦೦೬ರ ಫೆಬ್ರವರಿ ೨ರಂದು ಭಾರತದ ಸುಮಾರು ೨೦೦ ಜಿಲ್ಲೆಗಳಲ್ಲಿ ಈ ಯೋಜನೆಯನ್ನು ಕಾಯಕವೇ ಕೈಲಾಸ ಎಂಬ ಹೆಸರಿನಲ್ಲಿ ಪ್ರತಿಯೊಂದು ಜಿಲ್ಲಾ ಪಂಚಾಯತ್‌ಗಳಲ್ಲಿ ಪ್ರಾರಂಭಿಸಿದೆ. ಇದು ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆಯ ಬದಲಿ ಯೋಜನೆಯಾಗಿದ್ದು, ಹಲವಾರು ವರ್ಷಗಳ ಹಿಂದೆಯೇ ರೂಪಿಸಿದ ಆರ್ಥಿಕ ತಜ್ಞರ ತತ್ವಗಳನ್ನು ಆಧರಿಸಿದೆ. ಕೇನ್ಸ್ ಪ್ರತಿಪಾದಿಸಿದಂತೆ ಇಂತಹ ಸಾರ್ವಜನಿಕ ಹೂಡಿಕೆ ನಮ್ಮಂತಹ ಹಿಂದುಳಿದ ದೇಶದ ಆರ್ಥಿಕತೆಯಲ್ಲಿ ಅಚ್ಚರಿಯ, ಪರಿಣಾಮಕಾರಿಯಾದ ಫಲಿತಾಂಶವನ್ನು ನೀಡಬಲ್ಲದು. ಅಲ್ಲದೆ, ರಗ್ನಾರ್ ನರ್ಕ್ಸ್, "ಹಿಂದುಳಿದ ದೇಶಗಳಲ್ಲಿರುವ ಅಪಾರ ಶ್ರಮ, ಸಂಪನ್ಮೂಲವನ್ನು ಬಳಸಿ ಸಾಮಾಜಿಕ ಬಂಡವಾಳವನ್ನು ಸೃಷ್ಟಿಸಲು ಸಾಧ್ಯ"ವೆಂದು ಹೇಳಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಸಾರ್ವಜನಿಕ ನಿಧಿಯನ್ನು ಬಳಸಿ, ಸಾರ್ವಜನಿಕ ಸ್ವತ್ತುಗಳನ್ನು ಸೃಷ್ಟಿಸಲು ಸಾಧ್ಯವೆಂಬುದನ್ನು ಸಾಬೀತುಪಡಿಸಿದ ಯೋಜನೆ ಇದಾಗಿದೆ.

ಗ್ರಾಮೀಣ ಪ್ರದೇಶಗಳಿಂದ ವಲಸೆ ಹೋಗುವ ಪ್ರಮಾಣವನ್ನು ತಡೆಗಟ್ಟಿ, ಸ್ಥಳೀಯವಾಗಿ ಉದ್ಯೋಗಾವಕಾಶಗಳನ್ನು ಹೆಚ್ಚಿಸಿ, ನಿರುದ್ಯೋಗ ಪ್ರಮಾಣವನ್ನು ಕಡಿಮೆ ಮಾಡಿ, ಪ್ರತಿ ಕುಟುಂಬಕ್ಕೆ ಒಂದು ಹಣಕಾಸು ವರ್ಷದಲ್ಲಿ ಕನಿಷ್ಠ ೧೦೦ ದಿನಗಳವರೆಗೆ ಉದ್ಯೋಗವನ್ನು ಒದಗಿಸಿಕೊಟ್ಟು ಅವರ ವಾರ್ಷಿಕ ಆದಾಯವನ್ನು ಹೆಚ್ಚಿಸಿ, ಜೀವನ ಗುಣಮಟ್ಟ ಸುಧಾರಿಸುವ ಉದ್ದೇಶವನ್ನಿಟ್ಟುಕೊಂಡಿರುವ ಈ

ವರ್ಷದಲ್ಲಿ ಕೆಲಸ ಮಾಡಲು ಇಚ್ಛಿಸುವ ಪ್ರತಿ ಕುಟುಂಬದ ಸದಸ್ಯರಿಗೆ ೧೦೦ ದಿನಗಳವರೆಗೆ ಉದ್ಯೋಗ ಕೊಡುವಂತಹ ನಿಯಮವನ್ನು ಪ್ರತಿ ಗ್ರಾಮದಲ್ಲಿ ಯಾರೂ ಪಾಲಿಸುತ್ತಿಲ್ಲ. ಶೇಕಡ ೬೦ರಷ್ಟು ಕಾಮಗಾರಿಗಳಲ್ಲಿ ಜೆಸಿಬಿಯಂತಹ ಯಂತ್ರಗಳನ್ನು ಬಳಸುವುದರಿಂದ ಕಾರ್ಮಿಕರ ಕೆಲಸದ ದಿನಗಳಲ್ಲಿ ಕಡಿಮೆಯಾಗಿರುವುದು ಕಂಡುಬಂದಿದೆ ಮತ್ತು ಅಧಿಕಾರಿಗಳು ಮತ್ತು ಚುನಾಯಿತ ಪ್ರತಿನಿಧಿಗಳ ಹಿಂಬಾಲಕರು ಜಾಬ್ ಕಾರ್ಡ್ ಪಡೆದವರ ಹೆಸರಿನಲ್ಲಿ ಅಕ್ರಮವಾಗಿ ವೇತನ ತೆಗೆದುಕೊಳ್ಳುತ್ತಿರುವುದು ಕ್ಷೇತ್ರಾಧ್ಯಾಯನದಿಂದ ತಿಳಿದುಬಂದಿದೆ. ಇದರಿಂದ ನಿಗದಿಯಾದ ವೇತನಕ್ಕಿಂತ ಸುಮಾರು ಶೇಕಡ ೩೦ರಷ್ಟು ಕಡಿಮೆ ಹಣ ತಮಗೆ ಸಿಗುತ್ತದೆ ಎಂದು ಶೇಕಡ ೭೨.೪೮ರಷ್ಟು ಜನರು ಅಭಿಪ್ರಾಯಪಟ್ಟಿದ್ದಾರೆ.

ಯೋಜನೆ ಅಕ್ಟೋಬರ್ ೨ರಿಂದ 'ಮಹಾತ್ಮ ಗಾಂಧಿ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ' ಎಂದು ಮರುನಾಮಕರಣಗೊಂಡಿದೆ.

ಪ್ರಸ್ತುತ ಲೇಖನದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಈ ಯೋಜನೆ ಪರಿಣಾಮಕಾರಿಯಾಗಿ ನಡೆಯುತ್ತಿದೆಯೋ ಇಲ್ಲವೋ ಮತ್ತು ಈ ಯೋಜನೆಯಿಂದ ಜನರ ಆರ್ಥಿಕ ಸ್ಥಿತಿಗತಿ ಸುಧಾರಣೆಯೊಂದಿಗೆ ಜೀವನ ಗುಣಮಟ್ಟದ ಸುಧಾರಣೆಯ ಬಗ್ಗೆ ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಿದ ಕೆಲವು ಸಂಗತಿಗಳನ್ನು ಈ ಮುಂದೆ ವಿಶ್ಲೇಷಿಸಲಾಗಿದೆ.

ಈ ಲೇಖನದ ಉದ್ದೇಶಗಳು ಹೀಗಿವೆ :

೧. ಭಾರತದಲ್ಲಿ ಯೋಜನೆಯ ನಿಧಿ ನಿರ್ವಹಣೆ ಮತ್ತು ಹಣಕಾಸಿನ ನೆರವಿನ ಬಗ್ಗೆ ತಿಳಿಯುವುದು.
೨. ಯೋಜನೆಯ ಸ್ವರೂಪದ ಬಗ್ಗೆ ವಿಶ್ಲೇಷಿಸುವುದು.
೩. ಕರ್ನಾಟಕದಲ್ಲಿ ಯೋಜನೆಯ ಮಹತ್ವ ತಿಳಿಯುವುದು.
೪. ಅಧ್ಯಯನ ಕ್ಷೇತ್ರದಲ್ಲಿ ಯೋಜನೆಯ ಫಲಾನುಭವಿಗಳ ವೇತನ, ಕೆಲಸದ ದಿನಗಳು, ಸಾಮಾಜಿಕ ಭದ್ರತೆ ಮತ್ತು ಆರ್ಥಿಕ ಸ್ಥಿತಿಗತಿ ಕುರಿತು ಚರ್ಚಿಸುವುದು.

### ಅಧ್ಯಯನ ವಿಧಾನ

ಈ ಅಧ್ಯಯನಕ್ಕಾಗಿ ಪ್ರಾಥಮಿಕ ಮತ್ತು ದ್ವಿತೀಯ ಅಂಕಿ-ಅಂಶಗಳನ್ನು ಬಳಸಿಕೊಳ್ಳಲಾಗಿದೆ. ಪ್ರಾಥಮಿಕ ಅಂಕಿ-ಅಂಶಗಳನ್ನು ಯೋಜನಾ ಫಲಾನುಭವಿಗಳಿಂದ ಪ್ರಶ್ನಾವಳಿಯ ಮೂಲಕ ಸಂಗ್ರಹಿಸಲಾಗಿದೆ. ದ್ವಿತೀಯ ಅಂಕಿ-ಅಂಶಗಳನ್ನು ಸಂಬಂಧಿಸಿದ ಪುಸ್ತಕ, ಲೇಖನಗಳು ಮತ್ತು ಅಪ್ರಕಟಿತ ಸಂಶೋಧನಾ ವರದಿಗಳಿಂದ ಸಂಗ್ರಹಿಸಲಾಗಿದೆ. ಅಧ್ಯಯನಕ್ಕಾಗಿ ಗುಲಬರ್ಗಾ ಜಿಲ್ಲೆಯ ಶೋರಾಪುರ ತಾಲೂಕನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇಲ್ಲಿ ನಾಲ್ಕು ಗ್ರಾಮ ಪಂಚಾಯಿತಿ (ಕೋಳಿಹಾಳ, ಮಾಳನೂರು, ವಾಗಿಣಗೇರಾ ಮತ್ತು ಪೇಠ ಅಮ್ಮಾಪುರ)ಗಳನ್ನು ಆಯ್ಕೆಮಾಡಿಕೊಂಡು ಪ್ರತಿಯೊಂದು ಪಂಚಾಯತಿಯಿಂದ ೨೦ರಂತೆ ಒಟ್ಟು ೮೦ ಯೋಜನಾ ಫಲಾನುಭವಿಗಳನ್ನು ಅಧ್ಯಯನಕ್ಕಾಗಿ ಬಳಸಿಕೊಂಡು ಮಾಹಿತಿ ಸಂಗ್ರಹಿಸಲಾಗಿದೆ. ಸಂಗ್ರಹಿಸಿದ ಮಾಹಿತಿಗಳನ್ನು ಸರಳವಾದ ಸರಾಸರಿಯಲ್ಲಿ ವಿಭಾಗಿಸಿ ಲೇಖನ ರಚಿಸಲಾಗಿದೆ.

### ಭಾರತದಲ್ಲಿ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ

ಗ್ರಾಮೀಣ ಪ್ರದೇಶದಲ್ಲಿ ಪ್ರತಿಯೊಂದು ಕುಟುಂಬಕ್ಕೆ ಪ್ರತಿವರ್ಷ ೧೦೦ ದಿನಗಳ ವರೆಗೆ ಉದ್ಯೋಗ ಒದಗಿಸಿ, ಪುರುಷ ಮತ್ತು ಮಹಿಳೆಯೆಂಬ ತಾರತಮ್ಯವಿಲ್ಲದೆ ಏಕ ರೀತಿಯಾದ ವೇತನ ನೀಡುವ ಈ ಯೋಜನೆಯು ಪ್ರಸ್ತುತ ಭಾರತಕ್ಕೆ ಅವಶ್ಯಕತೆಯಿತ್ತು. ಪ್ರಾರಂಭದಲ್ಲಿ ದಿನವೊಂದಕ್ಕೆ ರೂ. ೬೯ರಷ್ಟಿದ್ದ ವೇತನ ದರವು ಇಂದು ಹೆಚ್ಚಾಗಿದೆ. ಕೆಲಸದ ಅವಧಿಯಲ್ಲಿ ದೈಹಿಕವಾಗಿ ಗಾಯವಾದರೆ ಉಚಿತ ಚಿಕಿತ್ಸೆ ನೀಡುವುದು, ಶಾಶ್ವತವಾಗಿ ಅಂಗ ಕಳೆದುಕೊಂಡರೆ ಅಥವಾ ಮರಣ ಹೊಂದಿದರೆ ರೂ. ೨೫,೦೦೦ ಗಳವರೆಗೆ ಪರಿಹಾರ ಧನ ನೀಡುವುದು, ಉದ್ಯೋಗಕ್ಕಾಗಿ ಹೆಸರು ನೋಂದಾಯಿಸಿಕೊಂಡವರಿಗೆ ೧೫ ದಿವಸದೊಳಗಡೆ ಕೆಲಸ ಕೊಡದಿದ್ದರೆ ಅಂತಹವರಿಗೆ ನಿರುದ್ಯೋಗ ಭತ್ಯೆ ನೀಡುವುದು ಮತ್ತು ಕೆಲಸದ ಸ್ಥಳ ೫ ಕಿ.ಮೀ. ವ್ಯಾಪ್ತಿಗಿಂತ ದೂರವಿದ್ದರೆ ದಿನವೊಂದಕ್ಕೆ ನೈಜ ಕೂಲಿಯಲ್ಲಿ ಶೇಕಡ ೧೦ರಷ್ಟು ಹೆಚ್ಚಿನ ಕೂಲಿ ಕೊಡುವುದು, ಇಂತಹ ಹಲವಾರು ವೈಶಿಷ್ಟ್ಯಗಳನ್ನು ಹೊಂದಿರುವ ಈ ಯೋಜನೆಯು ಗ್ರಾಮೀಣ ಪ್ರದೇಶಗಳಲ್ಲಿ ರಾಜಕೀಯ ಭ್ರಷ್ಟಾಚಾರದಿಂದಾಗಿ ಅವನತಿಯ ಹಂತದಲ್ಲಿರುವುದು ವಿಷಾದನೀಯ ಸಂಗತಿಯಾಗಿದೆ. ಆದರೂ ಕೂಡ ಕೇಂದ್ರ ಸರ್ಕಾರ ಪ್ರತಿ ವರ್ಷ ಬಜೆಟ್‌ನಲ್ಲಿ ಈ ಯೋಜನೆಗಾಗಿ ಕೋಟಿಗಟ್ಟಲೆ ಹಣ ತೆಗೆದಿರಿಸುತ್ತಿದೆ. ಯೋಜನೆಯ ಸಾಧನೆಯನ್ನೂ ಕೇವಲ ದಾಖಲೆಗಳಲ್ಲಿ ಮಾತ್ರ ತೋರಿಸಲಾಗುತ್ತದೆ. ಪ್ರಾರಂಭದಲ್ಲಿ ಕೇವಲ ಕೆಲವೇ ಜಿಲ್ಲೆಗಳನ್ನು ಮಾತ್ರ ಈ ಯೋಜನೆಯಲ್ಲಿ ತೆಗೆದುಕೊಳ್ಳಲಾಗಿತ್ತು. ಈ ಹಂತದ ಸಾಧನೆಯನ್ನು ಮೌಲ್ಯೀಕರಿಸಿ, ಎರಡನೆಯ ಹಂತದಲ್ಲಿ ಅದರ ಎರಡರಷ್ಟು ಜಿಲ್ಲೆಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಯಿತು, ೨೦೧೦ರೊಳಗಾಗಿ ಮೂರನೆಯ ಹಂತದಲ್ಲಿ ಭಾರತದ ಎಲ್ಲಾ ಜಿಲ್ಲೆಗಳಲ್ಲಿ ಯೋಜನೆ ಅನುಷ್ಠಾನಗೊಳಿಸುವ ಗುರಿಯಿತ್ತು.

### ಅನುದಾನ ಅನುಪಾತ

ಇದು ಕೇಂದ್ರ ಹಾಗೂ ರಾಜ್ಯ ಸರ್ಕಾರದ ಯೋಜನೆಯಾಗಿದ್ದು, ಸುಮಾರು ೯೦:೧೦ರ ಅನುಪಾತದಲ್ಲಿ ಅನುದಾನವನ್ನು ಒದಗಿಸುವ ಮೂಲಕ ಇದನ್ನು ಕೇಂದ್ರ ಸರ್ಕಾರದ ಪ್ರಾಯೋಜಿತ ಯೋಜನೆಯನ್ನಾಗಿ ಅನುಷ್ಠಾನಗೊಳಿಸಲಾಗಿದೆ.

### ನಿಧಿ ನಿರ್ವಹಣೆ

ಯೋಜನೆಯ ಅವಧಿಯಲ್ಲಿ ನಿಧಿ ನಿರ್ವಹಣೆಯು ಯಾವ ರೀತಿಯಲ್ಲಿರುತ್ತದೆ ಎಂಬುದನ್ನು ಈ ಕೆಳಗಿನ ಕೋಷ್ಟಕವು ಪ್ರಸ್ತುತಪಡಿಸುತ್ತದೆ.

**ಕೋಷ್ಟಕ - ೧ : ನಿಧಿ ನಿರ್ವಹಣೆ (ಪ್ರತಿಶತದಲ್ಲಿ)**

| ಕ್ರ.ಸಂ. | ವಿವರಣೆ | ಕೇಂದ್ರ - ರೂ.ಗಳು | ರಾಜ್ಯ ರೂ.ಗಳು |
|---|---|---|---|
| ೧. | ಕೌಶಲ್ಯರಹಿತ ಕೆಲಸಗಾರರ ಕೂಲಿ | ೧೦೦.೦೦ | – |
| ೨. | ಸಾಮಗ್ರಿ ಬೆಲೆ | ೭೫.೦೦ | ೨೫.೦೦ |
| ೩. | ನಿರುದ್ಯೋಗ ಭತ್ಯೆ | – | ೧೦೦.೦೦ |
| ೪. | ಆಡಳಿತಾತ್ಮಕ ವೆಚ್ಚ | ಕೇಂದ್ರ ಮತ್ತು ರಾಜ್ಯಗಳ ಅನುದಾನದ ನಿಗದಿತ ಪ್ರಮಾಣದಲ್ಲಿ | |

(*Source :* google.co.in/nregp/management of fund)

ಒಟ್ಟು ಕೆಲಸಕಾರರ ವೇತನವನ್ನು ಕೇಂದ್ರ ಸರ್ಕಾರ ಭರಿಸಿದರೆ, ನಿರುದ್ಯೋಗ ಭತ್ಯೆಯನ್ನು ರಾಜ್ಯ ಸರ್ಕಾರ ಭರಿಸುತ್ತದೆ. ಆಡಳಿತಾತ್ಮಕ ವೆಚ್ಚವು ಎರಡು ಸರಕಾರಗಳು ನಿಗದಿಪಡಿಸಿದ ಅನುದಾನದ ಮೇಲೆ ಅವಲಂಬಿತವಾಗಿರುತ್ತದೆ. ಇದರ ಪರಿಣಾಮಕಾರಿ ಉಪಯೋಗಕ್ಕಾಗಿ ಜಿಲ್ಲಾ ಪಂಚಾಯತಿಯಲ್ಲಿ ೨ ಖಾತೆಗಳು, ತಾಲ್ಲೂಕು ಮತ್ತು ಗ್ರಾಮ ಪಂಚಾಯತಿಗಳಲ್ಲಿ ತಲಾ ೪ ಖಾತೆಗಳನ್ನು ನಿರ್ವಹಿಸುವುದು ಕಡ್ಡಾಯವಾಗಿದೆ. ಈ ರೀತಿ ಆಗದಿದ್ದಾಗ ನಿಧಿ ನಿರ್ವಹಣೆಗೆ ಹಣಕಾಸಿನ ನೆರವು ಅವಶ್ಯವಾಗಿರುವುದನ್ನು ಗಮನದಲ್ಲಿಟ್ಟುಕೊಂಡು ಕೇಂದ್ರ ಸರ್ಕಾರ ಪ್ರತಿ ಹಣಕಾಸು ವರ್ಷದಲ್ಲಿ ಹೆಚ್ಚಿನ ಹಣ ಬಿಡುಗಡೆ ಮಾಡುತ್ತಿರುವುದನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

### ಹಣಕಾಸಿನ ನೆರವು

ಈ ಯೋಜನೆಯ ಖರ್ಚು ಮೊದಲಿಗೆ ಪ್ರತಿ ವರ್ಷದಲ್ಲಿ ರೂ. ೪೦,೦೦೦ ಕೋಟಿ ಎಂದು ನಿರೀಕ್ಷಿಸಲಾಗಿತ್ತು. ಆದರೆ ಗ್ರಾಮೀಣಾಭಿವೃದ್ಧಿ ಸಚಿವಾಲಯವು ನೀಡಿದ ಕೇವಲ ರೂ. ೪೦೦೦ ಕೋಟಿಗಳೊಂದಿಗೆ ಈ ಯೋಜನೆಯನ್ನು ಪ್ರಾರಂಭ ಮಾಡಲಾಯಿತು. ಇದನ್ನು ಪ್ರಾರಂಭದಲ್ಲಿ ರಾಷ್ಟ್ರೀಯ ಕೂಲಿಗಾಗಿ ಕಾಳು ಯೋಜನೆಯ ಜೊತೆಗೆ ಕಾರ್ಯಾರಂಭ ಮಾಡಲಾಯಿತು. ಆಗ ಅದರಲ್ಲಿ ರೂ. ೬,೦೦೦ ಕೋಟಿಯಷ್ಟು ಹಣವಿತ್ತು. ನಂತರದಲ್ಲಿ ಇದನ್ನು ಸ್ವತಂತ್ರ ಯೋಜನೆಯನ್ನಾಗಿಸಿ ವಿಶೇಷ ಹಣಕಾಸಿನ ನೆರವು ಒದಗಿಸಲಾಯಿತು. ಈ ಕೆಳಗಿನ ಕೋಷ್ಟಕದಿಂದ ಹಣಕಾಸಿನ ನೆರವಿನ ಪ್ರಮಾಣವನ್ನು ತಿಳಿಯಬಹುದು.

**ಕೋಷ್ಟಕ - ೨ : ಹಣಕಾಸಿನ ನೆರವು**

| ಕ್ರ. ಸಂ. | ವರ್ಷಗಳು | ಒಟ್ಟು ಹಣ (ಕೋಟಿಗಳಲ್ಲಿ) | ಬೆಳವಣಿಗೆ ದರ (ಪ್ರತಿಶತ) |
|---|---|---|---|
| ೧ | ೨೦೦೫-೦೬ | ೪೦೦೦ | – |
| ೨ | ೨೦೦೬-೦೭ | ೧೧೩೦೦ | ೧೮೨.೫೦ |
| ೩ | ೨೦೦೭-೦೮ | ೧೨೫೦೦ | ೧೦.೬೨ |
| ೪ | ೨೦೦೮-೦೯ | ೧೬೦೨೫ | ೨೮.೨೦ |
| ೫ | ೨೦೦೯-೧೦ | ೩೯೧೦೦ | ೧೪೪.೦೦ |

(*Source :* google.co.in/financial assistance of nregp)

ಹಣಕಾಸಿನ ಪ್ರಮಾಣ ಹೆಚ್ಚಾದರೂ ಸಹಿತ, ಅದರ ಬೆಳವಣಿಗೆಯ ದರವು ಕಡಿಮೆಯಾಗುತ್ತಾ ಬಂದಿದೆ. ೨೦೦೬-೦೭ರಲ್ಲಿ ಶೇಕಡ ೧೮೨.೫೦ರಷ್ಟು ಹಣ ಹಿಂದಿನ ವರ್ಷಕ್ಕಿಂತ ಹೆಚ್ಚಾಗಿದೆ. ಆದರೆ ೨೦೦೯-೧೦ರ ಅವಧಿಯಲ್ಲಿ ಇದರ ಪ್ರಮಾಣ ಶೇಕಡ ೧೪೪ಕ್ಕೆ ಇಳಿದಿದೆ. ಅಂದರೆ ಶೇಕಡ ೩೮.೫೦ರಷ್ಟು ಬೆಳವಣಿಗೆ ದರ ಕಡಿಮೆಯಾಗಿದೆ. ಆದರೂ ಕೂಡ ಈ ಯೋಜನೆಯು ಯಶಸ್ವಿಯತ್ತ ಸಾಗುತ್ತಿದೆ ಎಂಬುದಕ್ಕೆ ಹಲವಾರು ನಿದರ್ಶನಗಳಿವೆ.

### ೧೦೦ ದಿನಗಳ ಕೆಲಸ ಎಲ್ಲರಿಗೂ ಸಿಕ್ಕಿದೆಯೇ ?

ಪ್ರಸ್ತುತ ಕೇಂದ್ರದ ಯುಪಿಎ ಸರ್ಕಾರ ಗ್ರಾಮೀಣ ಜನರಿಗೆ ೧೦೦ ದಿನಗಳ ಉದ್ಯೋಗ ಭರವಸೆ ಯೋಜನೆಯನ್ನು ಪ್ರಾರಂಭಿಸಿತು. ಯೋಜನೆಯ ವೈಫಲ್ಯಗಳನ್ನು ಕುರಿತು ಹಲವಾರು ಚರ್ಚೆಗಳಾದವು. ಆದರೆ ವೈಫಲ್ಯಗಳಿಗೆ ಪರಿಹಾರಗಳು ಮಾತ್ರ ಸಿಗಲಿಲ್ಲ. ಅವುಗಳಲ್ಲಿ ೧೦೦ ದಿನಗಳವರೆಗೆ ಎಲ್ಲರಿಗೆ ಕೆಲಸ ಸಿಕ್ಕಿದೆಯೇ? ಆದರೆ ತಜ್ಞರಿಂದ ಹಿಡಿದು ಜನಸಾಮಾನ್ಯರಿಗೂ ತಿಳಿದಿರುವ ಅಂಶವೆಂದರೆ ಆಡಳಿತಾತ್ಮಕ ಭ್ರಷ್ಟಾಚಾರ ಮತ್ತು ಕೆಲಸದಲ್ಲಿ ಯಂತ್ರಗಳ ಬಳಕೆಯಿಂದಾಗಿ ಈ ಯೋಜನೆಯಿಂದ ಎಲ್ಲ ಉದ್ಯೋಗ ಬೇಡಿಕೆದಾರರಿಗೆ ೧೦೦ ದಿನಗಳವರೆಗೆ ಉದ್ಯೋಗ ಒದಗಿಸಲು ಸಾಧ್ಯವಾಗಿಲ್ಲ. ಕೇವಲ ಬೆರಳೆಣಿಕೆಯಷ್ಟು ಕಾರ್ಮಿಕರಿಗೆ ಮಾತ್ರ ಕೆಲಸ ಸಿಕ್ಕಿದೆ ಎಂಬುದನ್ನು ಈ ಅಂಕಿ-ಅಂಶಗಳು ಸ್ಪಷ್ಟಪಡಿಸುತ್ತವೆ: ೨೦೦೬-೦೭ರಲ್ಲಿ ಶೇಕಡ ೧೦.೨೯, ೨೦೦೭-೦೮ರಲ್ಲಿ ಶೇಕಡ ೧೦.೬೨ ಮತ್ತು ೨೦೦೮-೦೯ರಲ್ಲಿ ಕೇವಲ ಶೇಕಡ ೧೪.೪೮ರಷ್ಟು ಜನರಿಗೆ ಮಾತ್ರ ೧೦೦ ದಿನಗಳವರೆಗೆ ಕೆಲಸ ಸಿಕ್ಕಿದೆ ('ಸ್ಪರ್ಧಾ ಸ್ಫೂರ್ತಿ', ೨೦೦೯). ಈ ಅಂಕಿ-ಅಂಶಗಳನ್ನು ನೋಡಿದಾಗ ಈ ಯೋಜನೆಯು ಕೂಡ ನಶಿಸುವ ಯೋಜನೆಗಳ ಸಾಲಿಗೆ ಸೇರುವ ದಿನಗಳು ದೂರವಿಲ್ಲ ಎಂದರೂ ತಪ್ಪಾಗಲಿಕ್ಕಿಲ್ಲ.

### ಕರ್ನಾಟಕ ಮತ್ತು ಉದ್ಯೋಗ ಖಾತ್ರಿ ಯೋಜನೆ

ಯೋಜನೆಯ ಪ್ರಾರಂಭದ ಹಂತದಲ್ಲಿ ರಾಜ್ಯದ ೫ ಜಿಲ್ಲೆಗಳನ್ನು (ಬೀದರ, ಗುಲಬರ್ಗಾ, ರಾಯಚೂರು, ದಾವಣಗೆರೆ ಮತ್ತು ಚಿತ್ರದುರ್ಗ) ಮಾತ್ರ ಆಯ್ಕೆ ಮಾಡಲಾಗಿತ್ತು. ನಂತರ ದ್ವಿತೀಯ ಹಂತದಲ್ಲಿ ೭ ಜಿಲ್ಲೆಗಳಿಗೆ ವಿಸ್ತರಿಸಿ ತೃತೀಯ ಹಂತದಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ರಾಜ್ಯದಲ್ಲಿ ಒಟ್ಟು ೩೦೩೭ ಪಂಚಾಯತಿಗಳಿದ್ದು, ೧೩೯ರಷ್ಟು ಯೋಜನೆಯ ಅನುಷ್ಠಾನದ ಸಂಸ್ಥೆಗಳಿವೆ. ಇಲ್ಲಿಯವರೆಗೆ ೩೫೭೩೭ ಕಾಮಗಾರಿಗಳನ್ನು ಕೈಗೆತ್ತಿಕೊಂಡು, ೨೨೬೭೬ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ. ಮತ್ತು ೧೪೨.೯ ಲಕ್ಷ ಮಾನವ ದಿನಗಳ ಉದ್ಯೋಗ ಒದಗಿಸಿ ರಾಜ್ಯದ ಒಟ್ಟಾರೆ ೪.೬೦ ಲಕ್ಷ ಕುಟುಂಬಗಳಿಗೆ ಉದ್ಯೋಗ ಒದಗಿಸಿದೆ. ಇದಕ್ಕಾಗಿ ಒಟ್ಟಾರೆ ನಿಧಿ ೪೮೭.೨೬ ಕೋಟಿ ರೂಪಾಯಿಗಳಾಗಿದ್ದು, ೧೭೬.೬ ಕೋಟಿ ರೂಪಾಯಿಗಳಷ್ಟು ಹಣವನ್ನು ಖರ್ಚು ಮಾಡಲಾಗಿದೆ. ಹಂತ ಹಂತವಾಗಿ ನೋಡಿದಾಗ ಕರ್ನಾಟಕದಲ್ಲಿ ಈ ಯೋಜನೆಯಿಂದ ಎಷ್ಟು ಕುಟುಂಬಗಳು ಲಾಭ ಪಡೆದಿವೆ ಎಂಬುದನ್ನು ಪಕ್ಕದ ೩ನೆಯ ಕೋಷ್ಟಕದಿಂದ ತಿಳಿದುಕೊಳ್ಳಬಹುದು.

ಕರ್ನಾಟಕದಲ್ಲಿ ಹೆಚ್ಚಿನ ಜಾಬ್ ಕಾರ್ಡುಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳನ್ನು ಹೊರತುಪಡಿಸಿ ಇತರೆ ಜನಾಂಗದವರಿಗೆ ಹೆಚ್ಚಿಗೆ ವಿತರಿಸಲಾಗಿದೆ. ಅದರಲ್ಲಿ ಬೆಳಗಾವಿ, ಗುಲಬರ್ಗಾ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರನ್ನು ಕಡೆಗಣಿಸಲಾಗಿದೆ. ಒಟ್ಟಾರೆಯಾಗಿ ನೋಡಿದಾಗ ಬೆಳಗಾವಿ, ಗುಲಬರ್ಗಾ, ಚಿತ್ರದುರ್ಗ, ತುಮಕೂರು, ರಾಯಚೂರು, ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚಾಗಿರುವುದು ಕಂಡುಬಂದಿದೆ. ರಾಜ್ಯದಲ್ಲಿ ಉದ್ಯೋಗಕ್ಕಾಗಿ ಬೇಡಿಕೆ ಸಲ್ಲಿಸಿದ ಅಂಕಿ-ಅಂಶಗಳನ್ನು ನೋಡಿದಾಗ ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗದ ಅವಶ್ಯಕತೆ ಹೆಚ್ಚಾಗಿರುವುದನ್ನು ಮತ್ತೊಮ್ಮೆ ಸಾಬೀತು ಪಡಿಸಿದಂತಾಗಿದೆ.

ಶೇಕಡ ೯೩.೫೧ರಷ್ಟು ಪ್ರಥಮ, ಶೇಕಡ ೯೬.೫೭ರಷ್ಟು ದ್ವಿತೀಯ ಮತ್ತು ಶೇಕಡ ೯೭.೩೬ರಷ್ಟು ಕುಟುಂಬಗಳಿಗೆ ತೃತೀಯ ಹಂತದಲ್ಲಿ ಉದ್ಯೋಗ ಕಲ್ಪಿಸಿಕೊಡಲಾಗಿದೆ. ಆದರೆ ಎಲ್ಲಾ ಕುಟುಂಬಗಳಿಗೆ ಈ ಯೋಜನೆಯಿಂದ ಕೆಲಸ ಕೊಡಲು ಸಾಧ್ಯವಾಗಿಲ್ಲ. ಅದರಲ್ಲಿ ಶೇಕಡ ೭೦.೯೬ರಷ್ಟು ಪ್ರಥಮ, ಶೇಕಡ ೨೫.೬೬ರಷ್ಟು ದ್ವಿತೀಯ ಮತ್ತು ಶೇಕಡ ೩೭.೭೬ರಷ್ಟು ಕುಟುಂಬಗಳು ತೃತೀಯ ಹಂತದಲ್ಲಿ ಕೆಲಸದಲ್ಲಿ ತೊಡಗಿವೆ. ಒಟ್ಟು ಬೇಡಿಕೆಗೆ ತಕ್ಕಂತೆ ಕೆಲಸ ಪೂರೈಸಿಲ್ಲ. ಆದರೂ ಕೂಡ ಈ ಯೋಜನೆಯ ಪ್ರಗತಿಯನ್ನು ನೋಡಿದಾಗ ಪೂರಕವಾದ ಬದಲಾವಣೆಗಳು ಕಂಡುಬರುತ್ತವೆ. ಇದರಿಂದಾಗಿ ಈ ಯೋಜನೆಯು ಗ್ರಾಮೀಣ ಪ್ರದೇಶದಲ್ಲಿ ಅತ್ಯಂತ ಮಹತ್ವ ಪಡೆದುಕೊಂಡಿದೆ.



ಪರ್ವಾಗಿಲ್ಲ... ನಕಲಿ ಪಡಿತರ ಕೊಡಿ!

### ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯ ಮಹತ್ವ

**ಕೋಷ್ಟಕ - ೩ : ಕರ್ನಾಟಕದಲ್ಲಿ ಜಿಲ್ಲಾವಾರು ಯೋಜನೆ ಪ್ರಗತಿ (ಲಕ್ಷಗಳಲ್ಲಿ)**

| ಕ್ರ. ಸಂ. | ವಿವರಣೆ | ಪ್ರಥಮ ಹಂತ | ದ್ವಿತೀಯ ಹಂತ | ತೃತೀಯ ಹಂತ |
|---|---|---|---|---|
| ೧. | ಜಾಬ್ ಕಾರ್ಡ್ ತೆಗೆದುಕೊಂಡ ಕುಟುಂಬಗಳು | – | – | – |
| | (ಅ) ಪರಿಶಿಷ್ಟ ಜಾತಿ | ೨೪೪೭೩೪ (೨೪.೩೪) | ೨೦೨೨೮೦ (೧೯.೮೩) | ೩೮೬೪೦೭ (೨೩.೦೨) |
| | (ಆ) ಪರಿಶಿಷ್ಟ ಪಂಗಡ | ೧೬೩೯೪೯ (೧೬.೩೦) | ೯೪೦೫೯ (೯.೨೨) | ೧೪೫೮೪೮ (೮.೬೯) |
| | (ಇ) ಇತರೆ ವರ್ಗದವರು | ೫೯೬೯೦೫ (೫೯.೩೬) | ೭೨೩೭೪೪ (೭೦.೯೫) | ೧೧೪೬೧೬೭ (೬೮.೨೯) |
| | (ಈ) ಒಟ್ಟು | ೧೦೦೫೫೮೮ (೧೦೦.೦೦) | ೧೦೨೦೦೮೩ (೧೦೦.೦೦) | ೧೬೭೮೪೨೨ (೧೦೦.೦೦) |
| ೨. | ಉದ್ಯೋಗಕ್ಕಾಗಿ ಬೇಡಿಕೆ ಸಲ್ಲಿಸಿದ ಕುಟುಂಬಗಳು | ೬೧೮೫೪ | ೭೩೪೯೮ | ೧೯೦೨೪೧ |
| ೩. | ಉದ್ಯೋಗ ಒದಗಿಸಿಕೊಡಲಾದ ಕುಟುಂಬಗಳ ಸಂಖ್ಯೆ | ೫೭೮೩೯ | ೭೦೯೭೯ | ೧೮೫೨೨೨ |
| ೪. | ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಅಡಿಯಲ್ಲಿ ಕೆಲಸ ಮಾಡುವ ಕುಟುಂಬಗಳು | ೪೧೦೪೬ | ೧೮೨೧೧ | ೬೯೯೪೭ |

(*Source :* google.co.in/wage employment programmes in karnataka)

೧. ಗ್ರಾಮೀಣ ಪ್ರದೇಶದಲ್ಲಿ ಕುಶಲ ಕಾರ್ಮಿಕರಿಗೆ ಉದ್ಯೋಗಾವಕಾಶ ನೀಡುವುದು.
೨. ಗ್ರಾಮೀಣ ಪ್ರದೇಶದಲ್ಲಿ ನಿರುದ್ಯೋಗ ಪ್ರಮಾಣವನ್ನು ಕಡಿಮೆ ಮಾಡುವುದು.
೩. ಬಡತನ ರೇಖೆಯ ಕೆಳಗಿರುವವರ ಪ್ರಮಾಣ ತಗ್ಗಿಸಿ, ಅವರ ವಾರ್ಷಿಕ ಆದಾಯದ ಪ್ರಮಾಣವನ್ನು ಹೆಚ್ಚಿಸುವುದು.
೪. ಗ್ರಾಮೀಣ ಪ್ರದೇಶದಲ್ಲಿ ಚರಂಡಿ ವ್ಯವಸ್ಥೆ, ಶೌಚಾಲಯ ನಿರ್ಮಾಣ ಮತ್ತು ಬೀದಿ ರಸ್ತೆಗಳ ದುರಸ್ತಿ ಮತ್ತು ನಿರ್ಮಾಣ ಕಾರ್ಯಗಳನ್ನು ಕೈಗೆತ್ತಿಕೊಳ್ಳುವುದು.
೫. ಕೃಷಿ ಅಭಿವೃದ್ಧಿಗಾಗಿ ಕಾರ್ಯಕ್ರಮಗಳನ್ನು ರೂಪಿಸುವುದು.
೬. ಜಾಬ್ ಕಾರ್ಡ್ ತೆಗೆದುಕೊಂಡು, ಉದ್ಯೋಗಕ್ಕಾಗಿ ಬೇಡಿಕೆಯಿಟ್ಟ ೧೫ ದಿವಸಗಳೊಳಗಾಗಿ ಉದ್ಯೋಗ ಒದಗಿಸಿಕೊಡದಿದ್ದರೆ ಇವರಿಗೆ ನಿರುದ್ಯೋಗ ಭತ್ಯೆ ನೀಡುವುದು. ಇಂತಹ ಹಲವಾರು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಗ್ರಾಮೀಣ ಪ್ರದೇಶದಲ್ಲಿ ಅನುಷ್ಠಾನಗೊಳ್ಳುತ್ತಿರುವ ಈ ಯೋಜನೆ ಪ್ರಮುಖ ಅಂಶವಾದರೂ ಭ್ರಷ್ಟ ರಾಜಕಾರಣಿಗಳಿಂದಾಗಿ ಹಲವಾರು ವೈಫಲ್ಯಗಳಿಗೊಳಗಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಈ ಯೋಜನೆಯ ಬಗೆಗೆ ಇದ್ದ ಜನರ ಅಭಿಪ್ರಾಯವನ್ನು ಕ್ಷೇತ್ರಾಧ್ಯಯನದ ಮೂಲಕ ಸಂಗ್ರಹಿಸಲಾಗಿದೆ. ಅವುಗಳನ್ನು ಮುಂದಿನ ಪುಟದಲ್ಲಿರುವ ಕೋಷ್ಟಕಗಳಲ್ಲಿ ನೀಡಲಾಗಿದೆ.

### ಕಾರ್ಮಿಕರ ಶೈಕ್ಷಣಿಕ ಮಟ್ಟ

ಇದು ಅವರು ಕೆಲಸ ಪಡೆಯುವಿಕೆ, ವೇತನ ನೀಡುವಿಕೆ ಮತ್ತು ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಉದ್ಯೋಗ ಖಾತ್ರಿಯ ಯೋಜನೆಯಲ್ಲಿ ಹೆಸರು ನೋಂದಾಯಿಸಿಕೊಂಡ ಕಾರ್ಮಿಕರ ಶೈಕ್ಷಣಿಕ ಮಟ್ಟವನ್ನು ನೋಡಿದಾಗ ಸುಮಾರು ಶೇಕಡ ೯೦ಕ್ಕಿಂತ ಹೆಚ್ಚಿನ

ಕಾರ್ಮಿಕರು ಅನಕ್ಷರಸ್ಥರಾಗಿರುವುದನ್ನು ಈ ಕೋಷ್ಟಕದ ಸಹಾಯದಿಂದ ತಿಳಿಯಬಹುದು :

**ಕೋಷ್ಟಕ - ೪ : ಕಾರ್ಮಿಕರ ಶೈಕ್ಷಣಿಕ ಮಟ್ಟ**

| ಕ್ರ. ಸಂ. | ಶಿಕ್ಷಣದ ಮಟ್ಟ | ಕಾರ್ಮಿಕರ ಸಂಖ್ಯೆ ಶೇಕಡವಾರು | ಪ್ರತಿಶತ |
|---|---|---|---|
| ೧. | ಅನಕ್ಷರಸ್ಥರು | ೭೫ | ೯೩.೭೫ |
| ೨. | ಸಾಕ್ಷರರು | – | – |
| | (ಅ) ಪ್ರಾಥಮಿಕ | ೦೩ | ೦೩.೭೫ |
| | (ಆ) ಪ್ರೌಢ | ೦೨ | ೦೨.೫೦ |
| | (ಇ) ಪದವಿ | – | – |
| | (ಈ) ಇತರೆ | – | – |
| | **ಒಟ್ಟು** | ೮೦ | ೧೦೦ |

(ಮೂಲ : ಕ್ಷೇತ್ರಾಧ್ಯಾಯನ)

ಸುಮಾರು ಶೇಕಡ ೬.೨೫ರಷ್ಟು ಕಾರ್ಮಿಕರು ಮಾತ್ರ ಸಾಕ್ಷರರಿದ್ದು ಅಕುಶಲರಾಗಿದ್ದಾರೆ. ಇವರನ್ನು ಸರ್ಕಾರಿ ಅಧಿಕಾರಿಗಳು ಕೆಲಸದಿಂದ ತೆಗೆದುಹಾಕುತ್ತೇವೆಂದು ಬೆದರಿಸಿ ಅನಕ್ಷರರ ವೇತನದಲ್ಲಿ ಭ್ರಷ್ಟಾಚಾರವೆಸಗುತ್ತಾರೆ ಎಂಬುದು ಕ್ಷೇತ್ರಾಧ್ಯಯನದಿಂದ ತಿಳಿದುಬಂದಿದೆ.

## ಕೆಲಸದ ದಿನಗಳು ಮತ್ತು ವೇತನ

ವರ್ಷದಲ್ಲಿ ಕೆಲಸ ಮಾಡಲು ಇಚ್ಛಿಸುವ ಪ್ರತಿ ಕುಟುಂಬದ ಸದಸ್ಯರಿಗೆ ೧೦೦ ದಿನಗಳ ವರೆಗೆ ಉದ್ಯೋಗ ಕೊಡುವಂತಹ ನಿಯಮವನ್ನು ಪ್ರತಿ ಗ್ರಾಮದಲ್ಲಿ ಯಾರೂ ಪಾಲಿಸುತ್ತಿಲ್ಲ. ಶೇಕಡ ೯೦ರಷ್ಟು ಕಾಮಗಾರಿಗಳಲ್ಲಿ ಜೆಸಿಬಿಯಂತಹ ಯಂತ್ರಗಳನ್ನು ಬಳಸುವುದರಿಂದ ಕಾರ್ಮಿಕರ ಕೆಲಸದ ದಿನಗಳಲ್ಲಿ ಕಡಿಮೆಯಾಗಿರುವುದು ಕಂಡುಬಂದಿದೆ ಮತ್ತು ಅಧಿಕಾರಿಗಳು ಮತ್ತು ಚುನಾಯಿತ ಪ್ರತಿನಿಧಿಗಳ ಹಿಂಬಾಲಕರು ಜಾಬ್ ಕಾರ್ಡ್ ಪಡೆದವರ ಹೆಸರಿನಲ್ಲಿ ಅಕ್ರಮವಾಗಿ ವೇತನ ತೆಗೆದುಕೊಳ್ಳುತ್ತಿರುವುದು ಕ್ಷೇತ್ರಾಧ್ಯಾಯನದಿಂದ ತಿಳಿದುಬಂದಿದೆ. ಇದರಿಂದ ನಿಗದಿಯಾದ ವೇತನಕ್ಕಿಂತ ಸುಮಾರು ಶೇಕಡ ೩೦ರಷ್ಟು ಕಡಿಮೆ ಹಣ ತಮಗೆ ಸಿಗುತ್ತದೆ ಎಂದು ಶೇಕಡ ೭೨.೪೮ರಷ್ಟು ಜನರು ಅಭಿಪ್ರಾಯಪಟ್ಟಿದ್ದಾರೆ.

## ಸಾಮಾಜಿಕ ಭದ್ರತೆ ಹಾಗೂ ನಿರುದ್ಯೋಗ ಭತ್ಯೆ

ಇದಕ್ಕೆ ಸಂಬಂಧಿಸಿದಂತೆ ಕೆಲಸದ ಅವಧಿಯಲ್ಲಿ ದೈಹಿಕವಾಗಿ ಗಾಯವಾದಲ್ಲಿ ಉಚಿತ ಚಿಕಿತ್ಸೆ ಒದಗಿಸುವುದು ಹಾಗೂ ಆಸ್ಪತ್ರೆಗೆ ಸೇರಿದ ಅವಧಿಗೆ ಅರ್ಧ ಕೂಲಿ ನೀಡಬೇಕೆಂಬ ನಿಯಮವಿದೆ; ಆದರೆ ಸಂಬಂಧಿಸಿದ ಯಾವುದೇ ಅಧಿಕಾರಿಗಳು ಈ ರೀತಿಯಾದ ಭದ್ರತೆ ತಮಗೆ ನೀಡಿರುವುದಿಲ್ಲ ಎಂದು ಸುಮಾರು ಶೇಕಡ ೬೮ರಷ್ಟು ಜನರು ಹೇಳುತ್ತಾರೆ.

ಉದ್ಯೋಗಕ್ಕಾಗಿ ಗ್ರಾಮ ಪಂಚಾಯತಿಯಲ್ಲಿ ಹೆಸರನ್ನು ನೋಂದಾಯಿಸಿದ ನಂತರ ಅರ್ಜಿ ಸಲ್ಲಿಸಿದ ೧೫ ದಿನಗಳಲ್ಲಿ ಉದ್ಯೋಗ ಲಭ್ಯವಾಗದಿದ್ದಲ್ಲಿ ಗ್ರಾಮ ಪಂಚಾಯತಿ ಉತ್ಪಾದನಾ ಸಮಿತಿಯು ಕಾರ್ಯಕ್ರಮ ಅಧಿಕಾರಿಯವರ ಒಪ್ಪಿಗೆ ಪಡೆದು ನಿರುದ್ಯೋಗ ಭತ್ಯೆಯನ್ನು ನೀಡಬೇಕು ಎಂಬ ನಿಯಮವಿದ್ದರೂ ಕೆಲಸಕ್ಕಾಗಿ ಅರ್ಜಿ ಸಲ್ಲಿಸಿದ ಸುಮಾರು ದಿನಗಳಾದರೂ ಯಾವುದೇ ನಿರುದ್ಯೋಗ ಭತ್ಯೆ ನೀಡಿರುವುದಿಲ್ಲ ಎಂದು ಸುಮಾರು ಶೇಕಡ ೯೦ಕ್ಕಿಂತ ಹೆಚ್ಚಿನ ಕಾರ್ಮಿಕರು ಕ್ಷೇತ್ರಾಧ್ಯಯನ ಸಮಯದಲ್ಲಿ ತಿಳಿಸಿರುತ್ತಾರೆ.

## ರಾಜಕೀಯ ಪಾಲ್ಗೊಳ್ಳುವಿಕೆ

ಗ್ರಾಮೀಣ ಪ್ರದೇಶದಲ್ಲಿನ ಪ್ರತಿಯೊಂದು ಗ್ರಾಮ ಪಂಚಾಯತಿಗಳು ರಾಜಕೀಯ ಬೆಂಬಲದಿಂದಲೇ ನಡೆಯುತ್ತಿವೆ. ಸರಕಾರದ ಯಾವುದೇ ಯೋಜನೆ ಅನುಷ್ಠಾನವಾಗಲಿ ಅದು ಪಂಚಾಯತಿ ಮಟ್ಟದಲ್ಲಿ ಅಧ್ಯಕ್ಷನ ಅನುಮತಿ ಮೇರೆಗೆ ಆ ಕ್ಷೇತ್ರದ ವಿಧಾನಸಭೆಯ ಸದಸ್ಯರ ಆದೇಶದ ಮೇಲೆ ರಚಿತವಾಗುತ್ತದೆ. ಶೇಕಡ ೯೦ರಷ್ಟು ಯೋಜನೆಗಳು ಅವನ ಬೆಂಗಲಿಗರಿಗೆ ದೊರೆಯುತ್ತವೆ. ಈ ಯೋಜನೆಗೆ ಸಂಬಂಧಿಸಿದಂತೆ, ಸರಕಾರಿ ಅಧಿಕಾರಿಗಳು ಮತ್ತು ಚುನಾಯಿತ ಪ್ರತಿನಿಧಿಗಳು ಉದ್ಯೋಗಕ್ಕಾಗಿ ಹೆಸರು ನೋಂದಾಯಿಸುವಾಗಿನಿಂದ ಹಿಡಿದು ಅವರ ವೇತನ ಪಾವತಿಸುವವರೆಗೆ ಭ್ರಷ್ಟಾಚಾರವೆಸಗುತ್ತಿದ್ದಾರೆ ಎಂಬುದು ಶೇಕಡ ೯೭ರಷ್ಟು ಕಾರ್ಮಿಕರ ಅನುಭವದಿಂದ ತಿಳಿದುಬಂದಿದೆ.

## ಮಹಿಳೆ ಮತ್ತು ಖಾತ್ರಿ ಯೋಜನೆ

ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ವ್ಯವಸ್ಥೆಯಿಂದ ಮಹಿಳಾ ಸಬಲೀಕರಣ ಮತ್ತು ಆರ್ಥಿಕಾಭಿವೃದ್ಧಿಯ ಕನಸನ್ನು ಇಟ್ಟುಕೊಂಡು ಸ್ಥಾಪಿತವಾದ ಈ ಯೋಜನೆ ಒಂದು ಕಡೆ ಮಹಿಳಾ ಪರವಾದರೆ ಇನ್ನೊಂದು ಕಡೆ ಮಹಿಳಾ ವಿರೋಧವಾಗಿರುವುದು ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ತಿಳಿದುಬಂದಿದೆ. ಯಾವುದೇ ಗ್ರಾಮದ ೫ ಕಿ.ಮೀ. ವ್ಯಾಪ್ತಿಯಲ್ಲಿಯೇ ಈ ಕಾಮಗಾರಿಗಳ ಯೋಜನೆಗಳು ಅನುಷ್ಠಾನವಾಗುವುದರಿಂದ ಮಹಿಳೆಯರು ತಾವು ವಾಸಿಸುವಲ್ಲಿಯೇ ಇದ್ದು, ಕೆಲಸ ಮಾಡಲು ಅವಕಾಶ ದೊರೆಯುವಂತಾಗಿದೆ. ಮಹಿಳೆಯರು ಕೆಲಸಕ್ಕಾಗಿ ದೂರ ಹೋಗುವ ಮತ್ತು ತಡವಾಗಿ ಮನೆಗೆ ತಲುಪುವ ಪ್ರಮೇಯ ಇಲ್ಲದಿರುವುದರಿಂದ ಅವರಿಗೆ ಆರೋಗ್ಯ, ನೆಮ್ಮದಿ ಹಾಗೂ ಸಾಮಾಜಿಕ ಭದ್ರತೆ ದೊರಕಿದಂತಾಗಿದೆ. ಇದರಿಂದಾಗಿ ತಮ್ಮ ಈಗಿನ ಆರ್ಥಿಕ ಪರಿಸ್ಥಿತಿ ಸುಧಾರಿಸಿದೆ ಎನ್ನುತ್ತಾರೆ ಶೇಕಡ ೮೮ಕ್ಕಿಂತ ಹೆಚ್ಚಿನ ಮಹಿಳಾ ಕಾರ್ಮಿಕರು.

## ವಾರ್ಷಿಕ ಆದಾಯ

ಈ ಉದ್ಯೋಗ ಖಾತ್ರಿ ಯೋಜನೆಯಿಂದ ಗ್ರಾಮೀಣ ಪ್ರದೇಶದಲ್ಲಿ ವಾರ್ಷಿಕ ಆದಾಯ ಮತ್ತು ಕಾರ್ಮಿಕರ ಆರ್ಥಿಕ ಸಂಗತಿಗಳು ಸುಧಾರಣೆಗೊಂಡಿದೆ ಎಂದು ತಿಳಿದುಬಂದಿದೆ. ಅವರ ವಾರ್ಷಿಕ ಆದಾಯವನ್ನು ಈ ಕೆಳಗಿನ ಕೋಷ್ಟಕದ ಸಹಾಯದಿಂದ ತಿಳಿದುಕೊಳ್ಳಬಹುದು :

**ಕೋಷ್ಟಕ - ೫ : ವಾರ್ಷಿಕ ಆದಾಯದ ಪ್ರಮಾಣ**

| ಕ್ರ. ಸಂ. | ಆದಾಯದ ಪ್ರಮಾಣ (ರೂ.ಗಳಲ್ಲಿ) | ಕಾರ್ಮಿಕರ ಸಂಖ್ಯೆ ಶೇಕಡವಾರು | ಪ್ರತಿಶತ |
|---|---|---|---|
| ೧. | ೧೦೦೦೦ ಕ್ಕಿಂತ ಕಡಿಮೆ | ೧೫ | ೧೮.೭೫ |
| ೨. | ೧೦೦೦೧ ರಿಂದ ೧೫೦೦೦ | ೨೦ | ೨೫.೦೦ |
| ೩. | ೧೫೦೦೧ ರಿಂದ ೨೦೦೦೦ | ೩೦ | ೩೭.೫೦ |
| ೪. | ೨೦೦೦೧ ರಿಂದ ೨೫೦೦೦ | ೧೦ | ೧೨.೫೦ |
| ೫. | ೨೫೦೦೧ ಮತ್ತು ಹೆಚ್ಚಿಗೆ | ೦೫ | ೦೬.೨೫ |
| | **ಒಟ್ಟು** | ೮೦ | ೧೦೦.೦೦ |

(ಮೂಲ : ಕ್ಷೇತ್ರಾಧ್ಯಾಯನ)

ಉದ್ಯೋಗ ಖಾತ್ರಿ ಯೋಜನೆಯ ಲಾಭ ಪಡೆದುಕೊಂಡ ನಂತರ ಗ್ರಾಮೀಣ ಪ್ರದೇಶದಲ್ಲಿ ಜನರ ಆರ್ಥಿಕ ಸ್ಥಿತಿ-ಗತಿ ಸುಧಾರಿಸಿರುವುದು ತಿಳಿದುಬಂದಿದೆ. ಸುಮಾರು ಶೇಕಡ ೫೬.೨೫ರಷ್ಟು ಜನರು ರೂ. ೧೫೦೦೧ಕ್ಕಿಂತ ಹೆಚ್ಚಿಗೆ ವಾರ್ಷಿಕ ಆದಾಯ ಹೊಂದಿದ್ದಾರೆ. ಅಂತೆಯೇ ಇದರಿಂದ ಅವರ ಜೀವನ ಗುಣಮಟ್ಟ, ಸಾಮಾಜಿಕ ಅಂತಸ್ತು, ಆರೋಗ್ಯ ಮತ್ತು ಶೈಕ್ಷಣಿಕ ಗುಣಮಟ್ಟ ಸುಧಾರಿಸಿರುವುದು ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ತಿಳಿದುಬಂದಿದೆ. ಯೋಜನೆಯ ಮೊದಲು ಆರ್ಥಿಕ ಸ್ಥಿತಿಗತಿಗಳ ಬಗ್ಗೆ ವಿಚಾರಿಸಿದಾಗ ತೀರಾ ಕೆಳಮಟ್ಟದ ಸ್ಥಿತಿ ಇತ್ತು ಎಂಬುದು ಗೊತ್ತಾಗಿದೆ.

## ಯೋಜನೆಯ ವೈಫಲ್ಯಗಳು

ಗ್ರಾಮೀಣ ಪ್ರದೇಶಗಳನ್ನು ಗಮನದಲ್ಲಿಟ್ಟುಕೊಂಡು ಅನುಷ್ಠಾನಗೊಳಿಸಿದ ಈ ಯೋಜನೆಯು ನಗರ ಪ್ರದೇಶಗಳನ್ನು ಕಡೆಗಣಿಸಿದೆ ಎಂದು ಪ್ರಾರಂಭದಲ್ಲೇ ಹಲವಾರು ಟೀಕೆಗಳು ಬಂದಿದ್ದವು. ನಂತರದ ದಿನಗಳಲ್ಲಿ ಈ ಯೋಜನೆಯ ಹೆಚ್ಚಿನ ಅವಶ್ಯಕತೆ ಇರುವುದು ಕೇವಲ ಗ್ರಾಮೀಣ ಪ್ರದೇಶದಲ್ಲಿ ಮಾತ್ರ ಎಂಬ ಸಂದೇಶ ಹೊರಬಿದ್ದಿತು. ಆದರೂ ಕೂಡ ಈ ಯೋಜನೆಯು ಹಲವಾರು ವೈಫಲ್ಯಗಳನ್ನು ಒಳಗೊಂಡಿದೆ. ಅವುಗಳನ್ನು ಈ ರೀತಿಯಾಗಿ ನೋಡಬಹುದು :

೧. ಕೆಲಸ ೧೦೦ ದಿನಗಳವರೆಗೆ ಸಿಗುವುದಿಲ್ಲ, ಅದು ಕೇವಲ ದಾಖಲಾತಿಗಳಲ್ಲಿ ಮಾತ್ರ ಇರುತ್ತದೆ.
೨. ಕೂಲಿಯ ಪ್ರಮಾಣವು ಸರ್ಕಾರದ ದಾಖಲೆಯಲ್ಲಿ ತೋರಿಸುವಷ್ಟು ಪ್ರಮಾಣದಲ್ಲಿಲ್ಲ.
೩. ಕಾಮಗಾರಿಗಳಲ್ಲಿ ಯಂತ್ರಗಳ ಬಳಕೆ ಹೆಚ್ಚಾಗಿದೆ.
೪. ಕಾರ್ಮಿಕರ ಹೆಬ್ಬೆಟ್ಟಿನ ಗುರುತನ್ನು ಖಾಲಿ ಕಾಗದದ ಮೇಲೆ ಅನಾವಶ್ಯಕವಾಗಿ

# ಅಳಲು



**ಬ**ದುಕುತ್ತಿದ್ದೇವೆ... ಯಾಕೆಂದರೆ
ಹುಟ್ಟಿದ್ದೇವಲ್ಲ! ಹೇಳದೇ... ಕೇಳದೇ...

ಆಕಾಶದ ನೆತ್ತರು, ಅದರಲ್ಲಿ ಸಿಕ್ಕಿ
ಕೊಚ್ಚಿಹೋದ ಸಾವಿರಾರು ಸೂರುಗಳು
ವರುಷ ಕಳೆಯಿತು ಆದರೂ...
ಬರಲಿಲ್ಲ ಆಸರೆಯ ನೆರಳು.

ಇವರೇನೋ ಆಶ್ವಾಸನೆಗಳ
ಗೋಪುರವನ್ನೇ ಕಟ್ಟಿದ್ದರು
'ಸಮರೋಪಾದಿಯಲ್ಲಿ ಸಹಾಯ' ಎಂದು ಗೋಳಿಟ್ಟರು.
ಮನೆ-ಮಂದಿಯಿಂದ ಹಣದ ರಾಶಿಯೇ ಕೂಡಿಸಿದರು
'ಊರಿಗೆ ಊರೇ ಸ್ಥಳಾಂತರ,
ನೊಂದ ಮನಗಳಿಗೆ ಮನೆಗಳ ಹಸ್ತಾಂತರ ' ಎಂದರು.

ಆದರೆ ಇಂದು ?
ಭೂಗರ್ಭದ ಗಣಿಯ ಧೂಳಿನ ನೆರಳಲ್ಲಿ
'ಸಮಾವೇಶ' 'ಪಾದಯಾತ್ರೆ'ಗಳೆಂದು
ನಾಟಕವಾಡುತಿಹರು ! ಕೊಚ್ಚಿಹೋದವರನ್ನು ಕಿಂಚಿತ್ತೂ ನೆನೆಯದೇ,
ಜಾಣ ಮರೆವಿನಂತೆ ಕಣ್ಣು ಮುಚ್ಚಿಹರು.

ನಮಗದೋ ಮೋಡಗಳು ಹುಟ್ಟಿ
ಆಗೀಗ ಬಂದು ಎರಗುತ್ತೇವೆಂದು ಅಣಕಿಸುತ್ತಿವೆ.
ನಾವುಗಳೊ ನಿನ್ನೆಯದನು ನೆನೆದು ಅಂಜುತ್ತಾ ಅಳುಕುತ್ತ
ಬಾಳು ಕಟ್ಟಲು ಹೆಣಗುತ್ತಿದ್ದೇವೆ.

ಬದುಕುತ್ತಿದ್ದೇವೆ, ಬದುಕಬೇಕಾಗಿದೆ,
ಯಾಕೆಂದರೆ ನಾಳೆಗಳನ್ನು ಬೆಳೆಸಬೇಕಾಗಿದೆ
ಜೀವಸೆಲೆಯನ್ನು ಮುಂದುವರಿಸಬೇಕಾಗಿದೆ.

**ಡಾ॥ ಶೌಕತ್ ಅಲಿ ಎಂ. ಮೇಗಲಮನಿ, ಸಹ ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಸರಕಾರಿ ಪ್ರಥಮ ದರ್ಜೆ ಕಾಲೇಜು, ಧಾರವಾಡ - ೫೮೦೦೦೧**

ಹಾಕಿಸಿಕೊಂಡು ವೇತನ ನೀಡಿದಂತೆ ಮತ್ತು ಕೆಲಸದಲ್ಲಿ ತಮಗೆ ಇಷ್ಟವಿಲ್ಲವೆಂಬಂತೆ ದಾಖಲೆಗಳನ್ನು ಸೃಷ್ಟಿಸಿಕೊಳ್ಳುತ್ತಾರೆ.

೫. ಸರ್ಕಾರಿ ಅಧಿಕಾರಿಗಳು ಮತ್ತು ಚುನಾಯಿತ ಪ್ರತಿನಿಧಿಗಳು ಕಾರ್ಮಿಕರ ಕೂಲಿಯಲ್ಲಿ ತಮ್ಮ ತಮ್ಮ ಕನಿಷ್ಠ ಪಾಲು ಪಡೆದುಕೊಳ್ಳುತ್ತಾರೆ.
೬. ಉದ್ಯೋಗ ಒದಗಿಸಿಕೊಡುವಲ್ಲಿ ದಲ್ಲಾಳಿಗಳು ಹುಟ್ಟಿಕೊಂಡಿದ್ದಾರೆ.

**ವೈಫಲ್ಯಗಳನ್ನು ಸರಿಪಡಿಸುವ ಕ್ರಮಗಳು**

ಈ ಕೆಳಗಿನ ಕ್ರಮಗಳನ್ನು ಅಳವಡಿಸಿಕೊಂಡಲ್ಲಿ ಸ್ವಲ್ಪಮಟ್ಟಿಗಾದರೂ ವೈಫಲ್ಯಗಳನ್ನು ಸರಿಪಡಿಸಬಹುದಾಗಿದೆ :

೧. ಗ್ರಾಮೀಣ ಪ್ರದೇಶದಲ್ಲಿ ಸಾಕ್ಷರತೆಯ ಪ್ರಮಾಣವನ್ನು ಹೆಚ್ಚಿಸಬೇಕು.
೨. ಉದ್ಯೋಗ ನೀಡುವಿಕೆಯಲ್ಲಿ ದಲ್ಲಾಳಿಗಳನ್ನು ತಡೆಗಟ್ಟಬೇಕು.
೩. ಕಾಮಗಾರಿ ಅನುಷ್ಠಾನವು ಗ್ರಾಮ ಸಭೆಯ ಮುಖಾಂತರ ಕಾರ್ಮಿಕರ ಸಮ್ಮುಖದಲ್ಲಿಯೇ ಆಗಬೇಕು.
೪. ಕಾಮಗಾರಿಗಳಲ್ಲಿ ಯಂತ್ರಗಳ ಬಳಕೆ ಸರ್ಕಾರ ನಿಗದಿಪಡಿಸಿದಂತಿರಬೇಕು.
೫. ಕಾಮಗಾರಿಗಳನ್ನು ಸರ್ಕಾರದ ಅಧೀನ ಸಂಸ್ಥೆಗಳೇ ಮಾಡಿಸಬೇಕು; ಗುತ್ತಿಗೆದಾರರಿಗೆ ಕೊಡಬಾರದು.
೬. ಆಡಳಿತ ವರ್ಗ ಮತ್ತು ಚುನಾಯಿತ ಪ್ರತಿನಿಧಿ ವರ್ಗಕ್ಕೆ ಈ ಯೋಜನೆಯಲ್ಲಿ ಕಡಿವಾಣ ಹಾಕಬೇಕು, ಆಡಳಿತದಲ್ಲಿ ಭ್ರಷ್ಟಾಚಾರ ಕಡಿಮೆಯಾಗಬೇಕು.

**ಉಪಸಂಹಾರ**

೧೯೬೬ರ ಹಸಿರು ಕ್ರಾಂತಿಯಿಂದಾಗಿ ಕೃಷಿ ಕ್ಷೇತ್ರದಲ್ಲಿ ಮತ್ತು ೧೯೯೧ರ ಹೊಸ ಆರ್ಥಿಕ ನೀತಿಯಿಂದಾಗಿ ಸಂಭವಿಸುತ್ತಿರುವ ಜಾಗತಿಕ ಆರ್ಥಿಕ ಬಿಕ್ಕಟ್ಟುಗಳು ದೇಶಕ್ಕೆ ಒಂದಿಲ್ಲೊಂದು ರೀತಿಯಲ್ಲಿ ಪಾಠ ಕಲಿಸುವಂತಾಗಿದೆ. ಅತಿ ಆಸೆ ಗತಿ ಕೆಡಿಸುತ್ತದೆ ಎಂಬುದು ಮುಕ್ತ ಮಾರುಕಟ್ಟೆಯಿಂದ, ಮತ್ತು ಷೇರು ಮಾರುಕಟ್ಟೆಯಿಂದ ಬಿಕ್ಕಟ್ಟು ಉಂಟಾಗಿರುವುದು ಎಲ್ಲರಿಗೂ ತಿಳಿದ ವಿಷಯ. ಎಲ್ಲರ ಅವಶ್ಯಕತೆಗಳನ್ನು ಪೂರೈಸಿ ಜನರ ಅಭಿವೃದ್ಧಿಯನ್ನು ಸಾಧಿಸುವ ತಂತ್ರ ಮತ್ತು ಕಾರ್ಯವಿಧಾನ ಮೊದಲು ಗ್ರಾಮೀಣ ಪ್ರದೇಶಗಳಿಂದಾಗಬೇಕೆಂದು ಕೇಂದ್ರ ಸರ್ಕಾರವು ಆಲೋಚಿಸಿ ಈ ಯೋಜನೆಯನ್ನು ರೂಪಿಸಿದೆ. ಗ್ರಾಮೀಣ ಪ್ರದೇಶದಲ್ಲಿ ವಲಸೆಯ ಪ್ರಮಾಣವನ್ನು ತಡೆಗಟ್ಟಿ, ಉದ್ಯೋಗಾವಕಾಶಗಳನ್ನು ವಿಸ್ತರಿಸಿ, ನಿರುದ್ಯೋಗ ಪ್ರಮಾಣವನ್ನು ಕಡಿಮೆ ಮಾಡಿ, ಅವರ ವಾರ್ಷಿಕ ಆದಾಯದ ಪ್ರಮಾಣ ಹೆಚ್ಚಿಸಿ ಜನರ ಜೀವನದ ಗುಣಮಟ್ಟವನ್ನು ಹೆಚ್ಚಿಸುವುದು ಈ ಯೋಜನೆಯ ಪ್ರಮುಖ ಉದ್ದೇಶವಾಗಿದೆ. ಆದರೆ ಸರ್ಕಾರಿ ಆಡಳಿತಾಧಿಕಾರಿಗಳು ಮತ್ತು ಚುನಾಯಿತ ಪ್ರತಿನಿಧಿಗಳ ಪಾಲ್ಗೊಳ್ಳುವಿಕೆಯಿಂದ ಈ ಯೋಜನೆ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ. ಈ ಸಮಸ್ಯೆಗಳಿಂದ ಹೊರಬರಬೇಕೆಂದರೆ ಯೋಜನೆಯ ಸಂಪೂರ್ಣ ಜವಾಬ್ದಾರಿ ಆಯಾ ಗ್ರಾಮ ಪಂಚಾಯತಿಗಳಿಗೆ ಬಿಟ್ಟಾಗ ಮಾತ್ರ ಒಂದು ಒಳ್ಳೆಯ ಯೋಜನೆಯಾಗಲು ಸಾಧ್ಯವಿದೆ.

ಡಾ॥ ವಿಠೋಬ ಬಿ.
ಅತಿಥಿ ಉಪನ್ಯಾಸಕರು, ಅರ್ಥಶಾಸ್ತ್ರ ಅಧ್ಯಯನ ವಿಭಾಗ
ಗುಲಬರ್ಗಾ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರ, ನಂದಿಹಳ್ಳಿ
**ಡಾ॥ ವೈ. ಎಸ್. ವಗ್ಗಿ**
ಅರ್ಥಶಾಸ್ತ್ರ ಉಪನ್ಯಾಸಕರು, ಎಸ್.ಕೆ.ಎನ್.ಜಿ. ಸರಕಾರಿ ಪ್ರಥಮ ದರ್ಜೆ ಕಾಲೇಜು, ಗಂಗಾವತಿ

ಶುಭಾಶಯಗಳೊಂದಿಗೆ :

# ಕಾರ್ಮಿಕರ ಸೇವೆಯಲ್ಲಿ ಕಲ್ಯಾಣ ಮಂಡಳಿ



ಶ್ರೀ ಬಿ. ಎನ್. ಬಚ್ಚೇಗೌಡ
ಮಾನ್ಯ ಕಾರ್ಮಿಕ ಸಚಿವರು ಹಾಗೂ ಅಧ್ಯಕ್ಷರು
ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ

ಕರ್ನಾಟಕ ರಾಜ್ಯದಲ್ಲಿ ಕಾರ್ಮಿಕ ಕಲ್ಯಾಣವನ್ನು ಸಂವರ್ಧನಗೊಳಿಸುವುದಕ್ಕೆ ಹಣಕಾಸು ಒದಗಿಸಲು ಮತ್ತು ಚಟುವಟಿಕೆಗಳನ್ನು ನಡೆಸುವುದಕ್ಕಾಗಿ ಒಂದು ನಿಧಿಯನ್ನು ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಅಧಿನಿಯಮ, 1965ರಡಿಯಲ್ಲಿ ಸ್ಥಾಪಿಸಲಾಗಿದೆ. ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಕಾರ್ಮಿಕರು, ಅವರ ಅವಲಂಬಿತರು, ಮಹಿಳೆಯರು, ಅಂಗವಿಕಲರು ಮತ್ತು ಕಾರ್ಮಿಕ ಮಕ್ಕಳ ಕ್ಷೇಮಾಭಿವೃದ್ಧಿಗೆ ಮಂಡಳಿಯ ಅನೇಕ ಯೋಜನೆಗಳು ಕೆಳಗಿನಂತಿರುತ್ತವೆ.

1. ವಿದ್ಯಾರ್ಥಿ ವೇತನ ಯೋಜನೆಯ ನಿಯಮಗಳು
2. ಕಾರ್ಮಿಕರಿಗೆ ವೈದ್ಯಕೀಯ ನೆರವು ಯೋಜನೆ
3. ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ ನೀಡುವ ಯೋಜನೆ
4. ಕಾರ್ಮಿಕರು ಮತ್ತು ಅವರ ಅವಲಂಬಿತರಿಗೆ ಗಣಕಯಂತ್ರ ತರಬೇತಿ ಯೋಜನೆ
5. ಅಂಗವಿಕಲ ಕಾರ್ಮಿಕರಿಗೆ ಮೂರು ಚಕ್ರದ ಸೈಕಲ್ ಒದಗಿಸುವ ಯೋಜನೆ
6. ಕಾರ್ಮಿಕರ ಅಪಘಾತ ಧನ ಸಹಾಯ ಯೋಜನೆ
7. ಅಂಗವಿಕಲ ಕಾರ್ಮಿಕರಿಗೆ ಕೃತಕ ಅಂಗಸಾಧನ ಖರೀದಿಸಲು ಧನ ಸಹಾಯ ಯೋಜನೆ
8. ವಾರ್ಷಿಕ ಕ್ರೀಡಾ ಚಟುವಟಿಕೆ ಹಮ್ಮಿಕೊಳ್ಳುವ ನೋಂದಾಯಿತ ಕಾರ್ಮಿಕ ಸಂಘಗಳಿಗೆ ಧನ ಸಹಾಯ ನೀಡುವ ಯೋಜನೆ
9. ವಾರ್ಷಿಕ ವೈದ್ಯಕೀಯ ತಪಾಸಣೆಯನ್ನು ಮಾಡಿಸಲು ಟ್ರೇಡ್ ಯೂನಿಯನ್ ಸಂಸ್ಥೆಗಳಿಗೆ ಧನ ಸಹಾಯ ನೀಡುವ ಯೋಜನೆ

# ಕರೆಂಟಿನ ಕಣ್ಣಾಮುಚ್ಚಾಲೆ

ಅರುಂಧತಿ ಜೋಶಿ

"ಪದ್ಮ! ಇಲ್ಲಿ ಸ್ವಲ್ಪ ಬರ್ತೀಯಾ ? ಬೆಳಿಗ್ಗೆ ಪೇಪರ್ ತೆಗೆದರೆ ಸಾಕು. ಏನಾದ್ರೊಂದು ಕೆಟ್ಟ ಸುದ್ದಿ ಇದ್ದೇ ಇರುತ್ತೆ. ಇಲ್ಲಿ ನೋಡು."

"ಹಾಂ... ಬಂದೇರೀ. ಹೇಳಿ ಏನದು... ಯಾಕಿಷ್ಟು ಚಡಪಡಿಸುತ್ತಿದ್ದೀರಾ ?"

"ಪೇಪರಿನಲ್ಲಿ ಏನು ಸುದ್ದಿ ಬಂದಿದೆ ನೋಡು. ಅನಿರ್ದಿಷ್ಟಾವಧಿ ಕರೆಂಟು ಕಡಿತ ಅಂತೆ. ಈಗಾಗಲೇ ಯಾವಾಗ ಯಾವಾಗಲೋ ಹೋಗ್ತಾ ಇರುತ್ತೆ, ಬರ್ತಾ ಇರುತ್ತೆ. ಇಷ್ಟಬಂದಂತೆ ನಮ್ಮನ್ನು ಕುಣಿಸ್ತಾರೆ, ನಮ್ಮ ತಾಳ್ಮೆಯ ಪರೀಕ್ಷೆ ಮಾಡ್ತಾರೆ ಅನ್ನಿಸುತ್ತೆ. ಮನುಷ್ಯರಲ್ಲಿರುವ ಬಡವರು, ಶ್ರೀಮಂತರು ಎನ್ನುವ ಭೇದಭಾವ ಕರೆಂಟಿಗಿಲ್ಲ. ಎಲ್ಲರಿಗೂ ಒಂದೇ ನಿಯಮ. ಎಲ್ಲರನ್ನೂ ಒಂದೇ ತಕ್ಕಡಿಯಲ್ಲಿ ತೂಗ್ತಾರೆ."

ದಿನಪತ್ರಿಕೆಯನ್ನು ನನ್ನ ಕೈಯಲ್ಲಿಟ್ಟು ವಾಯು ವಿಹಾರಕ್ಕೆ ಹೊರಟುಬಿಟ್ಟರು. ಬಟಾಬಯಲಿನಲ್ಲಿ ಸುತ್ತಾಡುವುದಕ್ಕೆ ಪ್ರಕೃತಿಯ ಸಹಕಾರವಿದ್ದರೆ ಸಾಕು. ಎಳೆಬಿಸಿಲು, ತಂಪಾದ ಗಾಳಿ, ನಿಶ್ಶಬ್ದ ವಾತಾವರಣ, ಹೀಗೆ ಪ್ರಕೃತಿದತ್ತ ಕೊಡುಗೆಗಳು ಲಭ್ಯವಿರುವಾಗ ಕರೆಂಟಿನ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳದೆ ನಿತ್ಯದ ವಾಯುವಿಹಾರಕ್ಕೆ ಹೊರಟಾಗ ಮನೆಯಲ್ಲೇ ಉಳಿದುಕೊಂಡವರಿಗೆ ಮಂದ ಬೆಳಕಿನ ವನವಾಸ.

ವಿದ್ಯುತ್ತು ಇಲ್ಲದಿದ್ದಾಗ ಮೇಣದ ಬತ್ತಿ, ಟಾರ್ಚು, ಎಣ್ಣೆಯ ಬತ್ತಿಯ ನಂದಾದೀಪ, ಸೀಮೆ ಎಣ್ಣೆಯ ಲಾಂದ್ರ ಎಂದು ಕತ್ತಲನ್ನು ಹೊಗಲಾಡಿಸಲು ನಡೆಸುವ ಕಸರತ್ತು ಇದ್ದೇ ಇದೆ. ಎಲ್ಲರೂ ಎದುರಿಸುವ ನಿತ್ಯದ ವಿದ್ಯುತ್ ಕಡಿತದ ಬಲವಂತದ ಕರ್ಮಕಾಂಡ ವಿದೆಂದು ಹೇಳಬಹುದು. ಪಾಪ! ಅಪಾರ್ಟ್‌ಮೆಂಟುಗಳಲ್ಲಿ ಲಿಫ್ಟನ್ನು ಬಳಸುತ್ತಿರುವಾಗ ವಿದ್ಯುತ್ಕಡಿತವಾದರೆ ಅದರಲ್ಲಿರುವವರ ಪಾಡು ವಿದ್ಯುತ್ ನಿಗಮದವರಿಗೆ ಹೇಗೆ ತಿಳಿಯಬೇಕು ? ಒಂದೊಂದು ವೇಳಾಪಟ್ಟಿಯನ್ನು ಒಂದೊಂದು ದಿನ ಜಾರಿಗೆ ತಂದು ಜೀವ ಹಿಂಡುತ್ತಾರಲ್ಲ ಎಂದು ಬೇಸರವಾಗುವುದು ಸಹಜ.

"ಕರೆಂಟು ಹೋಯಿತು, ಕರೆಂಟು ಬಂತು, ದೀಪ ಆರಿತು, ದೀಪ ಬೆಳಗಿತು" ಎಂದು ಹಾಡಿದರೆ ಈ ಸಮಸ್ಯೆಗೆ ಪರಿಹಾರ ದೊರಕುವುದೇ ?!

ವಿದ್ಯುತ್ತು ನಿಷ್ಕ್ರಿಯವಾದರೆ ಮತ್ತೆ ಬರುವ ಹಾದಿಯನ್ನೇ ಎದುರುನೋಡುತ್ತ, ಹಗಲುಗನಸು ಕಾಣುತ್ತ ಕುಳಿತರೆ ಪರಿಹಾರ ಸಿಗಬಹುದೆಂದು ಭಾವಿಸಿದರೆ ನಮಗಿಂತ ಮೂರ್ಖರು ಮತ್ಯಾರೂ ಇರಲಿಕ್ಕಿಲ್ಲ.

ನಲವತ್ತರ ದಶಕದಲ್ಲಿ ಸಣ್ಣ ಊರುಗಳಲ್ಲಿ ಕರೆಂಟಿನ ಸೌಲಭ್ಯವಿರಲಿಲ್ಲ. ನಮ್ಮ ಹಿರಿಯರು ಇದರ ಕೊರತೆಯನ್ನು ಪರಿಗಣಿಸದೆ ಸಂತೃಪ್ತ ಜೀವನವನ್ನೇ ಅಳವಡಿಸಿಕೊಂಡಿದ್ದರು. ಕರೆಂಟಿಲ್ಲದ ಊರಿನಲ್ಲಿ ಬಾಲ್ಯದ ದಿನಗಳನ್ನು ಕಳೆದಿದ್ದರೂ, ಅದರ ಕೊರತೆ ನಮ್ಮನ್ನು ಕಾಡಲಿಲ್ಲ.

ಎರಡನೇ ಮಹಾಯುದ್ಧದ ಸಮಯ. ನಿಗದಿತ ಹಂಚಿಕೆಯ (ರೇಶನಿಂಗ್) ವ್ಯವಸ್ಥೆ ಆಗಿಂದಲೇ ಜಾರಿಗೆ ಬಂದಿತ್ತು. ಸೀಮೆಎಣ್ಣೆಗೂ ರೇಶನ್ ಇದ್ದ ಕಾಲ. ಅನುಕೂಲಸ್ಥರ ಮನೆಗಳಲ್ಲಿ ಪೆಟ್ರೋಮ್ಯಾಕ್ಸ್ ದೀಪ ಝಗಮಗಿಸುತ್ತಿತ್ತು. ಉಳಿದವರು ಕಂದೀಲು, ಲಾಂದ್ರ ಹಚ್ಚಿಟ್ಟು ರಾತ್ರಿಯ ಕೆಲಸಗಳನ್ನು ನಿಭಾಯಿಸುತ್ತಿದ್ದರು.

ಕುಟ್ಟುವ, ರುಬ್ಬುವ ಮತ್ತು ಅರೆಯುವ ಕೆಲಸಗಳೆಲ್ಲ ಹಸ್ತದ ಸಹಾಯದಿಂದ ಆಗಬೇಕಿತ್ತು (ಕಾಂಗ್ರೆಸ್ಸಿನವರ ಹಸ್ತವಲ್ಲ!). ಮಜ್ಜಿಗೆ ಕಡೆಯಲು ನಮ್ಮ ನಮ್ಮಲ್ಲಿ ಪೈಪೋಟಿ ಇರುತ್ತಿತ್ತು. ಭತ್ತ ಕುಟ್ಟಲು ಹಳ್ಳಿಯ ಹೆಂಗಸರು ಬರುತ್ತಿದ್ದರು. ಮರದ ಒರಳಿನಲ್ಲಿ, ನಿಂತ ಭಂಗಿಯಲ್ಲಿ, ಒಬ್ಬರಾದ ಮೇಲೆ ಮತ್ತೊಬ್ಬರು, ಎದುರುಬದುರಾಗಿ ನಿಂತು, ಸರತಿಯಲ್ಲಿ ಕೈಗಳನ್ನು ಬದಲಿಸಿ, ಲಯಬದ್ಧವಾಗಿ ಕುಟ್ಟುವಾಗ, ಜಾನಪದ ಗೀತೆಗಳ ಸಾಲುಗಳನ್ನು ಹಾಡುತ್ತಿದ್ದರು. ನಾವು ಎಳೆಯರೆಲ್ಲ, ಅವರ ಸುತ್ತ ಕುಳಿತು, ಬೆರಗು ಕಣ್ಣಿನಿಂದ ಅವರ ಭಾವ ಭಂಗಿಯನ್ನು, ಹಾಡುವ



ಪರಿಯನ್ನು ನೋಡುತ್ತ, ಕೇಳುತ್ತ ಮೈಮರೆತುಬಿಡುತ್ತಿದ್ದೆವು.

ಈಗ ನಗರ ಜೀವನದಲ್ಲಿ ವಿದ್ಯುತ್ ಸೌಲಭ್ಯವಿರುವಾಗ ಗುಂಡಿ ಒತ್ತಿದರೆ ಬೆಳಕು, ಗಾಳಿ ಮತ್ತೆಲ್ಲ ಕೆಲಸಗಳು ಚಿಟಿಕೆ ಹೊಡೆಯುವಷ್ಟರಲ್ಲಿ ಸುಲಭವಾಗಿ ಬಗೆಹರಿದುಬಿಡುತ್ತವೆ. ಮೈ ಅಲುಗಾಟವೇ ಇಲ್ಲದೆ ಗಾಳಿ, ಬೆಳಕು, ನೀರು ಲಭ್ಯವಿರುವಾಗ ಕೆರೆ, ನದಿ, ಬಾವಿಯನ್ನು ಅವಲಂಬಿಸಿ ನೀರು ಹೊರುವ ಕೆಲಸವಿಲ್ಲ, ನಲ್ಲಿ ತಿರುಗಿಸಿದರೆ ನೀರು, ಬಟನ್ ಒತ್ತಿದರೆ ಗಾಳಿ, ಬೆಳಕು. ಇನ್ನೇನು ಬೇಕು ಐಷಾರಾಮಿ ಜೀವನಕ್ಕೆ ? ಜೀವನ ಸುಗಮವೆನಿಸಿದ್ದಾಗ, ನಗರ ಜೀವನಕ್ಕೆ ಮಂಕು ಕವಿಯುವಂತೆ ವಿದ್ಯುತ್ತಿನ ಕಣ್ಣಾಮುಚ್ಚಾಲೆಗೆ ನಾವು ಕೈಕಟ್ಟಿ ಕುಳಿತು ಕೈ ಕೈ ಹಿಸುಕಬೇಕಾದ ಅನಿವಾರ್ಯತೆ ಎದುರಾದಾಗ ಕೆಲಸವಿಲ್ಲದೆ ಕೂಡಬೇಕು.

''ಒಲಿದು ಬಾ ಕರೆಂಟೇ, ಹರಿದು ಬಾ'' ಎಂದು ಎಷ್ಟೇ ಹಾಡಿದರೂ, ಏನೇ ಶಿಫಾರಸು ಹಾಕಿದರೂ ಉಪಯೋಗವಿಲ್ಲ. ಬೇಡವೆಂದು ಮೂಲೆಗುಂಪಾಗಿಸಿ ಬಿಸಾಡಿದ ವಸ್ತುಗಳನ್ನು ಹುಡುಕಿ ತಂದು ಪುನಃ ಮನೆಯಲ್ಲಿ ಪ್ರತಿಷ್ಠಾಪಿಸಬೇಕು. ಹಳೆಯ ರುಬ್ಬುವ ಕಲ್ಲನ್ನು, ಬೀಸುವ ಕಲ್ಲನ್ನು ಸ್ವಸ್ಥಾನದಲ್ಲಿಟ್ಟು, ಕರೆಂಟು ಕಡಿತಕ್ಕೆ ತಲೆಕೆಡಿಸಿಕೊಳ್ಳದೆ ಅಡುಗೆಮನೆ ಕೆಲಸಗಳನ್ನು ಪೂರೈಸಿದಾಗ ಮಹತ್ವವಾದ ಸಾಧನೆಯನ್ನು ಮಾಡಿದಷ್ಟು ತೃಪ್ತಿ, ಸಮಾಧಾನ ದೊರೆತಾಗ ಕರೆಂಟು ಇದ್ದರೆಷ್ಟು, ಇಲ್ಲದಿದ್ದರೆಷ್ಟು ಎಂದು ಪ್ರಸೂತಿ ವೈರಾಗ್ಯವನ್ನು ತಾಳಿದರೂ ತಪ್ಪಿಲ್ಲ. ಯಾವ ಯೋಗ ಶಿಬಿರಕ್ಕೂ ಹೋಗಬೇಕಿಲ್ಲ. ಕೈಗಳಿಗೆ ವ್ಯಾಯಾಮ ನಿರಾಯಾಸವಾಗಿ ದೊರಕುತ್ತದೆ.

ಕಡೆಗೋಲಿನಿಂದ ಮಜ್ಜಿಗೆ ಕಡೆಯುವಾಗ ಮಿಕ್ಸಿಯ ಬುರ್ರ್‌ನ್ನುವ ಕರ್ಕಶ ಶಬ್ದವಿರುವುದಿಲ್ಲ. ಹುಳಿ ದ್ರಾಕ್ಷಿ - ನರಿಯ ಕಥೆಯಂತೆ ಕೈಗೆ ಎಟುಕದ ವಸ್ತುವೆಂದು ಸಬೂಬು ಹೇಳುತ್ತಿಲ್ಲ. ಕಡೆಗೋಲಿನಿಂದ ಕಡೆಯುವಾಗ ಕೇಳಿಸುವ ಸರ್‌ಬರ್ ಎನ್ನುವ ಲಯಬದ್ಧವಾದ ಸಂಗೀತವನ್ನು ಆಲಿಸುತ್ತ ಸ್ವಂತ ಶ್ರಮದಿಂದ ಬೆಣ್ಣೆ ಮೇಲೇಳಿಸುವಾಗ ಲಭಿಸುವ ತೃಪ್ತಿ, ಆನಂದ, ಮಿಕ್ಸಿಯಲ್ಲಿ ಲಭ್ಯವಾಗುವುದೇ! ಯಾಂತ್ರಿಕತೆಯ ಬಂಧನದಿಂದ ವಿಮೋಚನೆ ಪಡೆದಾಗ, ಬಂಧಮುಕ್ತ ಹಕ್ಕಿಯ ಅನುಭವ ಹೀಗೇ ಇದ್ದಿರಬಹುದೇನೋ ಅನ್ನಿಸುವುದು ಸಹಜವಾದ ಪ್ರತಿಕ್ರಿಯೆ. ಬೆಣ್ಣೆ ತೆಗೆಯುವಾಗ, ಗೋಪಿಕೆಯರನ್ನು ಪೀಡಿಸುತ್ತಿದ್ದ, ಬೆಣ್ಣೆಗಾಗಿ ಕಾಡುತ್ತಿದ್ದ ಬಾಲಕೃಷ್ಣನ ನೆನಪು ಬಂದಾಗ, ''ಕೃಷ್ಣಾ ಎಂದರೆ ಕಷ್ಟವು ಪರಿಹಾರ, ಕೃಷ್ಣಾ ಎನಬಾರದೆ'' ಎಂಬ ದಾಸರ ಪದ ಮನದಲ್ಲಿ ಸುಳಿದಾಡಿದಾಗ, ಮನಸ್ಸಿನಲ್ಲಿ ಅವ್ಯಕ್ತ ನೆಮ್ಮದಿ ಮನೆಮಾಡುವುದು ಸಹಜ.

ಗಾಳಿ ಬೇಕೆನಿಸಿದಾಗ ವಾಲೆಗರಿಯ ಬೀಸಣಿಕೆಯು ಸಹಾಯ ಹಸ್ತವನ್ನು ಚಾಚಿ ನಮ್ಮ ಸೇವೆಗಾಗಿ ಕಾದು ಕುಳಿತಿದೆ. ನೀರಿನ ಸಮಸ್ಯೆ ಸಹ ಕರೆಂಟನ್ನು ಅವಲಂಬಿಸಿ ಕಾರ್ಯ ನಿರ್ವಹಿಸುತ್ತದೆ. ನೀರಿನ ಸಮಸ್ಯೆ ಎದುರಾದಾಗ ಏನು ಮಾಡಲು ಸಾಧ್ಯ ಎಂದು ಸವಾಲು ಒಡ್ಡಿದಾಗ, ನಮ್ಮ ಹಣೆಬರಹ ನೆಟ್ಟಗಿದ್ದು ಕಾವೇರಿ ತಾಯಿಯ ಕೃಪೆ ಇದ್ದರೆ ನೀರಿಗೆ ಬರವಿಲ್ಲ. ಆದರೆ ವಿದ್ಯುತ್ತು ಕೈ ಜೋಡಿಸದೆ ಅಸಹಕಾರ ಘೋಷಿಸಿದಾಗ ಸಾಕಷ್ಟು ಕೆಲಸಗಳೂ ಮುಷ್ಕರ ಹೂಡುತ್ತದಲ್ಲವೇ ? ಕಾವೇರಿಯ ಮುನಿಸಿನಿಂದ ನಲ್ಲಿಯಲ್ಲಿ ನೀರಿಲ್ಲದೆ ಪರದಾಡುವ ಪರಿಸ್ಥಿತಿ ಎದುರಾದಾಗ, ಕೊಳವೆ ಬಾವಿ ಸಹಾಯಹಸ್ತವನ್ನು ಚಾಚಿದರೆ ನೀರೆತ್ತುವ ಪಂಪನ್ನು ಕೈಯಿಂದ ಹೊಡೆದು, ''ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ನರ್ಮದೇ ಸಿಂಧು ಕಾವೇರಿ'' ಎಂದು ಜಲ ದೇವಿಯರ ಸ್ತುತಿ ಮಾಡುತ್ತ ನೀರಿನ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದು.

ಕರೆಂಟಿದ್ದರೂ ವಿದ್ಯುತ್ತು ಉಪಕರಣಗಳು, ಅದರಲ್ಲೂ ಮುಖ್ಯವಾಗಿ ಟಿ.ವಿ., ಫ್ರಿಜ್ಜು, ಮಿಕ್ಸಿ ಕೆಲಸಮಾಡದೆ ಹೋದಾಗ, ಅರ್ಥಾತ್ ಕೆಟ್ಟುಹೋದಾಗ ಕೆಲಸ ಕಾರ್ಯಗಳು ತಟಸ್ಥವಾಗಿ ನಿಂತುಬಿಟ್ಟರೆ ಮತ್ತೊಂದು ಬಗೆಯ ಕಸರತ್ತನ್ನು ಪ್ರಾರಂಭಿಸಿ ವಿದ್ಯುಚ್ಛಕ್ತಿ ತಜ್ಞರಿಗೆ ಶರಣಾಗಬೇಕಲ್ಲವೇ ?!

ಸ್ವಲ್ಪ ಎಲೆಕ್ಟ್ರಿಶಿಯನ್ನಿಗೆ ಕರೆ ಮಾಡಿ ಬರಹೇಳಿ ತುರ್ತಾಗಿ ಮಿಕ್ಸಿ ರಿಪೇರಿ ಮಾಡಬೇಕಿದೆಯೆಂದು ತಿಳಿಸಲು ಪ್ರಯತ್ನಿಸಿ ಅವನ ಸಂಪರ್ಕ ಸಿಗದಿದ್ದಾಗ, ''ಛೆ! ಯಾವಾಗಲೂ ಅವನ ದೂರವಾಣಿ ಕಾರ್ಯನಿರತವಾಗಿದೆಯೆಂದು ಬರುತ್ತಿದೆ. ಈಗ ಏನು ಮಾಡುವುದು,? ರೀ ! ಸ್ವಲ್ಪ ನೀವೇ ಒಂದು ಹೆಜ್ಜೆ ಹೋಗಿ ಬಂದುಬಿಡಿ'' ಎಂದು ಪತಿ ದೇವರನ್ನು ಬೇಡಿಕೊಂಡಾಗ, ಅವರು ನನ್ನನ್ನು ವಿನೋದವಾಗಿ ನೋಡುತ್ತ, ''ಒಂದು ಹೆಜ್ಜೆಯಲ್ಲ ಮಾರಾಯ್ತಿ. ಒಂದೂವರೆ ಕಿ.ಮೀ. ಹೋಗಿಬರಬೇಕು. ಏನಪ್ಪಾ ಗತಿಯೆಂದು ತಲೆ ಮೇಲೆ ಕೈ ಇಟ್ಟುಕೊಂಡು ಕುಳಿತುಬಿಟ್ಟರೆ ಕೆಲಸ ಆದ ಹಾಗೆ! ರಿಟೈರ್ ಆದ ಮೇಲೆ, ಇದರಲ್ಲಿಯೂ ತರಬೇತಿ ಪಡೆದಿದ್ದರೆ ಚೆನ್ನಾಗಿತ್ತು. ಯಾರ ಹಂಗೂ ಇಲ್ಲದೆ ನಾನೇ ನಿಭಾಯಿಸುತ್ತಿದ್ದೆ. ಈಗ ನೋಡು, ಪರಾವಲಂಬನೆ. ತಣ್ಣಗೆ ನಮ್ಮ ಹಳೆಯ ಪದ್ಧತಿಯಲ್ಲಿ ಜೀವನ ನಡೆಸಿದರೆ ಹೇಗೆ ಅಂತ ಅನ್ನಿಸುವುದಕ್ಕೆ ಶುರುವಾಗಿದೆ'' ಎನ್ನಬೇಕೇ !

ಎಲೆಕ್ಟ್ರಿಶಿಯನ್ ಸಿಕ್ಕಿದಾಗ ನಿಧಿ ಸಿಕ್ಕಿದಷ್ಟು ಸಂತೋಷವಾಯಿತು. ''ಏನು ಮೇಡಂ ಏನಾಗಿದೆ ? ಮಿಕ್ಸಿ ಎಲ್ಲಿದೆ ತೋರಿಸಿ'' ಎಂಬ ಅವನ ಪ್ರಶ್ನೆಗೆ ಉತ್ತರಿಸುತ್ತ, ''ಬನ್ನಿ, ಇಲ್ಲಿದೆ ನೋಡಿ. ಓಡುತ್ತಿಲ್ಲ ನಿಂತುಬಿಟ್ಟಿದೆ...'' ಎಂದು ಹೇಳಿದಾಗ, ''ಅಷ್ಟೇ ತಾನೆ! ಓಡುವ ಹಾಗೆ, ನಡಿಯೋ ಹಾಗೆ ಮಾಡುತ್ತೀನಿ ಬಿಡಿ.'' ಆಶ್ವಾಸನೆ ಕೊಡುತ್ತ ಮಿಕ್ಸಿಯನ್ನು ಹಿಂದೆ ಮುಂದೆ ತಿರುಗಿಸಿ ನೋಡಿದ ಮೇಲೆ, ''ಅರೆರೇ ! ನೀವೇ ಸರಿ ಮಾಡಬಹುದಿತ್ತಲ್ಲ ಮೇಡಂ!'' ಎನ್ನುತ್ತ ಹಿಂದಿದ್ದ ಓವರ್‌ಲೋಡ್ ಗುಂಡಿಯನ್ನು ಒತ್ತಿದ. ನಾವೇ ಮಾಡೋ ಕೆಲಸಕ್ಕೆ ಪರಾವಲಂಬನೆ ಬೇಕಿತ್ತೇ ಎಂದು ತಡವಾಗಿ ಜ್ಞಾನೋದಯವಾಯಿತು. ಮನೆಗೆ ಬಂದು, ರೋಗಿಯನ್ನು ಪರೀಕ್ಷಿಸುವ ವೈದ್ಯರಿಗೆ ವಿಸಿಟಿಂಗ್ ಫೀಸ್ ಕೊಡುತ್ತೇವೆ. ಹಾಗೇ ವಿದ್ಯುತ್ ಸಲಕರಣೆಗಳ ಹಣೆಬರಹವನ್ನು ತಿದ್ದುವುದಕ್ಕೆ ಈ ತಜ್ಞರಿಗೂ ಕೊಡಬೇಕು.

ವಿದ್ಯುತ್ತು ಪುರಾಣ ಮುಗಿಯದೇ ಇದ್ದರೂ, ಹೋಗಿದ್ದ ಕರೆಂಟು ಇದೀಗ ಬಂದಿದೆ. ಮತ್ತೆ ಹೋಗಿಬಿಡುವಷ್ಟರಲ್ಲಿ ನನ್ನ ದಿನನಿತ್ಯದ ಕಾರುಬಾರನ್ನು ಶುರುಮಾಡಿ ಕಾರ್ಯಭಾರವನ್ನು ಹೊರಬೇಕು.

**ಅರುಂಧತಿ ಜೋಶಿ**
# ಬಿ-೦೦೩, ಕೃಷ್ಣ ಡಯಮಂಡ್ ಅಪಾರ್ಟ್‌ಮೆಂಟ್ಸ್, ೪೭/೨, 'ಎ' ಬ್ಲಾಕ್
ಸಹಕಾರನಗರ, ಬೆಂಗಳೂರು - ೫೬೦ ೦೯೨

## ಎಂಥಾ ವಿಸ್ಮಯ !

* ಹಾವುಗಳು ನಾಲಿಗೆಯಿಂದಲೇ ವಾಸನೆ ಗ್ರಹಿಸಬಲ್ಲವು.
* ನಾಯಿಯ ಮೂತಿಯನ್ನು ಹಿಡಿದಿರಿಸಿದರೆ ಅದು ತನ್ನ ತುಪ್ಪುಳದ ಮೈಮೇಲೆ ಬಿದ್ದ ನೀರನ್ನು ಹೊರಹಾಕದು.
* ನಾಯಿಗಳು ಮರದ ಮೇಲಿನಿಂದ ಕೆಳಗಿಳಿಯುವಾಗ ಬೆಕ್ಕುಗಳಂತೆ ಹಿಂದುಮುಂದಾಗಿ ಇಳಿಯಲಾರವು; ಮೂತಿ ಮುಂದಾಗಷ್ಟೆ ಇಳಿಯಬಲ್ಲವು.
* ಹ್ಯಾಮ್‌ಸ್ಟರ್ (ಹೆಗ್ಗಣದಂಥ ದಂಶಕ)ಗಳು ತಮ್ಮ ಹೊರಹೊಟ್ಟೆ ಚೀಲಗಳಲ್ಲಿ ಆಹಾರವನ್ನು ಅನೇಕ ದಿನಗಳವರೆಗೆ ಇರಿಸಿಕೊಂಡಿರಬಲ್ಲವು.
* ಪಾಶ್ಚಿಮಾತ್ಯ ಹಾಗ್ನೋಸ್ ಹಾವುಗಳು ಪ್ರಾಣಾಪಾಯದ ಭೀತಿಗೊಳಗಾದಾಗ ಸತ್ತಂತೆ ನಟಿಸುತ್ತವೆ.
* ಹಸುವೊಂದರಿಂದ ಎರಡು ನಿಮಿಷ ಹಾಲು ಕರೆದಾಗ ಎಷ್ಟು ಹಾಲು ಸಿಕ್ಕಿತು ಗೊತ್ತೆ ? – ಅರ್ಧ ಗ್ಯಾಲನ್ (೨.೨೫ ಲೀಟರ್) !
* ಮನುಷ್ಯನೊಬ್ಬ ಒಂದೇ ಉಸಿರಿನಲ್ಲಿ ೧೫೧ ಮೋಂಬತ್ತಿಗಳ ಉರಿ ಆರಿಸಿದ. – ಇದೇ ದೊಡ್ಡ ದಾಖಲೆ !
* ಮನುಷ್ಯನೊಬ್ಬನ ನಿಕ್ಕರ್‌ನ ಸೊಂಟದ ಅತಿ ದೊಡ್ಡ ದಾಖಲೆ ಅಳತೆ - ೫೮ ಅಡಿ !
* ಪ್ರಸ್ತುತದಲ್ಲಿ ವಾಸಿಸುತ್ತಿರುವ ಮನುಷ್ಯನೊಬ್ಬನ ದಾಖಲೆ ಎತ್ತರ - ೮ ಅಡಿ ೧ ಅಂಗುಲ.
* ಡಾಲ್ಫಿನ್‌ಗಳು ಚಿಂಪಾಂಜಿಗಳಿಗಿಂತ ಹೆಚ್ಚು ಕುಶಲಿಗಳು.



* ಬೀವರ್ ಪ್ರಾಣಿಯ ಹಲ್ಲುಗಳು ಎಷ್ಟು ಚೂಪಾಗಿರುತ್ತವೆಂದರೆ ಸ್ಥಳೀಯ ಅಮೆರಿಕನ್ನರು ಅವನ್ನು ಚಾಕುಗಳಂತೆ ಉಪಯೋಗಿಸುತ್ತಾರೆ.
* ಕಾಂಗರೂ ಇಲಿಗಳು ನೀರನ್ನು ಕುಡಿಯದೆಯೇ ದೀರ್ಘಕಾಲ ಜೀವದಿಂದಿರಬಲ್ಲವು.
* ಈಜಿಪ್ಟಿನ ರಣಹದ್ದುಗಳು ಕಲ್ಲು ತೂರಿ ಆಸ್ಟ್ರಿಚ್ ಮೊಟ್ಟೆಗಳನ್ನು ಒಡೆಯುತ್ತವೆ.
* ಜಗತ್ತಿನಲ್ಲಿ ಅತ್ಯಂತ ಹೆಚ್ಚು ಬೆಲೆಯ ಕಾಫಿ ಯಾವುದು ಗೊತ್ತೆ? – ಪ್ರಾಣಿ - ಹಿಕ್ಕೆಯಿಂದ ಮಾಡಿದುದು !
* ಹಿಪ್ಪೊ ಪ್ರಾಣಿಯ ಚರ್ಮ ಮರದ ಹಲಗೆಯಷ್ಟು ದಪ್ಪ.

ವಿವಿಧ ಮೂಲಗಳಿಂದ : **ಕೆ. ಎಲ್. ಗೋಪಾಲಕೃಷ್ಣ ರಾವ್**

# ಕನ್ನಡ ಸಮುದಾಯದ ಆತಂಕಗಳು

**ಡಾ॥ ರಂಗರಾಜ ವನದುರ್ಗ**

ಎರಡು ತಿಂಗಳಲ್ಲಿ ಎರಡು ಬೃಹತ್ ಕನ್ನಡ ಸಮ್ಮೇಳನಗಳು ನಡೆದಿವೆ. ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಮತ್ತು ಬೆಳಗಾವಿಯಲ್ಲಿ ನಡೆದ ವಿಶ್ವ ಕನ್ನಡ ಸಮ್ಮೇಳನ ಇದಕ್ಕೆ ಸಾಕ್ಷಿಯಾಗಿವೆ. ಎರಡು ಸಮ್ಮೇಳನಗಳಲ್ಲಿ ಕನ್ನಡ ಸಮುದಾಯದ ತವಕ-ತಲ್ಲಣ ಮತ್ತು ಆಸೆ-ಆತಂಕಗಳು ಅನಾವರಣಗೊಳ್ಳಲು ಯತ್ನಿಸಿವೆ. ಸಮ್ಮೇಳನದ ಶುರುವಿನಿಂದ ಹಿಡಿದು ಅದರ ಅಂತ್ಯದವರೆಗೂ ಹಲವು ಅಭಿಪ್ರಾಯ ಮತ್ತು ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ಕಾರಣ ಕನ್ನಡದ ಸ್ವೈಜ ಆತಂಕಗಳ ನೆಲೆಯಲ್ಲಿ ಹೊರಟ ಕೆಲ ಧ್ವನಿಗಳು ಇಲ್ಲಿವೆ. ಕನ್ನಡತನದ ಹೆಸರಿನಲ್ಲಿ ನಡೆಯುವ ಈ ಸಮ್ಮೇಳನ ಸಾರ್ವಜನಿಕರ ಸ್ವತ್ತು ಮತ್ತು ಸ್ವಂತಿಕೆಗೆ ಸಂಬಂಧಿಸಿದ್ದು. ಸಹಜವಾಗಿ ಇದು ಕನ್ನಡ ಸಂವೇದನೆಯ ಸಾಕ್ಷಿಪ್ರಜ್ಞೆ ಆಗಬೇಕಾದದ್ದು ಅನಿವಾರ್ಯ. ಆದುದರಿಂದ ಇದನ್ನು ಉದ್ಘಾಟಿಸುವ, ಇಲ್ಲವೇ ಇದರಲ್ಲಿ ಪಾಲುದಾರಿಕೆ ಪಡೆಯುವ ಯಾವುದೇ ವ್ಯಕ್ತಿ ಹಾಗೂ ವ್ಯಕ್ತಿತ್ವಗಳು ಕನ್ನಡತನಕ್ಕೆ ಸಂಬಂಧಿಸಿರಬೇಕು. ಆದರೆ ಈ ಸಾಕ್ಷಿ ಪ್ರಜ್ಞೆಗೆ ವ್ಯತಿರಿಕ್ತವಾಗಿ, ಸಾಮಾಜಿಕ ನ್ಯಾಯಕ್ಕೆ ದೂರವಾಗಿ, ಏಕೀಕರಣ ವ್ಯವಸ್ಥೆಗೆ ವಿರೋಧಿಯಾಗಿ ನಿಲ್ಲುವ ಯಾವುದೇ ನಿಲುವು ಕನ್ನಡ ಸಮುದಾಯಕ್ಕೆ ಎದುರಾದ ಆತಂಕವೇ ಆಗಿದೆ. ಇಂತಹ ಸಂದರ್ಭದಲ್ಲಿ ಪ್ರೊ॥ ಬರಗೂರು ರಾಮಚಂದ್ರಪ್ಪ ಎತ್ತುವ ಪ್ರಶ್ನೆಗಳು ಅನಿವಾರ್ಯವಾಗುತ್ತವೆ.

ಇಲ್ಲಿ ನಾವೆಲ್ಲಾ ಒಂದಂಶ ಗಮನಿಸಬೇಕು. ಕನ್ನಡವನ್ನು ನಾಡು, ನುಡಿ, ನೆಲ, ಜಲ, ನಾಲಿಗೆ, ನಂಬಿಕೆಯಾಗಿ ನೋಡಲು ಸಾಧ್ಯವಿದೆ. ಅದರಂತೆ ಕನ್ನಡ, ಕನ್ನಡಿಗ, ಕರ್ನಾಟಕದ ನೆಲೆಯಲ್ಲೂ ಪರಿಭಾಷಿಸುವ ಕ್ರಮವಿದೆ. ಆದರೆ ಕನ್ನಡವನ್ನು ಒಂದು ಸಮುದಾಯವಾಗಿ ಒಳಗೊಳ್ಳುವ ರೀತಿಯನ್ನು ಮತ್ತು ಒಳಗೊಂಡವರ ಆತಂಕಗಳನ್ನು ಹಲವು ನಿಲುವಿನಲ್ಲಿ ಅರ್ಥೈಸುವ ಅಗತ್ಯವಿದೆ. ಕನ್ನಡ ಸಮುದಾಯದಲ್ಲಿ ನೆಲ ಮೂಲವಾಗಿ ಬದುಕುತ್ತಿರುವವರು ಜನಸಾಮಾನ್ಯರು, ಹಳ್ಳಿಯವರು, ಅನಕ್ಷರಸ್ಥರು. ಇವರು ಕೇವಲ ನವೆಂಬರ್ ತಿಂಗಳಿಗೆ ಸೀಮಿತವಾದ ಕನ್ನಡಿಗರಲ್ಲ. ಬದಲಿಗೆ ಉಳಿದ ಹನ್ನೊಂದು ತಿಂಗಳ ಆತಂಕಗಳ ಆವರಣದಲ್ಲಿ ಇದ್ದವರು. ಇವರ ಭಾಷೆ, ಬದುಕು, ವೇಷ-ಭೂಷಣವೆಲ್ಲಾ ಕನ್ನಡವೇ ಆಗಿದೆ. ಇವರು ನೋಡುವ ಚಲನಚಿತ್ರ, ಪಡೆಯುವ ಅನುಭವ, ದುಡಿಯುವ ಕಸುಬು ಸಹ ಕನ್ನಡವೇ ಎಂಬುದು ಗಮನಾರ್ಹ. ಹೀಗಾಗಿ ಕನ್ನಡದ ಜೊತೆಗೆ ಸಮುದಾಯ ಇಟ್ಟುಕೊಂಡಿರುವ ಇವರ ಸಂಬಂಧ 'ಚರ್ಮ ಮತ್ತು ಚೆರ್ಬಿ' ತರಹದಲ್ಲಿದೆ.

ಕನ್ನಡ ಸಮುದಾಯದ ಚರಿತ್ರೆ ಬಿಂಬಿಸುವ ನಮ್ಮ ಚಾರಿತ್ರಿಕ ಪುಟಗಳು ಹೆಚ್ಚು ಸಂಭ್ರಮಿಸಿವೆ. ಸಾಧುಗೆ ಸಾಧು, ಸುಭಟರ್ಕಳ್ ಕವಿಗಳ್, ಕುರಿತೋದದೆಯೇ, ಜಿತೇನ ಲಭ್ಯತೇ ಲಕ್ಷ್ಮಿ, ನೆನೆವುದೆನ್ನ ಮನಂ, ಕೈಎತ್ತು ಕಲ್ಪವೃಕ್ಷ , ಮೂಗ್ನಲ್ ಕನ್ನಡ ಪದ, ಸುಲಿದ ಬಾಳೆಯ ಹಣ್ಣಿನಂದದಿ ಇಂತಹ ಹತ್ತು ಹಲವು ಸಂದರ್ಭಗಳಲ್ಲಿ ಕನ್ನಡ ಸಮುದಾಯದ ಅಭಿಮಾನಗಳು ಮಾತ್ರ ಹಾಜರಾಗಿವೆ. ಆದರೆ ಆರಂಭದಿಂದಲೂ ಜನಪದರ ಕನ್ನಡ ತಾನೊಂದು ಸಮುದಾಯವಾಗಿ, ಭಾಷೆಯಾಗಿ, ಬದುಕಾಗಿ, ಅಧಿಕಾರವಾಗಿ ಎದ್ದು ನಿಲ್ಲುವಾಗ ಅನೇಕ ಆತಂಕಗಳನ್ನು ಎದುರಿಸಿದೆ. ದ್ವಿಭಾಷಿಕ ಸಂಬಂಧ ಬೆಳೆಸಿದೆ. ಕೊಳು ಕೊಡುವಿಕೆ ನಡೆಸಿದೆ. ಸೋತಿದೆ, ಗೆದ್ದಿದೆ, ಸಾಮರಸ್ಯ ಬೆಳೆಸಿದೆ. ಸಂಘರ್ಷ ನಡೆಸಿದೆ. ಇಲ್ಲೆಲ್ಲಾ ಉಂಟಾದ ಆತಂಕದ ಅಲೆಗಳು ಅನೇಕ.

ಕಲಿತ ಕನ್ನಡ ಸಮುದಾಯಕ್ಕಿಂತ ಕಲಿಯದ ಕನ್ನಡ ಸಮುದಾಯದ ಆತಂಕ ಏಳಿನ್ನವಾದದ್ದು. ಅದರಂತೆ ಪುರುಷರಿಗಿಂತ ಮಹಿಳಾ ಸಮುದಾಯದ ಆತಂಕ, ಉದ್ಯೋಗಿಗಳಿಗಿಂತ ನಿರುದ್ಯೋಗಿ ಸಮುದಾಯದ ಆತಂಕ, ನಗರಕ್ಕಿಂತ ಹಳ್ಳಿ ಸಮುದಾಯದ ಆತಂಕ ಬೇರೇನೆ ಆಗಿವೆ. ಒಳನಾಡಿಗಿಂತ ಗಡಿನಾಡು, ಗಡಿನಾಡಿಗಿಂತ ಹೊರನಾಡಿನ ಕನ್ನಡ ಸಮುದಾಯಗಳು ಬೇರೊಂದು ಆತಂಕದಲ್ಲಿವೆ. ವಸಾಹತೀಕರಣ ಕಾಲಘಟ್ಟಕ್ಕಿಂತ ಏಕೀಕರಣ, ನಾಮಕರಣ, ಜಾಗತೀಕರಣ ಸಂದರ್ಭದ ಕನ್ನಡ ಸಮುದಾಯದ ಆತಂಕಗಳು ಇನ್ನಷ್ಟು ಭಯಾನಕ ಆಗಿವೆ.

ಕಲಿಕಾ ಪದ್ಧತಿಯಲ್ಲಿನ ಆತಂಕಗಳು ನಿತ್ಯವೂ ಹೆಚ್ಚಾಗುತ್ತಿವೆ. ಕಾನ್ವೆಂಟ್ ಮತ್ತು ಕನ್ನಡಗಳ ನಡುವಿನ ಅಂತರ ಕೇವಲ ಶೈಕ್ಷಣಿಕ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿ ಉಳಿದಿಲ್ಲ. ಇವೆರಡೂ ಕೇವಲ ಕಟ್ಟಡಗಳಾಗಿ, ಶಾಲೆಗಳಾಗಿ, ಭಾಷೆಗಳಾಗಿ ಉಳಿಯುತ್ತಿಲ್ಲ. ಕಾನ್ವೆಂಟ್ ಸ್ಕೂಲ್‌ಗಳ ಮುಂದೆ ನಿಂತಿರುವ ಕ್ಯೂ ಡೊನೇಶನ್ ನೀಡಲು ನಿಂತಿದ್ದರೆ, ಕನ್ನಡ ಅಂಗನವಾಡಿಗಳ ಮುಂದಿರುವ ಸಾಲು ಬಿಸಿ ಊಟಕ್ಕೆ ನಿಂತಿದೆ. ಹೀಗಾಗಿ ಇವೆರಡರ ನಡುವೆ ಅಗಲಗೊಳ್ಳುತ್ತಿರುವ ಸಾಂಸ್ಕೃತಿಕ, ಸಾಮಾಜಿಕ, ಔದ್ಯೋಗಿಕ ಅಂತರ ಅಂತಿಮವಾಗಿ ಕನ್ನಡ ಸಮುದಾಯಗಳ ಶೋಷಣೆಗೆ ಕಾರಣವಾಗುತ್ತಿದೆ.

ಪ್ರಾಥಮಿಕ ಹಂತದಲ್ಲಿ ಕಲಿಕೆಯ ಮಾಧ್ಯಮ ಯಾವುದಿರಬೇಕು ? ಇದನ್ನು ನಿರ್ಧರಿಸುವವರು ಕಲಿಯುವ ಮಕ್ಕಳು, ಕಲಿಸುವ ಶಿಕ್ಷಕರು, ಕಳಿಸುವ ಪಾಲಕರು, ರೂಪಿಸುವ ತಜ್ಞರು ಇವರಾರೂ ಅಲ್ಲ. ಇವರೆಲ್ಲರ ಆಚೆಗೆ ನ್ಯಾಯಾಲಯಗಳು ನಿರ್ಧರಿಸುತ್ತಿವೆ. ೫೨ ಸಾವಿರ ಸರ್ಕಾರಿ ಕನ್ನಡ ಪ್ರಾಥಮಿಕ ಶಾಲೆಗಳಿಗಿಂತ ೮ ಸಾವಿರ ಇಂಗ್ಲಿಷ್ ಕಾನ್ವೆಂಟ್ ಖಾಸಗಿ ಶಾಲೆಗಳು ಚರ್ಚೆಯಾಗುತ್ತಿವೆ. ಕನ್ನಡ ಕಲಿಯುವ ಪ್ರತಿಶತ ೮೮ ವಿದ್ಯಾರ್ಥಿ ಗಳಿಗಿಂತ ವೃತ್ತಿನಿರತ ವಿದ್ಯಾಭ್ಯಾಸ ಮಾಡುವ ಪ್ರತಿಶತ ೧೨ ವಿದ್ಯಾರ್ಥಿಗಳು ಗಮನ ಸೆಳೆಯುತ್ತಿದ್ದಾರೆ. ಏನಿದರ ಅರ್ಥ ? ಅರಿವು ನೀಡಬೇಕಾದ ಅಕ್ಷರಸೂರ್ಯನಲ್ಲಿ ಅಸಮಾನತೆ ತರುತ್ತಿದ್ದೇವೆ. ಕಲಿಯುವ ಮಕ್ಕಳಲ್ಲಿ ಅಂತರ ಕಲ್ಪಿಸುತ್ತಿದ್ದೇವೆ. ಹೀಗಾಗಿ ಹಿಂದೊಮ್ಮೆ ವಾಗ್ದೇವಿಯ ಶಬ್ದ ಭಂಡಾರದ ಮುದ್ರೆಯನ್ನು ಹೊಡೆದ ರನ್ನ ಈಗ ನೆನಪಾಗುತ್ತಿದ್ದಾನೆ.

ನಾಡು, ನುಡಿ ಪರಂಪರೆಯ ವಾರಸುದಾರಿಕೆ ಹೊತ್ತುಕೊಳ್ಳುವಲ್ಲಿ ಕೆಲವರಿಗೆ ಕೇವಲ ಹಳ್ಳಿ ಮಕ್ಕಳು ಮಾತ್ರ ನೆನಪಾಗುತ್ತಾರೆ. ನಗರದ ಕಾನ್ವೆಂಟ್‌ನ ಕಾಂಕ್ರೀಟ್‌ಗಳು ಇದೇ ಕನ್ನಡ ನೆಲದ ನೀರು ಗಾಳಿಯಿಂದ ನಿಂತಿಲ್ಲವೆ ? ಈ ಪ್ರಶ್ನೆಗೆ ಉತ್ತರ ನೀಡಬೇಕಾದವರೇ ಕನ್ನಡ ಸಮ್ಮೇಳನ ಉದ್ಘಾಟಿಸುತ್ತಾರೆ. ತಮ್ಮ ಕಂಪನಿಯಲ್ಲಿ ಕನ್ನಡಿಗರಿಗೆ ಉದ್ಯೋಗ ಕೇಳಿದರೆ ಮೆರಿಟ್ ಬಗ್ಗೆ ಮಾತಾಡುತ್ತಾರೆ. ಸಾಮಾಜಿಕ ನ್ಯಾಯಕ್ಕೆ ಎಳ್ಳು ನೀರು ಬಿಡುತ್ತಾರೆ. ತಮ್ಮ ಕಂಪನಿಗಳಲ್ಲಿ ೫೫ ಸಾವಿರ ಕನ್ನಡಿಗರಿಗೆ ಉದ್ಯೋಗ ಕೊಟ್ಟಿದ್ದೇವೆ ಎನ್ನುತ್ತಾರೆ. ಆಶ್ಚರ್ಯವೆಂದರೆ ಈ ರೀತಿ ಉದ್ಯೋಗ ಪಡೆದ ಇವರೆಲ್ಲಾ ಕಾನ್ವೆಂಟ್ ಸ್ಕೂಲ್‌ಗಳಲ್ಲಿ ಓದಿದ ಕನ್ನಡ ಊರಿನ ಹುಡುಗ ಹುಡುಗಿಯರು.

ನಾಡಿನ ಜನಸಮುದಾಯಗಳು ಪ್ರಾರಂಭದಿಂದಲೂ ತಮ್ಮದೇ ಆದ ಕಸುಬುಗಳ ಮೂಲಕ ಕನ್ನಡವನ್ನು ಕಟ್ಟಿ ಬೆಳೆಸಿವೆ. ಕನ್ನಡಕ್ಕೆ ಭಾಷಿಕ ಪದ ಸಂಪತ್ತನ್ನು ತುಂಬಿವೆ. ಸಾಹಿತ್ಯಿಕ, ಸಾಂಸ್ಕೃತಿಕ ಸಮೃದ್ಧತೆಯನ್ನೂ ತಂದಿವೆ. ಆದರೆ ಆ ರೀತಿ ತಂದುಕೊಟ್ಟ ಕುಂಬಾರ, ಕಂಬಾರ, ಅಗಸ, ಅಕ್ಕಸಾಲಿಗ, ಚಮ್ಮಾರ, ಅಂಬಿಗ, ಹಡಪದರಂತಹ ಹತ್ತು ಹಲವು ಕಸುಬುಗಳ

**೭೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಾಡಿದ ಭಾಷಣದ ಭಾಗಗಳು**

ಇಂದು ಸಂಪೂರ್ಣ ಕಣ್ಮರೆಯಾಗುತ್ತಿವೆ. ಇವುಗಳ ಜಾಗದಲ್ಲಿ ಕಂಪನಿಗಳು ಬರುತ್ತಿವೆ. ಕಾರಣ ಜಾಗತಿಕರಣ. ಬೇಡರ ಬಿಲ್ಲು, ಕುರುಬರ ಡೊಳ್ಳು, ಕಂಬಾರನ ಕುಲಿಮೆ, ಕುಂಬಾರನ ಟಿಗುರಿ, ಅಂಬಿಗನ ದೋಣಿಗಳು ಇಂದು ಆದಾಯದ ಮೂಲಗಳಾಗಿ ಉಳಿದಿಲ್ಲ. ಇವೆಲ್ಲವುಗಳ ಜೊತೆಯಾಗಿ ಬಂದಿದ್ದ ಕನ್ನಡತನವು ಬದುಕುತ್ತಿಲ್ಲ. 'ಬಳಸು ಬೀಸಾಡು' ಎನ್ನುವ ಈ ಜಾಗತೀಕರಣದ ಎದುರು 'ಬದುಕು ಬದುಕಿಸು' ಎನ್ನುವ ಸಮುದಾಯಗಳು ಸೊರಗುತ್ತಿವೆ. ಏಕೆಂದರೆ ಈ ಜಾಗತೀಕರಣವನ್ನು ಕಪ್ಪು ಹಣದವರು ಸ್ವಾಗತಿಸುವದಕ್ಕೂ, ಕಪ್ಪು ಮುಖದವರು ಅದನ್ನು ವಿರೋಧಿಸುವದಕ್ಕೂ ಕಾರಣಗಳಿವೆ.

ಕರ್ನಾಟಕ ರಾಜ್ಯದ ಗಡಿಗಳ ಉದ್ದಕ್ಕೂ ಅನೇಕ ಏರುಪೇರುಗಳು ನಡಿಯುತ್ತಿವೆ. ಹೊಲ ಗದ್ದೆ, ವ್ಯಾಪಾರ ವಹಿವಾಟು, ಕೊಡುಕೊಳ್ಳುವಿಕೆ, ವೃತ್ತಿ ಉದ್ಯೋಗಗಳಲ್ಲಿ ಭಾರೀ ಬದಲಾವಣೆಗಳಾಗುತ್ತಿವೆ. ತನ್ನ ಹೊಲದಲ್ಲಿನ ಕನ್ನಡದ ಮಾಲೀಕ ಈಗ ಅಲ್ಲಿ ತಾನೇ ಕೂಲಿಯಾಗುತ್ತಿದ್ದಾನೆ. ಉತ್ತರದ ಢಾಬಗಳು, ಪೂರ್ವದ ಕ್ಯಾಂಪುಗಳು, ದಕ್ಷಿಣದ ಪಂಜುರ್ಲಿಗಳು ಕನ್ನಡದ ನೆಲದಲ್ಲಿ ಪ್ರವೇಶಿಸಿವೆ. ಇವು ನಮ್ಮ ನಿಮ್ಮ ಊರಿನ ಕೇರಿ ಕೊಪ್ಪ ಹಟ್ಟಿ ತಾಂಡಗಳ ತರಹ ಅಲ್ಲ. ಪರೋಟ, ಲುಂಗಿ, ಜೋಪುಡಿಗಳು ಕನ್ನಡವನ್ನು ಕೈಯೊಡ್ಡುವಂತೆ ಮಾಡುತ್ತಿವೆ.

ಹಾಗಾದರೆ, ಕನ್ನಡ ಸಮುದಾಯದ ಆತಂಕಗಳಿಗೆ ಎಲ್ಲಿ, ಹೇಗೆ, ಯಾರಿಂದ ಪರಿಹಾರ ? ರೈತರು, ಕಾರ್ಮಿಕರು, ಮಹಿಳೆಯರು, ದಲಿತರು ಮತ್ತು ಮುಂತಾದವರು ತಮ್ಮ ವೈಯಕ್ತಿಕ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳಲು ಪರದಾಡುತ್ತಿದ್ದಾರೆ. ಉಳಿದಂತೆ ಕವಿ, ಕಲಾವಿದ, ಸಾಹಿತಿ, ಉದ್ಯೋಗಿ, ಸಂಗೀತಗಾರ, ಹೋರಾಟಗಾರ, ಮಾಧ್ಯಮಗಾರರು ಈಗ ತಮ್ಮ ಮೌನಮುರಿದು ಮಾತಾಡುವ ಸಂದರ್ಭ ಬಂದಿದೆ. ಬಹುತೇಕ ಮಾಧ್ಯಮಗಳು ಇಂದು ಉದ್ಯಮಗಳಾಗುತ್ತಿವೆ. ಅದರ ಯಜಮಾನರು ಕನ್ನಡದ ಆಚೆಯ ಊರಿನವರು. ಇಲ್ಲವೆ ಇಲ್ಲಿಯ ಪ್ರಭುಗಳ ಸಂಬಂಧಿಕರು. ವಿದ್ಯುನ್ಮಾನ ಮಾಧ್ಯಮಗಳು ಇಂದು ತುಂಬ ಪ್ರಭಾವಶಾಲಿ ಮತ್ತು ಪರಿಣಾಮಕಾರಿ ಪಾತ್ರವಹಿಸುತ್ತಿವೆ. ಆದರೆ ಕೆಲವೆಡೆ ಹಳ್ಳಿ ಹುಡುಗ ಪ್ಯಾಟಿಗೆ ಬಂದ, ಪ್ಯಾಟಿ ಹುಡುಗಿ ಕಾಡಿಗೆ ಹೋದ್ಲು, ಇದು ಕಥೆಯಲ್ಲ, ಬ್ರಹ್ಮಾಂಡ ಜ್ಯೋತಿಷ್ಯ, ಮಾಟಮಂತ್ರ, ಜನ್ಮಾಂತರಗಳೆಲ್ಲಾ ನೋಡಿದರೆ ಮಾಧ್ಯಮಗಳಲ್ಲಿ ಹೀಗೂ ಉಂಟೆ, ಎಂದೆನಿಸುತ್ತದೆ. ಏಕೆಂದರೆ ಹಳ್ಳಿ, ಹಟ್ಟಿ, ಕೇರಿ, ಕಂದಕಗಳಲ್ಲಿ ಕನ್ನಡದ ಸಮುದಾಯಗಳಿವೆ. ಅವೆಲ್ಲ ಓದಿದ ನಮ್ಮನ್ನು ನೋಡುತ್ತಿವೆ. ಬಹಳ ತಿಳಿದವರು ಎಂದು ಭಾವಿಸುತ್ತಿವೆ. ಇದಕ್ಕೆ ಜವಾಬು ನೀಡಲು ಇವು ನಮ್ಮನ್ನು ಕೇಳುತ್ತಿವೆ. ಕಾರಣ, ಕನ್ನಡದ ಬಹುತ್ವ ಬದುಕಬೇಕು ಅಕ್ರಮ ಮತ್ತು ಆತಂಕಗಳು ದೂರವಾಗಬೇಕು. ಕಲಾವಿದ ಉಳಿದರೆ ಕಲೆಗಳು ಉಳಿಯುತ್ತವೆ. ಬದುಕು ಉಳಿದರೆ ಭಾಷೆ ಉಳಿಯುತ್ತದೆ.


ಡಾ॥ ರಂಗರಾಜ ವನದುರ್ಗ
ಕುಲಸಚಿವರು (ಮೌಲ್ಯಮಾಪನ), ವಿಜಯನಗರ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ.


## ಸಾದರ ಸ್ವೀಕಾರ

**ವಿದೇಶದಲ್ಲಿ ಬಡವರ ಬಂಧು** (ಪ್ರವಾಸ ಕಥನ)
*ಡಾ॥ ಅಶೋಕ ನರೋಡೆ*
**ಪುಟ : ೫೫** **ಬೆಲೆ : ರೂ. ೬೫**
**ಶಿವಶರಣೆ ನಿಂಬೆಕ್ಕ ವಿದ್ಯಾಸಂಸ್ಥೆ**, ಹೊನ್ನಳ್ಳಿ ತಾಲೂಕು, ವಿಜಾಪುರ ಜಿಲ್ಲೆ.

**ಕೊಡಗಿನ ಐತಿಹ್ಯ ಕತೆಗಳು** *ಡಾ॥ ಬಿ. ಪ್ರಭಾಕರ ಶಿಶಿಲ*
**ಪುಟ : ೧೨೦** **ಬೆಲೆ : ರೂ. ೭೦**

**ಮತ್ಸ್ಯಗಂಧಿ** (ಮಹಾಭಾರತ ಆಧರಿತ ಕಾದಂಬರಿ)
*ಡಾ॥ ಬಿ. ಪ್ರಭಾಕರ ಶಿಶಿಲ*
**ಪುಟ : ೨೦೮** **ಬೆಲೆ : ರೂ. ೧೨೫**

**ಆ ಒಂದು ವರುಷ** (ಮಹಿಳಾ ಕಾಲೇಜು ಮಾಸ್ತರರ ನೆನಪುಗಳು)
*ಡಾ॥ ಬಿ. ಪ್ರಭಾಕರ ಶಿಶಿಲ*
**ಪುಟ : ೧೬೮** **ಬೆಲೆ : ರೂ. ೧೦೦**

**ಏನ್ ಗ್ರಾಚಾರ ಸಾ...!** (ಲೇಖನಗಳು)
*ಡಾ॥ ಬಿ. ಪ್ರಭಾಕರ ಶಿಶಿಲ*
**ಪುಟ : ೧೨೮** **ಬೆಲೆ : ರೂ. ೭೫**
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ರಾಜ್ ಪ್ರಕಾಶನ**, ನಂ. ೮೩, ಕೆ.ಎಸ್.ಆರ್.ಟಿ.ಸಿ. ಲೇಔಟ್, ಹನುಮಂತನಗರ, ಬನ್ನಿಮಂಟಪ, ಮೈಸೂರು-೫೭೦ ೦೧೫

**ನಕ್ಸಲ್ ಚಳವಳಿ : ಪರಿಚಯ-ಪರಾಮರ್ಶೆ**
ಮಂಗ್ಳೂರು ವಿಜಯ
**ಪುಟ : ೪೮೮** **ಬೆಲೆ : ರೂ. ೩೭೫**
**ಸಂಬುದ್ಧ ಪ್ರಕಾಶನ**, ವಿದ್ಯಾ ಟ್ಯುಟೋರಿಯಲ್ಸ್ ಪಕ್ಕ ವಿ. ನಾಗನಹಳ್ಳಿ, ಬೆಂಗಳೂರು - ೫೬೦ ೦೩೨

**ಪೂಜ್ಯಶ್ರೀ ಡಾ॥ ಬಸವಲಿಂಗ ಪಟ್ಟದೇವರು**
*ಡಾ॥ ಗುರುಲಿಂಗಪ್ಪ ಧಬಾಲೆ*
**ಪುಟ : ೧೪೬** **ಬೆಲೆ : ರೂ. ೭೫**

**ಶರಣ ಸೊಲ್ಲಾಪುರ** *ಸಂ. ಡಾ॥ ಗುರುಲಿಂಗಪ್ಪ ಧಬಾಲೆ*
**ಪುಟ : ೨೬೦** **ಬೆಲೆ : ರೂ. ೧೮೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಗಡಿ ಕನ್ನಡ ಸುಡಿ ಸಾಂಸ್ಕೃತಿಕ ವೇದಿಕೆ**, 'ಶಿವಶಂಕರ', ಕೊಕ್ಕಳಗಿ ನಗರ, ಬ್ಯಾಗೇಹಳ್ಳಿ ರೋಡ್ ಅಕ್ಕಲಕೋಟ - ೪೧೩ ೨೧೬

**ಕಾವ್ಯ ಡಿಂಡಿಮ** (ಕವನ ಸಂಕಲನ)
*ಕೊಡಗಹಳ್ಳಿ ಪುರುಷೋತ್ತಮ*
**ಪುಟ : ೧೨೦** **ಬೆಲೆ : ರೂ. ೧೦೦**

**ಕಾವ್ಯಕನ್ನಿಕೆಯ ತೆಕ್ಕೆಯಲ್ಲಿ** (ಕವನಗಳು)
*ಕೊಡಗಹಳ್ಳಿ ಪುರುಷೋತ್ತಮ*
**ಪುಟ : ೧೮೦** **ಬೆಲೆ : ರೂ. ೬೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪುರುಷೋತ್ತಮ ಪ್ರಕಾಶನ**, ಶ್ರೀರಾಮ ನಿಲಯ, ಸಂತೇಮಾಳ, ಅರಕೆರೆ, ಮಂಡ್ಯ, ಶ್ರೀರಂಗಪಟ್ಟಣ ತಾಲೂಕು

**ನಾವು ಸರ್ವ ಸ್ವ-ತಂತ್ರರು** (ಕವನ ಸಂಕಲನ)
*ಎಂ. ಡಿ. ಗೋಗೇರಿ*
**ಪುಟ : ೮೪** **ಬೆಲೆ : ರೂ. ೬೦**
**ಸಾಹಿತ್ಯ ಸೌಧ ಪ್ರಕಾಶನ**, ೪ನೇ ಕ್ರಾಸ್, ನವ ಅಯೋಧ್ಯಾನಗರ, ಹಳೇ ಹುಬ್ಬಳ್ಳಿ - ೫೮೦ ೦೨೪

**ಹೊಸ ರುಚಿ** (ಪ್ರಬಂಧ ಸಂಕಲನ) *ಹ. ಶಿ. ಭೈರನಟ್ಟಿ*
**ಪುಟ : ೧೭೦** **ಬೆಲೆ : ರೂ. ೮೫**
**ಕೌಸ್ತುಭ ಪ್ರಕಾಶನ**, ನಂ. ೧೮೯, ಮೂರನೇ ಮಹಡಿ, ಈಎಟಿ ಸ್ಟ್ರೀಟ್, ಬಸವನಗುಡಿ, ಬೆಂಗಳೂರು - ೪

**ದೀಪ್ತಿ ತಿಂದ ಲಾಡು** (ಪ್ರೌಢ ಮಕ್ಕಳ ಕಾದಂಬರಿ)
*ಶಾಂತಾರಾಮ ಸೋಮಯಾಜಿ*
**ಪುಟ : ೭೯** **ಬೆಲೆ : ರೂ. ೪೦**

**ಇಲಿ ಹುಡುಗಿ** (ನೀಳ್ಗತೆಗಳು) *ಶಾಂತಾರಾಮ ಸೋಮಯಾಜಿ*
**ಪುಟ : ೧೬೨** **ಬೆಲೆ : ರೂ. ೭೫**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಸಾಧನಾ ಪ್ರಕಾಶನ, ನಂ. ೧೨೦, ಮೊದಲನೇ ಮಹಡಿ, ಬಳೇಪೇಟೆ ಮುಖ್ಯರಸ್ತೆ, ಬೆಂಗಳೂರು - ೫೬೦ ೦೫೩

**ಮುಗಿಲ ಮಲ್ಲಿಗೆ** (ಕವನ ಸಂಕಲನ) *ಡಾ॥ ವಿಜಯಶ್ರೀ ಸಬರದ*
**ಪುಟ : ೭೨** **ಬೆಲೆ : ರೂ. ೬೦**
**ಪಲ್ಲವಿ ಪ್ರಕಾಶನ**, ವಿಶ್ವವಿದ್ಯಾಲಯ ಅಂಚೆ ಗುಲಬರ್ಗಾ - ೫೮೫ ೧೦೬

**ಪಕೀರಪ್ಪನ ಕುಲಾಯ** (ಜಾನಪದ ಸಾಹಿತ್ಯ ಸಂಗ್ರಹ)
*ಸಂ. ಹುರುಕಡ್ಲಿ ಶಿವಕುಮಾರ್*
**ಪುಟ : ೮೮** **ಬೆಲೆ : ರೂ. ೫೦**
**ವಾಸ್ತವ ಗ್ರೂಪ್ಸ್**, ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ

**ತೆರೆದರಷ್ಟೇ ಬಾಗಿಲು...** (ಕವನ ಸಂಕಲನ)
*ಡಿ.ಎಸ್. ರಾಮಸ್ವಾಮಿ*
**ಪುಟ : ೪೪** **ಬೆಲೆ : ರೂ. ೪೦**
**ಲಡಾಯಿ ಪ್ರಕಾಶನ**, ನಂ. ೨೧, ಪ್ರಸಾದ ಹಾಸ್ಟೆಲ್ ಗದಗ - ೫೮೨ ೧೦೧

**ಅಜ್ಞಾನ** (ವಚನ ಚೌಪದಿ ಕಾವ್ಯ) *ಬಾವಿಶಂ*
**ಪುಟ : ೧೨೪** **ಬೆಲೆ : ರೂ. ೮೦**
**ಅಂಬಿಕಾ ಶಂಕರ ಪ್ರಕಾಶನ**, 'ರೂಪದರ್ಶಿ' ನಿಲಯ, ಮೊದಲನೇ ಮುಖ್ಯರಸ್ತೆ, ಗಾಂಧಿನಗರ ತುಮಕೂರು - ೫೭೨ ೧೦೨

**ಬೇಂದ್ರೆ : ಪಂಚಮುಖಿ** (ವಿಮರ್ಶಾ ಲೇಖನಗಳು) *ಸಿಪಿಕೆ*
**ಪುಟ : ೯೨** **ಬೆಲೆ : ರೂ. ೫೦**

**ಕೃತಿ ಪ್ರತಿ** (ಕಲಿತಾನುವಾದ) *ಸಿಪಿಕೆ*
**ಪುಟ : ೧೫೬** **ಬೆಲೆ : ರೂ. ೭೫**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ತನು ಮನು ಪ್ರಕಾಶನ**, 'ಕಾವ್ಯಲೋಕ', ೧೨೬೭ ಹೆಚ್ಐಜಿ ೧ನೇ ತಿರುವು, ಶ್ರೀರಾಂಪುರ ೨ನೇ ಹಂತ, ಮೈಸೂರು -೨೩

**ಅಭಿಜ್ಞಾನ ಶಾಕುಂತಲ** *ಅನು : ಸಿಪಿಕೆ*
**ಪುಟ : ೧೧೨** **ಬೆಲೆ : ರೂ. ೬೦**
**ನಾಗಾರ್ಜುನ ಎಂಟರ್‌ಪ್ರೈಸಸ್**, ನಂ. ೫೮, ಅಕ್ಕಮಹಾದೇವಿ ರಸ್ತೆ, ದಾವಣಗೆರೆ

**ಚಾಣಕ್ಯ ನೀತಿ** *ಸಿಪಿಕೆ*
**ಪುಟ : ೭೨** **ಬೆಲೆ : ರೂ. ೫೦**

**ಜನ್ನ ಮತ್ತು ಅವನ ಕೃತಿಗಳು** *ಸಿಪಿಕೆ*
**ಪುಟ : ೮೦** **ಬೆಲೆ : ರೂ. ೫೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಶ್ರೀ ಲಲಿತಾ ಬುಕ್ ಬ್ಯೂರೊ**, 'ಅಂಜನಾದ್ರಿ' ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮಿ ಚಿತ್ರಮಂದಿರದ ಹಿಂಭಾಗ, ಮೈಸೂರು - ೫೭೦ ೦೨೪

**ಸುಸ್ಥಿರ ಕೃಷಿ-ಸ್ವಾವಲಂಬಿ ಬದುಕು : ಕರೇಗೌಡ ದಂಪತಿಯ ಸೂತ್ರ** *ಪೂರ್ಣಿಮಾ ತೀರ್ಥ ಮಲ್ಲೇಶ್*
**ಪುಟ : ೨೪** **ಬೆಲೆ : ರೂ. ೨೦**
**ಕೃಷಿ ಮಾಧ್ಯಮ ಕೇಂದ್ರ**, ನಂ. ೧೧೯, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ - ೮

# ಊರು ಸುಟ್ಟರೂ ಹನುಮಪ್ಪ ಹೊರಗ

ಹನುಮಂತ ಹಾಲಿಗೇರಿ

ದರೆಗಟ್ಟಿ ಗ್ರಾಮ ಈಗ ಕಳುವಾಗಿರುವ ಹನುಮಂತನ ಗುಡಿಯ ಸುತ್ತ ಹತ್ತಾರು ತಲೆಮಾರುಗಳ ಹಿಂದೆ ಸಂಪದ್ಭರಿತತೆಯಿಂದ ನೆಲೆಸಿತ್ತು. ಇಲ್ಲಿನ ಮೊಳಕಾಲೆತ್ತರದ ಗೋಡೆಗಳು, ಮಡಿಕೆ ಕುಡಿಕೆಯ ಚೂರುಗಳು ನಿಧಿ ಶೋಧಕ್ಕಾಗಿ ಅಗೆಸಿಕೊಂಡಿರುವ ತಗ್ಗುಗಳು ಇದಕ್ಕೆ ಪುರಾವೆ ಒದಗಿಸುತ್ತವೆ. ದರೆಗಟ್ಟಿಯಿಂದ ಕೂಗಳತೆಯಲ್ಲಿ ವಜ್ರಗಟ್ಟಿ ಗ್ರಾಮವಿದ್ದು, ಇಲ್ಲಿಯ ಜನರು ಕೂಡ ದರೆಗಟ್ಟಿಯ ಹನುಮಪ್ಪನಿಗೆ ಅನಾದಿಕಾಲದಿಂದಲೂ ನಡೆದುಕೊಳ್ಳುತ್ತಿದ್ದರು. ಕಾಲಾನಂತರದಲ್ಲಿ ಯಾವುದೋ ಹೆಮ್ಮಾರಿ ರೋಗ ಊರೊಳಗೆ ಹೊಕ್ಕು ಒಂದೊಂದೆ ಕುಟುಂಬಗಳನ್ನು ಬಲಿ ತೆಗೆದುಕೊಳ್ಳತೊಡಗಿತಂತೆ. ಇದ್ದುಬಿದ್ದವರು ಈ ಊರು ಬಿಟ್ಟು ಈಗ ಊರಿಂದ ಮೂರು ಕಿ.ಮೀ. ದೂರದಲ್ಲಿರುವ ಪ್ರದೇಶಕ್ಕೆ ಹೋಗಿ ನೆಲೆಗೊಂಡರಂತೆ. ಇಂದು ಅದೇ ಜಾಗ ದರೆಗಟ್ಟಿ ಗ್ರಾಮವೆನಿಸಿಕೊಂಡಿದೆ. ಗುಡಿಯ ಸುತ್ತಲಿನ ಎಲ್ಲ ಮನೆಗಳು ಮಣ್ಣಿನಲ್ಲಿ ಮಣ್ಣಾಗಿದ್ದರೂ ಹನುಮಪ್ಪನ ಗುಡಿ ಮಾತ್ರ ಮುಕ್ಕಾಗದೆ ಹಾಗೆಯೇ ಉಳಿದಿದ್ದು, ಎರಡೂ ಊರಿನ ಭಕ್ತರು ಮೊದಲಿನಂತೆಯೇ ಈಗಲೂ ಕೂಡ ತುಂಬ ಶ್ರದ್ಧೆಯಿಂದ ನಡೆದುಕೊಳ್ಳುತ್ತಾರೆ.



ಆಗಿನ್ನೂ ಸೂರ್ಯ ಏಳಲೋ ಬೇಡವೋ ಎಂದು ಕಣ್ಣು ಬಿಡುತಿದ್ದ. ಬೀದಿಯೊಳಗ ಗುಡಿಯೊಳಗಿನ ಹನುಮಪ್ಪ ಕಳುವಾಗ್ಯಾನಪೊ ಎಂದು ಪುಜಾರಿ ಲಬೊ... ಲಬೊ... ಎಂದು ಹೊಯ್ಕೊಳ್ಳುತ್ತ ಓಡುತ್ತಿದ್ದ. ತಂಬಿಗೆ ಹಿಡಕೊಂಡು ಎರಡಕ್ಕೆ ಹೊರಟವರು, ಈಗಿನ್ನು ಎದ್ದು ಒಂದಕ್ಕೆ ಮಾಡುತ್ತಿದ್ದ ಹೈಕಳುಗಳು, ಬಿದ್ದಲ್ಲೆ ಬಿದ್ದು ಹುಡಗೀರ ಕನಸು ಕಾಣುತ್ತಿದ್ದ ಪಡ್ಡೆ ಹುಡುಗರು, ಬಚ್ಚಲದಾಗ ಜಳಕ ಮಾಡುತ್ತಿದ್ದ ಮಡಿವಂತರು, ಎತ್ತಿನ ಮೈ ತೊಳೆಯುತ್ತಿದ್ದ ರೈತರು, ಸಗಣಿ ಕಸ ಗುಡಿಸುತ್ತಿದ್ದ ಆಳುಮಕ್ಕಳು, ಚಳಿ ತಡಿಲಾರದೆ ಚುಟ್ಟಾ ಸೇದುತ್ತಿದ್ದ ಮುದುಕರು ಒಟ್ಟಿನಲ್ಲಿ ಇಡೀ ವಜ್ರಗಟ್ಟಿ ಊರೆಂಬೋ ಊರು ದಿಗಿಲುಗೊಂಡು ಪೂಜಾರಿಯ ಬೆನ್ನ ಹಿಂದೆ ಬಿತ್ತು.

ನಿನ್ನೆ ಮಾಡಿದ ಪಾಪ ಕರ್ಮಗಳನ್ನು ತೊಳೆದುಕೊಳ್ಳಲು ಜಳಕ ಮಾಡಿ, ಭಸ್ಮ ಬಳಕೊಂಡು, ಬಕ್ಕ ಮೈಯಲ್ಲಿ ಹನುಮಪ್ಪನ ಗುಡಿಗೆ ಹೊಂಟಿದ್ದ ಗ್ರಾಮ ಪಂಚಾಯಿತಿ ಚೇರಮನ್ನರು, ಇಡೀ ಊರಿಗೆ ಊರೇ ತನ ಮನೆಯತ್ತ ದಾಂಗುಡಿಯಿಡುತ್ತಿದ್ದುದನ್ನು ನೋಡಿ ಒಂದು ಕ್ಷಣ ಹೌಹಾರಿ, ಭಯ ವಿಹ್ವಲತೆಯಿಂದ ಚಿಂತಿಸತೊಡಗಿದರು. ಚೇರಮನ್ನರನ್ನು ಕಾಣುಗಂಟ ಹೊಯ್ಕೊಳ್ಳುತ್ತಿದ್ದ ಪೂಜಾರಿ, ಅವರನ್ನು ಕಂಡೊಡನೆ ಶಿಷ್ಟ ರಾಗದಲ್ಲಿ ಅಳತೊಡಗಿದ. ಚೇರಮನ್ರಿಗೆ ಕಿರಿಕಿರಿಯಾಗಿ ಬೈದು ಬೆದರಿಸಿ, ಕಾರಣವೇನೆಂದು ಕೇಳಿದರು. ತನ್ನ ರಾಗಕ್ಕೆ ಸ್ವಲ್ಪ ಬ್ರೇಕ್ ನೀಡಿದ ಪುಜಾರಿ ''ಹನುಮಂತ ದೇವರನ್ನು ತುಡಗಮಾಡ್ಯಾರ'' ಎಂದು ಹೇಳಿ ಮತ್ತೆ ತನ್ನ ರಾಗಕ್ಕೆ ಚಾಲನೆ ನೀಡಿದ. ಚೇರಮನ್ನರು ಒಂದು ಕ್ಷಣ ದಂಗಾದರು. ಪ್ರತಿದಿನದ ಪಾಪಗಳನ್ನು ಹನುಮಂತನ ದರ್ಶನದಿಂದ ತೊಳಕೊತಿದ್ನಿ, ಇನ್ನ ಮುಂದ ಯಾರ ದರ್ಶನದಿಂದ ಪಾಪ ತೊಳಕೊಳ್ಳುದು, ಹಿಂದ ಮಾಡಿದ ಪಾಪಗಳನ್ನು ತೊಳಕೊಳ್ಳಲಾರದ ಮುಂದ ಪಾಪಗಳನ್ನು ಹ್ಯಂಗ ಮಾಡುದು ಎಂದು ತನ್ನೊಳಗ ಚಿಂತಿ ಮಾಡಾಕ ಹತ್ತಿ, ಚಿಂತಿಗೆ ಪರಿಹಾರ ಗೊತ್ತಾಗಲಾರದ ತಾನೂ ಪೂಜಾರಿ ಜೊತೆ ರಾಗ ಸೇರಿಸಿ ಅಳಬೇಕೆಂದನು. ಆದರೆ ಸುತ್ತಮುತ್ತಲ ಮಂದಿ ನೋಡಿ ಮರ್ಯಾದೆಗೆ ಅಂಜಿ ಅಳು ನುಂಗಿಕೊಂಡನು.

''ನಮ್ಮ ಊರಿನವರ ಭಕ್ತಿ ಕಡಿಮೆ ಆಗಿರೊದ್ರಿಂದ ಬೇಸತ್ತ ಹನುಮಪ್ಪ ನಮ್ಮ ಊರು ಬಿಟ್ಟು ತಪ್ಪಿಸಿಕೊಂಡು ಓಡಿ ಹೋಗ್ಯಾನ. ಸತ್ಯುಳ್ಳ ಹನುಮಂತನ ಪವಾಡ ಶಕ್ತಿ ಕಂಡು ಬೇರೆ ಊರ ಭಕ್ತರು ಹನುಮಂತನ ಒಲಿಸಿಕೊಂಡು ಕರಕೊಂಡು ಹೋಗ್ಯಾರ'' ಎನ್ನುತ್ತ ತಲೆಗೊಬ್ಬಬ್ಬರು ತಮಗನಿಸಿದ್ದನ್ನು ಒದರತೊಡಗಿದರು.

''ಈಗ ಮುಂದ ಹ್ಯಂಗ ಮಾಡೂದು ?'' ಎಂದು ಚೇರಮನ್ನರು ಜನರ ಒದುರುವಿಕೆಗೆ ಬ್ರೆಕ್ ಹಾಕಿದರು.

''ಎಲ್ಲಾ ಕಡೆ ಹುಡಕಾಡಿಸೋನು.''

''ಪೊಲೀಸ್ ಕಂಪ್ಲೆಂಟ್ ಕೊಡೋಣ.'' ಇಂತಹ ತರಾವರಿ ಸಲಹೆಗಳು ಗುಂಪಿನಿಂದ ತೂರಿ ಬರತೊಡಗಿದವು.

''ತನ್ನನ್ನು ತಾನು ಕಾಪಾಡಿಕೊಳ್ಳಲಾರದ ಹನುಮಂತ ದೇವರು ನಮ್ಮನ್ನೆಲ್ಲಾ ಹ್ಯಂಗ ಕಾಪಾಡತಾನ, ಇಂಥ ಕೈಲಾಗದ ದೇವರು ನಮಗ ಬ್ಯಾಡ'' ಎಂದು ಒದರಿಬಿಟ್ಟ ಹುಚ್ಚಮಲ್ಲ.

ಜನ ಅವನ ಮೇಲೆ ರಪ್ಪಂತ ಉಗಿಬಿದ್ದು, ಸಾಕಾಗುವಷ್ಟು ಒದ್ದು ಗುಂಪಿನಿಂದ ಹೊರಗೊಯ್ದುಬಿಟ್ಟರು. ''ದಡ್ಡ ನನ್ನ ಮಕ್ಕಳು, ಸತ್ಯ ಹೇಳಿದರ ಒಪ್ಪಿಕೊಳ್ಳಾಕ ತಯಾರಿಲ್ಲ'' ಎಂದು ಕುಂಟುತ್ತಾ ಹುಚ್ಚಮಲ್ಲ ಹೊರಹೋಗುವುದು ಕಾಣಿಸಿತು.

ಈ ಮಧ್ಯ ಹಿರಿಯಜ್ಜನೊಬ್ಬ, ''ಆ ದೇವಸ್ಥಾನ ಪೂರ್ವಿಕರ ಕಾಲದಿಂದಲೂ ದರೆಗಟ್ಟಿಗೆ ಸೇರಿದ್ದು. ಆ ಊರಿನ ಹಿರ್‍ಯಾರಿಗೆ ತಿಳಿಸೂದು ಒಳ್ಳೇದು'', ಎಂದು ಸಲಹೆ ನೀಡಿದ. ಬೇರೆ ದಾರಿ ಕಾಣದ ಅವರೆಲ್ಲರೂ ಅಜ್ಜನ ಸಲಹೆಗೆ ಸಮ್ಮತಿಯಿತ್ತು ಕೆಲವು ಯುವಕರಿಗೆ ಸುದ್ದಿ ಮುಟ್ಟಿಸುವ ಜವಾಬ್ದಾರಿ ವಹಿಸಿದರು.

* * *

''ಜಡ್ಡು ಜಡ್ಡು ನಕುಕ್ಕ, ನಕ್ಕುಕ್ಕ'' ಎಂದು ಹಲಗೆಗಳ ಸಪ್ಪಳ ಮೈಲು ದೂರವಿರುವ ಮುಂಚೆಯೇ ವಜ್ರಗಟ್ಟಿಯ ಯುವಕರಿಗೆ ದರೆಗಟ್ಟಿಯಿಂದ ಕೇಳಿಸತೊಡಗಿತು. ಅವರು ಊರಲ್ಲಿ ಯಾರದೋ ಲಗ್ನ ನಡೆತಿರಬಹುದು ಎಂದು ಅಂದಾಜಿಸಿಕೊಂಡರು. ಹತ್ತಿರ ಬಂದು ನೋಡಿದರೆ ಟ್ರ್ಯಾಕ್ಟರಿನಲ್ಲಿ ಯಾವುದೋ ಒಂದು ಮೂರ್ತಿ ಇಟ್ಟು ಮೆರವಣಿಗೆ ಮಾಡುತ್ತಿದ್ದಾರೆ. ದೃಷ್ಟಿಸಿ ನೋಡುತ್ತಾರೆ, ಅರೆ! ಅದು ಅದೇ ಗುಡಿಯಲ್ಲಿ ಕಳುವಾದ ಹನುಮಂತ ದೇವರು! ಹನುಮಂತ ತನ್ನ ಸೊಟ್ಟ ಮೂತಿಯಲ್ಲಿ ಇವರನ್ನು ನೋಡಿ ಅಣಕಿಸಿದಂತಾಯಿತು. ಆ ಮೆರವಣಿಗೆಯಲ್ಲಿ ಭಾಗವಹಿಸಿದವರೆಲ್ಲರೂ ಈ ಯುವಕರಿಗೆ ಕಳ್ಳರಂತೆ ಗೋಚರಿಸತೊಡಗಿದರು. ಇವರು ಏನು ಮಾಡಬೇಕೆಂದು ಯೋಚಿಸುವ ಮುಂಚೆಯೇ ದರೆಗಟ್ಟಿಯವರು ಈ ಯುವಕರಿಗೆ ದೇವರ ಅನ್ನಪ್ರಸಾದ ಹಾಕಿ ಕಳುಹಿಸಿಕೊಟ್ಟರು.

* * *

ದರೆಗಟ್ಟಿ ಗ್ರಾಮ ಈಗ ಕಳುವಾಗಿರುವ ಹನುಮಂತನ ಗುಡಿಯ ಸುತ್ತ ಹತ್ತಾರು ತಲೆಮಾರುಗಳ ಹಿಂದೆ ಸಂಪದ್ಭರಿತತೆಯಿಂದ ನೆಲೆಸಿತ್ತು. ಇಲ್ಲಿನ ಮೊಳಕಾಲೆತ್ತರದ ಗೋಡೆಗಳು, ಮಡಿಕೆ ಕುಡಿಕೆಯ ಚೂರುಗಳು ನಿಧಿ ಶೋಧಕ್ಕಾಗಿ ಅಗೆಸಿಕೊಂಡಿರುವ ತಗ್ಗುಗಳು ಇದಕ್ಕೆ ಪುರಾವೆ ಒದಗಿಸುತ್ತವೆ. ದರೆಗಟ್ಟಿಯಿಂದ ಕೂಗಳತೆಯಲ್ಲಿ ವಜ್ರಗಟ್ಟಿ ಗ್ರಾಮವಿದ್ದು, ಇಲ್ಲಿಯ ಜನರು ಕೂಡ ದರೆಗಟ್ಟಿಯ ಹನುಮಪ್ಪನಿಗೆ ಅನಾದಿಕಾಲದಿಂದಲೂ ನಡೆದುಕೊಳ್ಳುತ್ತಿದ್ದರು. ಕಾಲಾನಂತರದಲ್ಲಿ ಯಾವುದೋ ಹೆಮ್ಮಾರಿ ರೋಗ ಊರೊಳಗೆ ಹೊಕ್ಕು ಒಂದೊಂದೆ ಕುಟುಂಬಗಳನ್ನು ಬಲಿ ತೆಗೆದುಕೊಳ್ಳತೊಡಗಿತಂತೆ. ಇದ್ದು ಬಿದ್ದವರು ಈ ಊರು ಬಿಟ್ಟು ಈಗ ಊರಿಂದ ಮೂರು ಕಿ.ಮೀ. ದೂರದಲ್ಲಿರುವ ಪ್ರದೇಶಕ್ಕೆ ಹೋಗಿ ನೆಲೆಗೊಂಡರಂತೆ. ಇಂದು ಅದೇ ಜಾಗ ದರೆಗಟ್ಟಿ ಗ್ರಾಮವೆನಿಸಿಕೊಂಡಿದೆ. ಗುಡಿಯ ಸುತ್ತಲಿನ ಎಲ್ಲ ಮನೆಗಳು ಮಣ್ಣಿನಲ್ಲಿ ಮಣ್ಣಾಗಿದ್ದರೂ ಹನುಮಪ್ಪನ ಗುಡಿ ಮಾತ್ರ ಮುಕ್ಕಾಗದೆ ಹಾಗೇ ಉಳಿದಿದ್ದು, ಎರಡೂ ಊರಿನ ಭಕ್ತರು ಮೊದಲಿನಂತೆಯೇ ಈಗಲೂ ಕೂಡ ತುಂಬ ಶ್ರದ್ಧೆಯಿಂದ ನಡೆದುಕೊಳ್ಳುತ್ತಾರೆ.

ಪೂಜಾರಿ ಪ್ರತಿದಿನ ಸೂರ್ಯೋದಯಕ್ಕೂ ಮುಂಚೆ ಗುಡಿಗೆ ಹೋಗಿ ಕಸ ಗುಡಿಸಿ ಎಣ್ಣೆ ಬತ್ತಿ ಹಚ್ಚಿ ಎರಡೂ ಊರಿನ ಭಕ್ತರಿಂದ ನೈವೇದ್ಯ ಸ್ವೀಕರಿಸಿ ಸಂಜೆ ಮನೆಗೆ ತೆರಳುವುದು ರೂಢಿಸಿಕೊಂಡು ಬಂದ ಪದ್ಧತಿ. ಆದರೆ ಹತ್ತಾರು ವರ್ಷಗಳ ಹಿಂದೆ ಪೂಜಾರಿಕೆ ಅಣ್ಣ ತಮ್ಮಂದಿರ ನಡುವೆ ಹಂಚಿಕೆಯಾಗಿದ್ದು, ಒಂದು ವರ್ಷ ಒಬ್ಬರು, ಮತ್ತೊಂದು ವರ್ಷ ಮತ್ತೊಬ್ಬರು ಹೀಗೆ ಪಾಳೆ ಪ್ರಕಾರ ಪೂಜಾರಿಕೆ ಮಾಡಿಕೊಂಡು ಬರುತ್ತಿದ್ದರು. ಅಣ್ಣನಾದವನಿಗೆ ವಯಸ್ಸಾದುದರಿಂದ ಗುಡಿಗೆ ಹತ್ತಿರವಿರುವ ವಜ್ರಗಟ್ಟಿಯಲ್ಲಿಯೇ ಜನತಾ ಮನೆ ಮಾಡಿಕೊಂಡು ಕುಟುಂಬದೊಂದಿಗೆ ವಾಸಿಸತೊಡಗಿದನು. ಇದರಿಂದ ಗುಡಿಗೆ ಬೆಳಿಗ್ಗೆ ಹೋಗಿ ದೇವರ ಪೂಜೆ ಮಾಡಲು ಅವನಿಗೆ ಅನುಕೂಲವಾಗಿತ್ತು. ಹೀಗಾಗಿ ಸಹಜವಾಗಿಯೇ ಎರಡೂ ಊರಿನವರು ಅವನ ಮೇಲೆ ವಿಶೇಷವಾದ ಆದರವನ್ನಿಟ್ಟುಕೊಂಡಿದ್ದರು. ತಮ್ಮ ಮನೆಯಲ್ಲಿನ ವಿಶೇಷ ಪೂಜೆಗಳಿಗೆ ಇನ್ನಾವುದೆ ಧಾರ್ಮಿಕ ಕಾರ್ಯಗಳಿಗೆ ಈ ಹಿರಿ ಪೂಜಾರಿಗೆ ಹೆಚ್ಚಿನ ಆಹ್ವಾನಗಳಿರುತ್ತಿದ್ದವು. ಇದರಿಂದ ಹೆಚ್ಚು ಮತ್ಸರಕ್ಕೀಡಾದವಳು ಕಿರಿ ಪೂಜಾರಿಯ ಹೆಂಡತಿ ಸುಬ್ಬಮ್ಮ. ಅವಳು ಪ್ರತಿದಿನ ತನ್ನ ಗಂಡನ ಮುಂದೆ ಹೊಟ್ಟೆಯೊಳಗಿನ ವಿಷವನ್ನು ಕಕ್ಕುತ್ತಿದ್ದಳು. ಕ್ರಮೇಣ ಈ ವಿಷ ಕಿರಿಯ ಪೂಜಾರಿಯ ಮೈಯೆಲ್ಲಾ ಅಡರಿ, ಆತ ಇದಕ್ಕೊಂದು ಪರಿಹಾರಕ್ಕಾಗಿ ಚಿಂತಿಸತೊಡಗಿದನು.

ಒಂದು ದಿನ ಬೆಳಿಗ್ಗೆ ಇದ್ದಕಿದ್ದಂತೆ, ''ಹನುಮಂತ ನನ್ನ ಕನಸನ್ಯಾಗ ಬರಾಕ ಹತ್ಯಾನ, ನಿಮ್ಮೂರಿನ ಭಕ್ತರು ನನ್ನ ಗುಡಿಮಟ ಬರಾಕ ದೂರ ಆಗಿ ತ್ರಾಸ ಆಗೈತಿ. ಅದಕ್ಕ ಈಗಿನ ಹೊಸ ಊರಾಗ ನನಗೊಂದು ಗುಡಿ ಕಟ್ಟಿಸಬೇಕು, ಬರುವ ಉಗಾದಿಯಂದು ನನ್ನ ಪ್ರತಿಷ್ಠಾಪನಾ ಆಗಬೇಕು ಎಂದು ಅಪ್ಪಣಿ ಕೊಟ್ಟಾನ,'' ಎಂದು ಕಂಡ ಕಂಡವರಿಗೆಲ್ಲಾ ಪೂಜಾರಿ ಹೇಳಹತ್ತಿದನು. ಮೊದಮೊದಲು ಜನ ಕಿವಿಗೊಡದಿದ್ದರೂ ಪೂಜಾರಿಯ ಬಣ್ಣದ ಮಾತುಗಳಿಗೆ ಮರುಳಾಗಿ ಈ ವಿಷಯವನ್ನು ಗಂಭೀರವಾಗಿ ತೆಗೆದುಕೊಂಡರು. ಊರಲ್ಲಿ ಬಿಸಿ ಬಿಸಿ ಚರ್ಚೆಗಳಾಗತೊಡಗಿದವು. ಉದ್ಯೋಗವಿಲ್ಲದ ಬಡಿಗ್ಯಾ ಅದೇನೋ ಕೆತ್ತಿಕೊಂಡ ಎನ್ನುವಂತೆ ರಾಜಕೀಯ ಮರಿ ಪುಡಾರಿ ಹಾಗೂ ಯುವಕ ಸಂಘದ ಅಧ್ಯಕ್ಷ ಬಸಣ್ಣ ಈ ವಿಷಯವನ್ನು ಪ್ರತಿಷ್ಠೆಯ ವಿಷಯವಾಗಿ ತೆಗೆದುಕೊಂಡನು. ''ನಮ್ಮೂರ ದೇವರು ನಮ್ಮೂರಾಗಿದ್ರ ಚೆಂದ, ಅದಕ್ಕ ಊರವ್ರೆಲ್ಲಾ ಸಹಕಾರ ಕೊಡಬೇಕು,'' ಎಂದು ಬಣ್ಣದ ಮಾತುಗಳಿಂದ ತನ್ನೊಳಗಿನ ಕಿಡಿಯನ್ನು ಎಲ್ಲೆಡೆ ಹರಡತೊಡಗಿ ಹನುಮಂತನನ್ನು ಮೂಲ ಗುಡಿಯಿಂದ ಎತ್ತಂಗಡಿ ಮಾಡಿಕೊಂಡು ಬರುವುದಕ್ಕಾಗಿ ಚಂದಾ ಎತ್ತತೊಡಗಿದನು.

ಉಗಾದಿಯ ಹಿಂದಿನ ದಿನ ಹನುಮಂತನನ್ನು ಗುಡಿಯಿಂದ ಕಿಡ್ನ್ಯಾಪ್ ಮಾಡಿಕೊಂಡು ಬರುವದೆಂದು ಠರಾವುಗಳಾದವು. ಅವತ್ತ ದರೆಗಟ್ಟಿಯ ಜನ ಬೈಕ್, ಟ್ರ್ಯಾಕ್ಟರ್‌ಗಳ ಬೆನ್ನೇರಿ ಹನುಮಂತನ ಗುಡಿಗೆ ದಾಳಿಯಿಟ್ಟರು. ನಿರ್ದಾಕ್ಷಿಣ್ಯವಾಗಿ ಮೂರ್ತಿಯನ್ನು ಕಿತ್ತುಕೊಂಡು ದರೆಗಟ್ಟಿಗೆ ತಂದು ಬೆಳಗಿನ ಮೆರವಣಿಗೆಗೆ ತಯಾರು ಮಾಡಿಕೊಳ್ಳತೊಡಗಿದರು.

* * *

ವಜ್ರಗಟ್ಟಿಯ ಜನ ಚೇರಮನ್ನರ ನೇತೃತ್ವದಲ್ಲಿ ಎಮ್ಮೆಲ್ಲೆ ಬಳಿ ಧಾವಿಸಿದರು. ಎಮ್ಮೆಲ್ಲೆಗೆ ಎರಡೂ ಊರಿನ ಮತಗಳು ಬೇಕಾಗುವುದರಿಂದ ತುಂಬ ಇಕ್ಕಟ್ಟಿನಲ್ಲಿ ಸಿಲುಕಿಕೊಂಡರು. ಆದರೂ ಇದರಲ್ಲಿ ದರೆಗಟ್ಟಿಯ ಜನರಿಂದಲೇ ತಪ್ಪು ಘಟಿಸಿರುವುದು ಎಂದು ಅವರು ನಿರ್ಣಯಿಸಿದರು. ಆ ಕೂಡಲೆ ಮೊಬೈಲಿನಿಂದ ದರೆಗಟ್ಟಿಯ ತಮ್ಮ ಚೇಲಾ ಒಬ್ಬನಿಗೆ ರಿಂಗುಣಿಸಿದರು. ''ಗುಡಿಯಿಂದ ದೇವರನ್ನು ಹೊತ್ತೊಯ್ಯುವುದು ಕಾಯ್ದೆ ಪ್ರಕಾರ ತಪ್ಪಾಗೈತಿ. ಇದರಿಂದ

ಜನರ ಧಾರ್ಮಿಕ ಆಚರಣೆಗಳಿಗೆ, ಭಾವನೆಗಳಿಗೆ ಧಕ್ಕೆ ಆಗೇತಿ ಎಂದು ನಿಮ್ಮ ಊರಿನವರ ಮ್ಯಾಲ ದೊಡ್ಡ ಕೇಸು ಹಾಕಬಹುದು. ಅನುರೇಣು ತೃಣಕಾಷ್ಠಗಳಲ್ಲಿ ದೇವರಿದ್ದಾನ ಎಂದು ಎಲ್ಲ ದಾರ್ಶನಿಕರು ಹೇಳ್ತಾರ, ಅದಕ್ಕ ಆ ಮೂರ್ತಿನ ವಜ್ರಗಟ್ಟಿಯವರಿಗೆ ಕೊಟ್ಟುಬಿಡ್ರಿ. ನಾನು ಬೇಕಾದರೆ ನಿಮಗ ಗುಡಿ ಕಟ್ಟಿಸುವಂತಹ ದೇವರ ಕೆಲಸಕ್ಕೆ ೫ ಲಕ್ಷ ರೂಪಾಯಿ ಕೊಡ್ತೀನಿ. ಸಂಗಮರಿ ಕಲ್ಲಿನ ಮೂರ್ತಿ ಕೊಡಸಿರಿ'' ಎಂದು ಆಶ್ವಾಸನೆ ನೀಡಿದರು.

ಚೇಲಾ ಊರಿನ ಪ್ರಮುಖರನ್ನು ತನ್ನ ಮನೆಯ ಪಡಸಾಲಿಗೆ ಕರೆಸಿದ. ಎಮ್ಮೆಲ್ಲೆ ಫೋನು ಮಾಡಿರುವುದನ್ನು ಸಂಕ್ಷಿಪ್ತವಾಗಿ ತಿಳಿಸಿ ೫ ಲಕ್ಷ ಸಿಗುವ ವಿಷಯವನ್ನು ಒತ್ತಿ ಒತ್ತಿ ಹೇಳತೊಡಗಿದ. ಗುಡಿ ಕಟ್ಟುವ ನೆಪದಲ್ಲಿ ಈ ಐದು ಲಕ್ಷ ರೂಪಾಯಿಯಲ್ಲಿ ತಮಗೆ ಹಿರಿತನ ಸಿಗುತ್ತದೆ ಎಂದು ಲೆಕ್ಕ ಹಾಕಿದ ಹಿರಿಯರು, ಬಾಯಲ್ಲಿ ನೀರು ತಂದುಕೊಂಡು ಅದಕ್ಕೆ ಒಪ್ಪಿಗೆ ನೀಡಿದರು.

* * *

ಮರುದಿನ ಬೆಳಿಗ್ಗೆ ಬಾಜಾ ಬಜಂತ್ರಿಯವರೊಂದಿಗೆ ಹುಂಬ ಉತ್ಸಾಹದಿಂದ ವಜ್ರಗಟ್ಟಿಯವರು ಮರೆಗಟ್ಟಿಗೆ ಬಂದರು. ಮರೆಗಟ್ಟಿಯ ಅಗಸಿಯಲ್ಲಿ ಸೊಟ್ಟ ಮುಖ ಮಾಡಿಕೊಂಡು ಕುಂತಿದ್ದ ಹನುಮಂತನನ್ನು ಅನಾಮತ್ತಾಗಿ ಎತ್ತಿಕೊಂಡು ಟ್ರ್ಯಾಕ್ಟರಿನಲ್ಲಿ ಕುಳ್ಳಿರಿಸಿಕೊಂಡು ಮತ್ತೆ ಮೆರವಣಿಗೆ ಸುರು ಹಚ್ಚಿಕೊಂಡರು. ನೇರವಾಗಿ ತಮ್ಮೂರಿಗೆ ಹೋಗದೆ ಇದು ತಮ್ಮ ಜಯೋತ್ಸವವೆಂದು ಬಿಂಬಿಸುವುದಕ್ಕೋಸ್ಕರ ಮರೆಗಟ್ಟಿಯ ತುಂಬ ಹನುಮಂತನನ್ನು ಹೊತ್ತುಕೊಂಡು ಅಲೆದಾಡಹತ್ತಿದರು. ಇದರಿಂದ ಮರೆಗಟ್ಟಿಯ ಬಸಣ್ಣ ಮತ್ತು ಅವನ ಸಂಘದ ಹುಡುಗರಿಗೆ ಚಡ್ಡಿಯಲ್ಲಿ ಇರುವೆ ಬಿಟ್ಟಂತಾಗಿ ಯುವಕ ಮಂಡಳದಲ್ಲಿ ಸಭೆ ಸೇರಿದರು. ಮೈಕ್ ಹಿಡಿದುಕೊಂಡು, ''ನಮ್ಮೂರಿನ ಹಿರಿಯರು ಐದು ಲಕ್ಷ ರೂಪಾಯಿ ಎಂಜಲಕ ಆಸೆ ಮಾಡಿ ಇನ್ನೊಂದು ಊರಿಗೆ ನಮ್ಮ ಗ್ರಾಮ ದೇವರು ಹನುಮಂತನನ್ನು ಮಾರುತ್ತಿದ್ದು, ಷಂಡರಂತೆ ವರ್ತಿಸುತ್ತಿದ್ದಾರೆ. ಇದಕ್ಕೆ ನಾವು, ಬಿಸಿ ರಕ್ತದ ಹುಡುಗರು, ಅವಕಾಶ ಕೊಡೋದು ಬ್ಯಾಡ'' ಎಂದು ತನ್ನ ಬಿಸಿಯನ್ನು ಇನ್ನಿತರ ಯುವಕರಿಗೆ ಹರಡತೊಡಗಿದನು. ಆದರೂ ಕೂಡ ಹಿರಿಯರು ಅತ್ತಕಡೆ ಹಾಯದೆ ಅವನ ಭಾಷಣಕ್ಕೆ ಕ್ಯಾರೆ ಅನ್ನಲಿಲ್ಲ. ಇದರಿಂದ ಮತ್ತಷ್ಟು ಅವಮಾನಿತನಾದ ಬಸಣ್ಣ ತನ್ನ ಹುಡುಗರನ್ನು ಕರೆದುಕೊಂಡು ಮೆರವಣಿಗೆ ಬರುವ ದಾರಿಯಲ್ಲಿ ಅಡ್ಡಗಟ್ಟಿ ಧರಣಿ ಕುಳಿತುಬಿಟ್ಟನು. ಮೆರವಣಿಗೆ ಅಲ್ಲಿಯೇ ನಿಂತಿತು. ಎರಡೂ ಕಡೆಯ ಊರ ಹಿರಿಯರು ಬಸಣ್ಣನ ಮನ ಒಲಿಸಲು ಪ್ರಯತ್ನಿಸಿದರಾದರೂ ಫಲ ಸಿಗಲಿಲ್ಲ.

ಹೊತ್ತು ನೆತ್ತಿಮ್ಯಾಲ ಬಂದು ಚರ್ಮದೊಳಗಡೆಯಿಂದ ಬೆವರು ತೊಟ್ಟಿಕ್ಕತೊಡಗಿತು. ಇದರಿಂದ ತಾಳ್ಮೆ ಕಳೆದುಕೊಂಡ ವಜ್ರಗಟ್ಟಿಯವರು ಜಗಳಕ್ಕೆ ನಿಂತರು. ಬಾಯಿ ಬಾಯಿ ಹತ್ತಿ, ಕೈ ಕೈ ಮಿಲಾಯಿಸತೊಡಗಿ, ಕೈಯಲ್ಲಿ ಕಲ್ಲುಗಳು ಬಂದು ಒಂದೆರಡು ತಲೆಗಳು ಕೂಡ ಒಡೆದು, ಬೆವರಿನೊಂದಿಗೆ ರಕ್ತವು ಬಸಿಯತೊಡಗಿತು. ಬಸಣ್ಣ ಮತ್ತು ಅವನ ಹುಡುಗರ ಕೈ ಮೇಲಾಗಿ ಮೈಯೆಲ್ಲಾ ಜಜ್ಜಿಸಿಕೊಂಡ ವಜ್ರಗಟ್ಟಿಯವರು ಹನುಮಂತ ದೇವರನ್ನು ಅಲ್ಲಿಯೇ ಬಿಟ್ಟು ಊರ ದಾರಿಯನ್ನು ಹಿಡಿದರು. ಅವರ ಗುಂಪಿನಲ್ಲಿದ್ದ ಹುಚ್ಚಮಲ್ಲ ತನ್ನೊಳಗೆ ಮುಸಿ ಮುಸಿ ನಗುತ್ತಿದ್ದ. ಹನುಮಪ್ಪ ಕೂಡ!

* * *

ವಜ್ರಗಟ್ಟಿ ಎಂಬ ಊರು ಅವಮಾನದ ಕುದಿ ತಾಳಲಾರದೆ ಪೂರ್ತಿಯಾಗಿ ಬಿಸಿಯಾಗತೊಡಗಿತು. ''ಹನುಮಪ್ಪ ನಮ್ಮ ಆಜನ್ಮ ಸಿದ್ಧ ಆಸ್ತಿ'' ಎನ್ನುವಂತೆ ಜನ ವರ್ತಿಸತೊಡಗಿದರು. ತಮ್ಮ ಮೊಬೈಲ್ ಟ್ರಿನ್ ಟ್ರಿನ್ ಎನಿಸಿದ ಧೀರಮನ್ನರು ಎಮ್ಮೆಲ್ಲೆ ಮುಂದೆ ತಮ್ಮ ಗೋಳನ್ನು ತೋಡಿಕೊಂಡರು. ಇದು ದೇವರ ವಿಷಯವಾಗಿರೋದ್ರಿಂದ ಎಮ್ಮೆಲ್ಲೆಗೂ ಒಂದು ಕ್ಷಣ ಏನು ಹೇಳಬೇಕೆಂದು ತೋಚದಾಯಿತು. ಮರುಕ್ಷಣ ಸುಧಾರಿಸಿಕೊಂಡು, ''ಪುರಾತನವಾದ ದೇವರ ಮೂರ್ತಿ ಮತ್ತು ದೇವಸ್ಥಾನದ ಪ್ರಾಚ್ಯವಸ್ತುಗಳು ಕಳ್ಳತನ ಆಗ್ಯಾವ ಎಂದು ಪೊಲೀಸ್ ಕಂಪ್ಲೇಂಟ್ ಕೊಡ್ರಿ, ಸರಳ... ದಾರಿಗೆ ಬರ್ತಾರ'' ಎಂದು ಅಸಹನೆಯಿಂದ ಅವಡುಗಚ್ಚಿ ಮೊಬೈಲ್ ಮಡಚಿಟ್ಟುಕೊಂಡರು.

ಒಂದು ಸುಡು ಮಧ್ಯಾಹ್ನ ಬರ್‍ರ್‍ರ... ಎಂದು ದೂಳೆಬ್ಬಿಸಿಕೊಂಡು ಒಂದರ ಹಿಂದೊಂದು ಮೂರು ಪೊಲೀಸ್ ಜೀಪುಗಳು ದರೆಗಟ್ಟಿಯತ್ತ ಧಾವಿಸಿದವು. ಜೀಪಿನಿಂದ ದಬದಬನೆ ಕೆಳಗಿಳಿದ ಪೊಲೀಸರು ಕಂಡಕಂಡವರಿಗೆ ಲಾಠಿ ರುಚಿ ತೋರಿಸತೊಡಗಿದರು. ಜನರು ಕಂಗಾಲಾಗಿ ತಮ್ಮ ಮನೆಯೊಳಗೆ ಹೊಕ್ಕೊಂಡು ಒಳಚಿಲಕ ಹಾಕ್ಕೊಂಡರು. ಕ್ಷಣಮಾತ್ರದಲ್ಲಿ ರಸ್ತೆಗಳು ಖಾಲಿಯಾಗಿ ಬಿಕೋ ಎನ್ನತೊಡಗಿದವು. ನಂತರ ಪೊಲೀಸರು ಊರ ಅಗಸಿ ಬಾಗಿಲಿನತ್ತ ಧಾವಿಸಿ ಸೊಟ್ಟ ಮೋರೆಯ ಹನುಮಪ್ಪನನ್ನು ಇಷ್ಟಕ್ಕೆಲ್ಲಾ ಅವನೇ ಕಾರಣ ಎನ್ನುವಂತೆ ಸಿಟ್ಟಿನಿಂದ ಎತ್ತಿಕೊಂಡು ಜೀಪಿನ ಮೇಲೆ ಹೇರಿಕೊಂಡರು. ಬಂದಷ್ಟೆ ವೇಗವಾಗಿ ಜೀಪುಗಳು ಮಾಯವಾದವು.

ಮರುದಿನ ಎಲ್ಲ ಪತ್ರಿಕೆಗಳು 'ಪೊಲೀಸ್ ಕಸ್ಟಡಿಯಲ್ಲಿ ಹನುಮಪ್ಪ ದೇವರು' ಎಂಬ ಶೀರ್ಷಿಕೆಯೊಂದಿಗೆ ಆಕರ್ಷಕವಾಗಿ ಸುದ್ದಿ ಪ್ರಕಟಿಸಿದವು. ಹನುಮಪ್ಪ ಎಲ್ಲ ಟಿವಿ ಚಾನಲ್‌ಗಳಲ್ಲಿ ತನ್ನ ಸೊಟ್ಟ ಮೂತಿಯನ್ನು ತೋರಿಸಿದ್ದೆ ತೋರಿಸಿದ್ದು. ದೇವರು ಏನು ತಪ್ಪು ಮಾಡಿರಬಹುದು ಎಂದು ಜನರೂ ಗಾಬರಿಯಿಂದ ಸ್ಟೇಷನ್ನಿನ ಕಡೆ ಬರತೊಡಗಿದರು. ಸರಿಯಾಗಿ ಒಂಬತ್ತು ಗಂಟೆಗೆ ಎರಡು

## ಹಕ್ಕಿಗಳ ಹಾ(ಪಾ)ಡು

ನಮ್ಮ ಮಾತಲ್ಲದ ಹಾಡು
ಜುಂಯ್‌ಗುಟ್ಟುತ್ತವೆ ಬರೀ...
ತುಕ್ಕು ಹಿಡಿದ ತಂತಿಯ
ಕ್ಷೀಣ ಸ್ವರಗಳು...!!

ನಮ್ಮ ಹಾಡಲ್ಲದ ಮಾತು
ಪಿಸುಗುಟ್ಟುತ್ತವೆ ಬರೀ...
ನಿದ್ದೆಯಲ್ಲದ ನಿದ್ದೆಯಲ್ಲಿ
ಕಂಡ ಕನಸಿನ
ಕನವರಿಕೆಗಳು...!!

ಹಾಲ್ಗಾಳಿಗಾಗಿ ಹಾತೊರೆವ
ಮಕ್ಕಳಾಸೆಯ ಪುಳಕ.
ಇಟ್ಟ ತತ್ತಿಗಳೋ...
ಕಾವು ಕೊಡದೆಯೇ
ಬೆಂದು ಗಟ್ಟಿಯಾಗುತ್ತಿವೆ
ಇನ್ನೆಲ್ಲಿ ಮರಿಗಳು ???

ಬಯಕೆಯ ತೆಕ್ಕೆಗೆ ಸಿಗದ
ಹಂಬಲದ ಗೊಂದಲಗಳು
ವಲಸೆಗೇನಿದೆ ಅರ್ಥ
ಎಲ್ಲಿದೆ ಆಕಾಶ !!

ಕಾಳಿಲ್ಲದ ತೆನೆ...
ಹಸಿರಿಲ್ಲದ ಹೊಲ...
ಮುಗಿಲಿಲ್ಲದ ಬಾನು...!!

ಹಲ್ಲಿಲ್ಲದ ಅಜ್ಜಿಯ
ಬೊಚ್ಚ ಬಾಯಿ ತುಂಬ
ನಮ್ಮವೇ ಕಥೆಗಳಲ್ಲವೇ ಆಗ ??

ಈಗಾರು ಹೇಳುತ್ತಾರೆ
ಅಜ್ಜಿಯಂದಿರೆಲ್ಲ...
ವೃದ್ಧಾಶ್ರಮಗಳಲ್ಲಿ
ಧ್ಯಾನ ಯೋಗಗಳ
ಕಲಿಯುತ್ತಿದ್ದಾರೆ!



**ಮಾರುತಿ ದಾಸಣ್ಣವರ**
ಕನ್ನಡ ಅಧ್ಯಾಪಕ, ಜವಾಹರ ನವೋದಯ ವಿದ್ಯಾಲಯ, ಗಾಳಿಬೀಡು
ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ - ೫೭೧೨೦೧

# ಅಭಿನಂದನೆಗಳು



ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್

ನವಕರ್ನಾಟಕ ಪ್ರಕಾಶನದ ಹಿರಿಯ ಸಂಪಾದಕರಾದ ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್ ಮತ್ತು 'ಹೊಸತು' ಸಂಪಾದಕರಾದ ಡಾ|| ಜಿ. ರಾಮಕೃಷ್ಣ ಇವರಿಗೆ ಒಟ್ಟಾರೆ ಸಾಧನೆಯನ್ನು ಗುರುತಿಸಿ ಕುವೆಂಪು ಭಾಷಾ ಭಾರತಿ ಪ್ರಾಧಿಕಾರ ೨೦೦೯ ಮತ್ತು ೨೦೧೦ನೇ ಸಾಲಿನ ಅನುವಾದ ಪ್ರಶಸ್ತಿ ನೀಡಿದೆ.

ಇದೇ ಸಂದರ್ಭದಲ್ಲಿ ನವಕರ್ನಾಟಕ ಪ್ರಕಟಿಸಿರುವ 'ಅಂತಿಮ ಜ್ವಾಲೆ' (ಹಿಂದಿ ಅನುವಾದ) ಅನುವಾದಕಿ ಡಾ|| ಜೆ. ಎಸ್. ಕುಸುಮ ಗೀತ ಅವರಿಗೆ ಮತ್ತು 'ಭಂಡಾರ ಭೋಗ' (ಮರಾಠಿ ಅನುವಾದ) ಕೃತಿಯ ಅನುವಾದಕ ಪ್ರೊ|| ಚಂದ್ರಕಾಂತ ಪೋಕಳೆ ಅವರಿಗೆ ಪ್ರಶಸ್ತಿ ನೀಡಿದೆ.

ಇವರೆಲ್ಲರಿಗೂ ನಮ್ಮ ಅಭಿನಂದನೆಗಳು ಸಲ್ಲುತ್ತವೆ.



ಡಾ|| ಜಿ. ರಾಮಕೃಷ್ಣ

ಹಳ್ಳಿಯ ಜನರು ಟ್ರ್ಯಾಕ್ಟರ್, ಬೈಕು, ಟಂಟಂ ಗಾಡಿ ಮುಂತಾದವುಗಳಲ್ಲಿ ಪೊಲೀಸ್ ಸ್ಟೇಷನ್ ಮುಂದೆ ಬಂದಿಳಿಯತೊಡಗಿದರು. ಭಜನಾ ಮಂಡಳಿಯವರು ಭಜನಾ ಪದ ಸುರು ಹಚಗೊಂಡರು. ಡೊಳ್ಳು ಹಲಗೆಗಳ ಬಡಿತ ಸ್ಟೇಷನ್ನಿನ ಅಂಗಳ ದಾಟಿಕೊಂಡು ನಗರವನ್ನೆಲ್ಲಾ ಆವರಿಸತೊಡಗಿ ನಗರದ ನಾಗರಿಕರೆನಿಸಿಕೊಂಡವರು ಪೊಲೀಸ್ ಸ್ಟೇಷನ್ ಕಡೆ ಮುಖ ಮಾಡಿದರು. ಪೇದೆಗಳು ಏನು ಮಾಡಬೇಕೆಂದು ಯೋಚಿಸಿ ಯೋಚಿಸಿ ಕೊನೆಗೆ ''ನೀನೆ ದಾರಿ ತೋರಿಸಪ್ಪ,'' ಎಂದು ಹನುಮಪ್ಪನಿಗೆ ಕೈ ಮುಗಿದು ನಿಂತರು.

ಅಷ್ಟರಲ್ಲಿ ಎರಡೂ ಊರಿನ ಪೂಜಾರಿಗಳ ನಡುವೆ ಪೂಜೆಗಾಗಿ ನಾ ಮೊದಲು, ತಾ ಮೊದಲು ಎಂದು ಜಗಳ ಪ್ರಾರಂಭವಾಯಿತು. ಆಯಾ ಊರವರು ತಮ್ಮ ತಮ್ಮ ಊರಿನ ಪೂಜಾರಿಗಳ ಬೆಂಬಲಕ್ಕೆ ನಿಂತಿದ್ದರಿಂದ ಉರಿಯುವ ಬೆಂಕಿಗೆ ತುಪ್ಪ ಹಾಕಿದಂತಾಯಿತು. ಪೊಲೀಸ್ ಅಧಿಕಾರಗಳ ಎಚ್ಚರಿಕೆಯನ್ನು ಕಡೆಗಣಿಸಿ ಜಗಳ ಮುಂದುವರಿದಿದ್ದರಿಂದ ಸಿಟ್ಟಿಗೆದ್ದ ಪೊಲೀಸರು ಲಾಠಿ ಬಿಸಿ ತೋರಿಸಿ ಜನರನ್ನು ಕಾಂಪೌಂಡಿನಿಂದ ಚದುರಿಸಿದರು.

ಹೊರಬಂದ ಎರಡೂ ಊರಿನ ಜನ ಎರಡು ಕಡೆ ಬೇರೆ ಬೇರೆಯಾಗಿ ಸ್ಟೇಷನ್ ಮುಂದೆ ಕುಳಿತು ಪ್ರತಿಭಟನೆ ಮಾಡತೊಡಗಿದರು. ಪೊಲೀಸರು ಲಾಠಿ ರುಚಿ ತೋರಿಸಿ ಅಮಾಯಕ ಜನರ ಧಾರ್ಮಿಕ ಭಾವನೆಗಳಿಗೆ ಧಕ್ಕೆ ತರಾಕ ಹತ್ಯಾರ. ನಮ್ಮ ಗ್ರಾಮ ದೇವರನ್ನು ಪೂಜೆ ಮಾಡುವುದಕ್ಕೆ ನಾವು ಪೊಲೀಸರ ಅನುಮತಿ ಕೇಳಬೇಕಾಗಿ ಬಂದಿರುವುದು ವಿಪರ್ಯಾಸ ಎಂದು ಬಸಣ್ಣನಂಥವರು ಎದ್ದು ನಿಂತು ತಮ್ಮ ನಾಲಿಗೆ ಚಟ ತೀರಿಸಿಕೊಳ್ಳತೊಡಗಿದರು. ಸೂರ್ಯ ನೆತ್ತಿ ಮೇಲೆ ಬಂದಂತೆಲ್ಲಾ ವಾತಾವರಣ ಬಿಸಿ ಏರುತ್ತಿರುವುದನ್ನು ಕಂಡ ಪೊಲೀಸ್ ಅಧಿಕಾರಿಗಳು ಮೊದಲು ಬಂದ ಊರಿನವರಿಗೆ ಆದ್ಯತೆ ನೀಡಿ ಪಾಳಿ ಪ್ರಕಾರ ಪೂಜೆ ಮಾಡಲು ಅನುಮತಿ ನೀಡಿದರು.

* * *

ಪ್ರತಿ ಶನಿವಾರ ಸ್ಟೇಷನ್ನಿನಲ್ಲಿ ಹೀಗೆ ಪೂಜೆ ಮುಂದುವರಿಯಿತು. ವಾರದ ನಡುವಿನ ದಿನಗಳಲ್ಲಿ ತಮ್ಮ ವೈಯಕ್ತಿಕ ಕೆಲಸಗಳಿಗೆ ನಗರಕ್ಕೆ ಬರುತ್ತಿದ್ದ ಗ್ರಾಮಸ್ಥರು, ಸ್ಟೇಷನ್ನಿಗೆ ಬಂದು ಹನುಮಂತನ ದರ್ಶನ ಪಡೆಯುವುದನ್ನು ರೂಢಿಸಿಕೊಂಡರು.

ಸ್ಟೇಷನ್‌ಅನ್ನು ಐದು ಸುತ್ತು ಪ್ರದಕ್ಷಿಣೆ ಹಾಕಿ, ಮೂರ್ತಿ ಇಟ್ಟ ಕಟಂಜರಿ ಮುಂದೆ ಕಾಯಿ ಒಡೆಯುತ್ತಿದ್ದರು. ''ನಮ್ಮಂತಹ ನರಮನುಷ್ಯರು ಮಾಡಿದ ಪಾಪಗಳಿಂದ ದೇವರೇ ನೀನು ಈ ದುಷ್ಟ ಪೊಲೀಸರ ಕೈಗೆ ಸಿಗುವಂತಾಯಿತು. ನೀಯೇನ್ ಹೆದ್ರಕೋಬ್ಯಾಡ. ನಾವೇನಾದರೂ ಉಪಾಯ ಮಾಡಿ ನಿನ್ನನ್ನು ಈ ನರಕದಿಂದ ಪಾರು ಮಾಡ್ತೀವಿ'' ಎಂದು ಕೆಲವು ಮುಗ್ಧ ಜನರು ದೇವರಿಗೆ ಧೈರ್ಯ ತುಂಬಿ, ''ಹನುಮಪ್ಪನನ್ನು ಚಂದಂಗ ನೋಡಿಕೊಳ್ರಿ'' ಎಂದು ತಮ್ಮ ಪರಿಚಯದ ಪೇದೆಗಳಿಗೆ ಬುದ್ಧಿವಾದ ಹೇಳಿ ಅಲ್ಲಿಂದ ಭಾರದ ಹೆಜ್ಜೆಗಳನ್ನಿಡುತ್ತಾ ಹೊರಬರುತ್ತಿದ್ದರು.

ಕ್ರಮೇಣ ಸುತ್ತಮುತ್ತಲ ಬಡಾವಣೆಗಳಲ್ಲಿನ ಜನರು ಕೂಡ ಹನುಮಪ್ಪನ ದರ್ಶನಕ್ಕೆ ಬರತೊಡಗಿದರು. ಸ್ಟೇಷನ್ನಿಗೆ ಯಾವುದೇ ಕೆಲಸದ ನಿಮಿತ್ತ ಬರುವ ಸುತ್ತಮುತ್ತಲ ಹಳ್ಳಿಯವರು ಮೊದಲು ಹನುಮಪ್ಪನ ದರ್ಶನ ತೆಗೆದುಕೊಂಡು ಆಮೇಲೆ ಅಧಿಕಾರಿಗಳ ಚೇಂಬರಿಗೆ ಹೋಗುತ್ತಿದ್ದರು. ಕೆಲವು ಪೇದೆಗಳು ಕೂಡ ತಮ್ಮ ಹಿರಿಯ ಅಧಿಕಾರಿಗಳಿಗೆ ಶಲ್ಯೂಟ್ ಹೊಡೆಯುವ ಮೊದಲು ಹನುಮಪ್ಪನಿಗೆ ಕೈ ಮುಗಿಯುವುದನ್ನು ರೂಢಿಸಿಕೊಂಡರು. ಪ್ರತಿದಿನವೂ ಬರುವ ಭಕ್ತರು ತಮ್ಮ ಗಂಟೆ ಜಾಗಟೆಗಳಿಂದ ವಿಶಿಷ್ಟ ರೀತಿಯಲ್ಲಿ ಧ್ವನಿ ಹೊರಡಿಸಿ ತಾಸುಗಟ್ಟಲೆ ಪೂಜೆ ಮಾಡುತ್ತಿದ್ದರು. ಇದರಿಂದ ಅಧಿಕಾರಿಗಳಿಗೆ ಕಿರಿಕಿರಿ ಎನಿಸಿತು. ಇದಕ್ಕಾಗಿ ಒಂದು ಉಪಾಯ ಹುಡುಕಿ ಪೂಜೆಯಲ್ಲಿ ಪರಿಣತಿಯನ್ನು ಹೊಂದಿದ್ದ ಒಬ್ಬ ಪೇದೆಗೆ ಪೂಜಾರಿ ಪಟ್ಟವನ್ನು ಕಟ್ಟಿದರು. ಹೀಗೆ ಪೊಲೀಸ್ ಸ್ಟೇಷನ್ ಎಂಬುದು ದಿನ ಗತಿಸಿದಂತೆ ದೇವಸ್ಥಾನವಾಗಿ ಬದಲಾಗತೊಡಗಿತು.

* * *

ಇತ್ತ ವಜ್ರಗಟ್ಟಿಯವರು ''ಪುರಾತನವಾದ ಮೂರ್ತಿ ಮತ್ತು ಪ್ರಾಚ್ಯವಸ್ತುಗಳು ಕಳುವಾಗಿವೆ'' ಎಂದು ಮರೆಗಟ್ಟಿಯ ೧೧೫ ಜನರ ಮೇಲೆ ಬಲವಾದ ಕೇಸು ಜಡಿದಿದ್ದರು. ಮರೆಗಟ್ಟಿಯವರು ಕೂಡ ''ನಮ್ಮ ಊರಿಗೆ ಬಂದು ನಮ್ಮನ್ನೆ ಹೊಡೆದಿದ್ದಾರೆ'' ಎಂದು ವಜ್ರಗಟ್ಟಿಯವರ ಮೇಲೆ ಮರು ಕೇಸು ದಾಖಲಿಸಿದ್ದರು. ಎರಡು ಊರಿನವರೂ ಜಿಲ್ಲಾ ಕೋರ್ಟಿಗೆ ಅಲೆದಾಡುವುದು ಅನಿವಾರ್ಯವಾಯಿತು. ಇದು ಧಾರ್ಮಿಕ ಆಚರಣೆಗೆ ಸಂಬಂಧಿಸಿದ ವಿಷಯವಾದುದರಿಂದ ವರ್ಷಾನುಗಟ್ಟಲೆ ಕೇಸು ವಿಳಂಬವಾಗ ತೊಡಗಿತು. ಮೊದಲೆಲ್ಲ ಉತ್ಸಾಹದಿಂದ ಕೋರ್ಟಿಗೆ ಹೋಗುತ್ತಿದ್ದ ಜನರು ನಂತರದಲ್ಲಿ ಇದರಿಂದ ಹೇಗೆ ತಪ್ಪಿಸಿಕೊಳ್ಳಬೇಕೆಂದು ಹವಣಿಸತೊಡಗಿದರು. ತಿಂಗಳಿಗೊಮ್ಮೆ ತಮ್ಮ ಹೊಲ ಮನೆಯ ಕೆಲಸಗಳನ್ನು ಬದಿಗಿಟ್ಟು ಕೈಯಿಂದ ಖರ್ಚು ಮಾಡಿಕೊಂಡು ಹೋಗುವುದು ಕೆಲವರಿಗೆ ಬಹಳಷ್ಟು ದುಸ್ತರವಾಗತೊಡಗಿತು.

ಮುಂದ ಹ್ಯಾಂಗ ಮಾಡುವುದು ಎಂದು ಯೋಚಿಸುತ್ತಿದ್ದವರಿಗೆ ಹನುಮಂತನ ದೇವರಿಗಾಗಿ ಬಿಟ್ಟಿದ್ದ ಪೊಗದಸ್ತಾದ ಹೋರಿಗಳು ಪರಿಹಾರವಾಗಿ ಕಂಡವು. ಹೋರಿಗಳನ್ನು ಹರಾಜು ಹಾಕಿ ಬಂದ ಹಣವನ್ನು ಬಸ್ ಚಾರ್ಜಿಗಾಗಿ ಬಳಸತೊಡಗಿದರು. ಆ ಹಣವು ಖಾಲಿಯಾಯಿತು. ಮುಂದೆ ಸ್ವಲ್ಪ ದಿನ ಊರ ಎಲ್ಲ ಮನೆಗಳಿಂದ ಚಂದಾ ಎತ್ತಿ ಕೋರ್ಟಿನ ಖರ್ಚನ್ನು ಸರಿದೂಗಿಸಿಕೊಂಡರು. ಅದು ಸಾಲದಾದಾಗ ತಮ್ಮ ತಮ್ಮ ಹೊಲವನ್ನು ಬಡ್ಡಿಯಲ್ಲಿ ಹಾಕಿದರು. ಬಸಣ್ಣನಂತ ಕೆಲವು ಯುವಕರು ಖರ್ಚಿಗಾಗಿ ಊರು ಬಿಟ್ಟು ಗುಳೆ ಹೋಗುವುದು ಅನಿವಾರ್ಯವಾಯಿತು. ಕೊನೆಕೊನೆಯಲ್ಲಿ ಜನರು ಸ್ಟೇಷನ್ನಿಗೆ ಹೋಗಿ ಪೂಜೆ ಮಾಡುವುದನ್ನು ಕಡೆಗಣಿಸತೊಡಗಿದರು. ಯಾವಾಗಲಾದಾಗರೊಮ್ಮೆ ಹೋದಾಗ ನಿನ್ನಿಂದಲೇ ಆದದ್ದು ಎಂದು ಹನುಮಂತ ದೇವರಿಗೆ ಮೂದಲಿಸತೊಡಗಿದರು.

ಮೂರೂವರೆ ವರ್ಷಗಳ ನಂತರ ಕೇಸು ಖುಲ್ಲಾ ಆಯಿತು. ಹನುಮಂತ ದೇವರ ಜಾಗ ಬದಲಿಸಿದ್ದು ಕಾನೂನು ಪ್ರಕಾರ ತಪ್ಪು. ಈ ಕೃತ್ಯದಲ್ಲಿ ಭಾಗವಹಿಸಿದ್ದವರೆಲ್ಲರೂ ಇಂತಿಷ್ಟು ದಂಡ ಕಟ್ಟಬೇಕು ಮತ್ತು ಎರಡೂ ಊರಿನವರು ಸೇರಿ ಹನುಮಂತ ದೇವರನ್ನು ಮರು ಪ್ರತಿಷ್ಠಾಪಿಸಬೇಕು ಎಂದು ಕೋರ್ಟು ಆದೇಶಿಸಿತು. ಅಷ್ಟೊತ್ತಿಗಾಗಲೇ ಜನ ಕೋರ್ಟಿಗೆ ಅಲೆದಾಡಿ ಸೋತು ಸುಣ್ಣವಾಗಿದ್ದರು. ಜನರ್‍ಯಾರೂ ಮೂರ್ತಿಯ ಮರು ಪ್ರತಿಷ್ಠಾಪನೆಗೆ ಉತ್ಸಾಹ ತೋರಿಸಲಿಲ್ಲ. ಪೊಲೀಸ್ ಅಧಿಕಾರಿಗಳು ಕಾಯುವಷ್ಟು ದಿನ ಕಾಯ್ದು ಕೊನೆಗೆ ಒಂದು ದಿನ ಮತ್ತೆ ಜೀಪಿನ ಮೇಲೆ ಹನುಮಂತನನ್ನು ಕುಳ್ಳಿರಿಸಿಕೊಂಡು ಬಂದರು. ಜೀಪಿನ ಮೇಲೆ ಮೂರ್ತಿಯನ್ನು ಕಂಡು ಜನ ದೆವ್ವ ಕಂಡವರಂತೆ ದಿಕ್ಕುಪಾಲಾಗಿ ಓಡತೊಡಗಿದರು.

**ಹನುಮಂತ ಹಾಲಿಗೇರಿ**
ಹಮೀದ್ ಶಾ ಕಾಂಪ್ಲೆಕ್ಸ್, ಕಬ್ಬನ್‌ಪೇಟೆ ಮುಖ್ಯರಸ್ತೆ, ಬೆಂಗಳೂರು - ೫೬೦ ೦೦೨

ಪಿ. ಚಂದ್ರಶೇಖರ ನಂಗಲಿ

ಅಲ್ಲಮನ ವಚನಗಳೆಂದರೆ ಬಹು ಕ್ಲಿಷ್ಟವಾದುವು, ದುರವಗಾಹಿ, ನಾರಿಕೇಳ ಪಾಕದಂತೆ ಕಠಿಣವೆಂಬ ಅಭಿಪ್ರಾಯವು ವಿದ್ವಜ್ಜನ ವಲಯದಲ್ಲಿ ಜನ ಜನಿತವಾಗಿಬಿಟ್ಟಿದೆ. ಇದು ನಿಜದುದಯವಲ್ಲ! ಅಲ್ಲಮನ ವಚನಗಳನ್ನು ಸಾಂಪ್ರದಾಯಿಕ ಟೀಕುಗಳು ಮತ್ತು ವಿಮರ್ಶೆಯ ವಾಗ್‌ವಿಲಾಸಗಳಿಂದ ಗ್ರಹಿಸಲು ಹೊರಟಾಗ ತೊಡಕೆನಿಸಬಹುದು. ಗಗನಕ್ಕೆ ಗಗನವೇ ಸರಿಸಾಟಿ, ವಚನಕ್ಕೆ ವಚನವೇ ಮೀಟುಗೋಲು. ಸರಳವಾದ ವಚನಗಳಿಂದ ಸಂಕೀರ್ಣ ವಚನಗಳನ್ನು ನೋಡುವಂತೆ ಸಂಕೀರ್ಣವಾದ ವಚನಗಳಿಂದ ಸರಳ ವಚನಗಳನ್ನು ನೋಡಬೇಕು. ಆಗ ಸರಳ-ಸಂಕೀರ್ಣಗಳೆರಡೂ ಒಂದರೊಳಗೊಂದು ಬೆರೆತು ಹಿಂದು ಮುಂದಾಗಿ ನೋಡುವುದು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಬಸವಣ್ಣನ ನೂರಾ ಎಪ್ಪತ್ತೈದಕ್ಕಿಂತಲೂ ಅಧಿಕ ವಚನಗಳಿಗೆ ಅಲ್ಲಮನ ನೂರಾ ಎಪ್ಪತ್ತೈದಕ್ಕಿಂತಲೂ ಅಧಿಕ ವಚನಗಳನ್ನು ಸಂಯೋಜಿಸಿರುವ 'ಬಸವ-ಅಲ್ಲಮ ಸಂವಾದ'ವೆಂಬ ನವನವೀನ ಸಂಪಾದನೆ ಶೂನ್ಯಸಂಪಾದನೆಯ ಖಂಡಾಂಶದಂತೆ ತೋರುತ್ತದೆ.

# ಅಭಿಜಾತ ಸಾಹಿತ್ಯ: ಅಲ್ಲಮನ ವಚನಗಳು

ಇಂಗ್ಲಿಷ್‌ನಲ್ಲಿರುವ ಕ್ಲಾಸಿಕ್, ಕ್ಲಾಸಿಕಲ್, ಕ್ಲಾಸಿಸಿಸಂ ಎಂಬ ಪರಿಭಾಷೆಗಳಿಗೆ ಸಂವಾದಿಯಾಗಿ ಕನ್ನಡದಲ್ಲಿ 'ಅಭಿಜಾತ'ವೆಂಬ ನುಡಿಯನ್ನು ಬಳಸುತ್ತಾ ಬಂದಿದ್ದೇವೆ. 'ಕ್ಲಾಸಿಸಿಸಂ' ಎಂಬುದಕ್ಕೆ ಸಮರ್ಪಕವಾದ ವಿವರಣೆ ನೀಡುವುದು ಸಾಧ್ಯವಿಲ್ಲ. ಆದರ್ಶವಾಗಿ ಸೌಂದರ್ಯಶಾಸ್ತ್ರವು ಕ್ಲಾಸಿಕ್, ಕ್ಲಾಸಿಕಲ್ ಎಂಬುದನ್ನು 'ಸರ್ವಶ್ರೇಷ್ಠ ವಾದ' ಎಂಬಂತೆ ಮಂಡಿಸಿದರೆ ಮಾರ್ಕ್ಸ್‌ವಾದಿ ಸೌಂದರ್ಯಶಾಸ್ತ್ರವು ಕ್ಲಾಸಿಕ್, ಕ್ಲಾಸಿಕಲ್ ಎಂಬುದನ್ನು 'ವರ್ಗಸ್ವಭಾವ ವಾದ' ಎಂಬಂತೆ ನಿರೂಪಿಸಿದೆ :

೧. ಐ. **ಫ್ರೊಲೊವ್ (೧೯೬೭)** : ಯುರೋಪಿಯನ್ನರ ಕಲಾತ್ಮಕ ವಿಧಾನಗಳು ಮತ್ತು ಸೌಂದರ್ಯಾತ್ಮಕ ಸಿದ್ಧಾಂತಗಳ ವಿಶಿಷ್ಟ ಲಕ್ಷಣಗಳನ್ನು ಬಿಂಬಿಸುವ ಪರಿಭಾಷೆಯೇ 'ಕ್ಲಾಸಿಸಿಸಂ.' ವಾಸ್ತವವಾದಿ ಚಿಂತನೆಗಳಿಗೆ ಎಟುಕದ ಹಾಗೆ ಉನ್ನತವಾದ ವರ್ಗ ಸ್ವಭಾವಗಳು ಮತ್ತು ರಾಜಾಸ್ಥಾನದ ಅಧಿಕಾರಶಾಹಿ ಸಂಸ್ಕೃತಿಯ ವಕ್ತಾರನಾಗಿರುವ 'ಕ್ಲಾಸಿಸಿಸಂ' ಅವನತವರ್ಗದ ನೆಲಮುಖಿ ಚಿಂತನೆಗಳಿಂದ ದೂರ ಸಿಡಿದಿರುತ್ತದೆ. (Dictionary of Philosophy)

೨. **ರೇಮಂಡ್ ವಿಲಿಯಮ್ಸ್ (೧೯೭೬)** : ಕ್ಲಾಸಿಕ್-ಕ್ಲಾಸ್ ಶಬ್ದಗಳನ್ನು ಜನ್ಯ-ಜನಕ ಸಂಬಂಧದಿಂದ ನೋಡುವ ರೇಮಂಡ್ ವಿಲಿಯಮ್ಸ್ ಈ ಜ್ಞಾತಿ ಶಬ್ದಗಳಿಗೆ ಕೊಟ್ಟಿರುವ ಅರ್ಥಗಳಿವು :

(ಅ) ನಿಗದಿತ ಗುಂಪು ಅಥವಾ ವಿಭಾಗವನ್ನು ಸೂಚಿಸುವ ಸಾಮಾನ್ಯ ಶಬ್ದ.

(ಆ) ಗ್ರೀಕ್ ಮತ್ತು ರೋಮನ್ನರ ಪ್ರಾಚೀನ ಕಲೆ ಮತ್ತು ಸಾಹಿತ್ಯದ ಶ್ರೇಷ್ಠತೆಯ ಪ್ರಮಾಣವನ್ನು ಬಿಂಬಿಸುವ, ವಿದ್ವಜ್ಜನರ ಸಾಹಚರ್ಯ ಮತ್ತು ಶಿಕ್ಷಣವನ್ನು ಸೂಚಿಸುವ ಸಾಮಾನ್ಯ ಶಬ್ದ (Key Words).

ಕ್ಲಾಸಿಕ್, ಕ್ಲಾಸಿಕಲ್ ಎಂಬ ಪರಿಭಾಷೆಯನ್ನು ಕನ್ನಡದಲ್ಲಿ ಚಾಲ್ತಿಗೆ ತಂದಾಗ 'ಸರ್ವಶ್ರೇಷ್ಠವಾದ' ಅಥವಾ 'ವರ್ಗ ಸ್ವಭಾವವಾದ' ಎಂಬ ನಿರ್ದಿಷ್ಟ ನೆಲೆಯಲ್ಲಿ ಮಾತ್ರವಲ್ಲದೆ, ಇನ್ನಿತರ ದೃಷ್ಟಿ-ಧೋರಣೆಗಳನ್ನು ಕೂಡ ಲಕ್ಷ್ಯದಲ್ಲಿಟ್ಟುಕೊಂಡಿದ್ದರು. ಇದನ್ನು ಜಿ. ಎಸ್. ಶಿವರುದ್ರಪ್ಪ ಮತ್ತು ಕೆ. ವಿ. ನಾರಾಯಣ ಅವರು ಮೊದಲಿಗೆ ನಿರ್ವಚನ ನೀಡುವ ಶ್ರಮವನ್ನು ನಿರ್ವಹಿಸಿದ್ದಾರೆ :



"...ಕ್ಲಾಸಿಸಿಸಂ ಎಂಬುದು ಖಚಿತ ಅರ್ಥವಲಯವನ್ನು ಪಡೆಯದಿರುವ ಮಾತು. ವಿಮರ್ಶಕರು ಇದಕ್ಕೆ ಆರು ಅರ್ಥಗಳಾದರೂ ಇವೆಯೆಂದು ಗುರುತಿಸಿದ್ದಾರೆ.

೧. ಅತ್ಯಂತ ಶ್ರೇಷ್ಠವಾದದ್ದು : ಇದು ಸಾಹಿತ್ಯ ಕೃತಿಯೇ ಆಗಿರಬೇಕಿಲ್ಲ ಆದರೆ ಸಾಹಿತ್ಯ ಕೃತಿಗಳಲ್ಲಿ ಬಲ್ಲವರಿಗೆ ಮಾತ್ರ ಅರ್ಥವಾಗುವಂತಹವನ್ನು ಈ ಹೆಸರಿನಿಂದ ಸೂಚಿಸಲಾಗುತ್ತದೆ.

೨. ಪ್ರೌಢ ವ್ಯಾಸಂಗದಲ್ಲಿ ಓದುವಂಥಾದ್ದು : ಇಲ್ಲಿಯೂ ಶ್ರೇಷ್ಠವಾದ ಕೃತಿ ಎಂಬ ಅರ್ಥವಿದೆ.

೩. ಶ್ರೇಷ್ಠ ಸಾಹಿತ್ಯ ಕೃತಿಗಳು ಮೂಡಿಬಂದ ಕಾಲ.

೪. (ಅ) ಗ್ರೀಕ್ ಮತ್ತು ರೋಮನರ ಕೃತಿಗಳಲ್ಲಿರುವ ವಸ್ತುಗಳ ಅನುಕರಣೆಯಿಂದ ಹುಟ್ಟಿದ ಕಾವ್ಯಗಳು.

(ಆ) ಗ್ರೀಕ್ ಮತ್ತು ರೋಮನರ ಕೃತಿಗಳ ರೂಪ, ತಂತ್ರಗಳ ಅನುಕರಣೆಯಿಂದ ಹುಟ್ಟಿದ ಕಾವ್ಯಗಳು.

೫. ರೊಮ್ಯಾಂಟಿಕ್ ಎಂಬುದಕ್ಕೆ ವಿರುದ್ಧವಾಗಿ ರೂಪುಗೊಂಡದ್ದು.

೬. ಸಾಹಿತ್ಯ ಚರಿತ್ರೆಯ ಅವಧಿಯಾಗಿ.

ಕನ್ನಡದಲ್ಲಿ ಈ ಎಲ್ಲ ಅರ್ಥದಲ್ಲೂ 'ಅಭಿಜಾತ' ಎಂಬ ಮಾತನ್ನು ಬಳಸುವುದಿಲ್ಲ. ಕನ್ನಡದ ಸಂದರ್ಭದಲ್ಲಿ ಮೊದಮೊದಲು ಮಾದರಿಗಳನ್ನು ಒದಗಿಸಿದ ಸಂಸ್ಕೃತ ಸಾಹಿತ್ಯವನ್ನು 'ಅಭಿಜಾತ'ವೆಂದು ಕರೆಯಲಾಗುತ್ತದೆ. ಜತೆಗೆ ಕನ್ನಡದಲ್ಲಿ ಈ ಮಾದರಿಯನ್ನು ಅನುಸರಿಸಿ ಹುಟ್ಟಿದ ಕಾವ್ಯಗಳನ್ನು 'ಅಭಿಜಾತ' ಪರಂಪರೆಗೆ ಸೇರಿವೆಯೆಂದೂ ಹೇಳುವುದುಂಟು. 'ಮಾರ್ಗ'ವನ್ನು ಈ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತಿದೆ..." (ಕಾವ್ಯಾರ್ಥ ಪದಕೋಶ - ೧೯೮೦, ಬೆಂ.ವಿ.ವಿ.)

ಮೇಲ್ಕಾಣಿಸಿದ ಆರು ಬಗೆಯ ಅರ್ಥಗಳನ್ನೇ ಓ. ಎಲ್. ನಾಗಭೂಷಣ ಸ್ವಾಮಿಯವರು

'ವಿಮರ್ಶೆಯ ಪರಿಭಾಷೆ'ಯಲ್ಲಿ (೯೫೮) ವಿವರವಾಗಿ ನಿರೂಪಿಸಿದ್ದಾರೆ.

ಡಾ|| ಕೆ. ಆರ್. ದುರ್ಗಾದಾಸ್ ಅವರು ಅಭಿಜಾತ ಸಾಹಿತ್ಯದ ವ್ಯಾಪ್ತಿಯಲ್ಲಿ ವಡ್ಡಾರಾಧನೆ, ಕವಿರಾಜಮಾರ್ಗ, ಲೌಕಿಕ ಮತ್ತು ಆಗಮಿಕ ಪರಂಪರೆ, ಗಂಗಾಧರಂ ಶಾಸನ, ಸಂಸ್ಕೃತ-ಪ್ರಾಕೃತ ಸಾಹಿತ್ಯದ ಹಿನ್ನೆಲೆ, ಶಬ್ದಮಣಿದರ್ಪಣಂ, ಯಶೋಧರ ಚರಿತೆ, ಕುಮಾರವ್ಯಾಸ ಭಾರತ, ವಚನಗಳು, ಕೀರ್ತನೆಗಳು, ರಗಳೆಗಳು, ಹರಿಶ್ಚಂದ್ರಕಾವ್ಯ, ಭಾಷಾ ವಿಜ್ಞಾನದ ಹಿನ್ನೆಲೆ ಮುಂತಾದ ವಿಷಯಗಳನ್ನು ಅಳವಡಿಸಿದ್ದಾರೆ. 'ಅಭಿಜಾತ'ವೆಂದರೆ ಕೇವಲ ಕನ್ನಡದ ಪ್ರಥಮ ನವೋದಯ ಎಂಬ ಕಾಲನಿಷ್ಠ ಸ್ಥಾವರಕ್ಕೆ ಬದ್ಧವಾಗದಂತೆ ಎಲ್ಲವನ್ನು ಒಳಗೊಳ್ಳುತ್ತಿರುವ ಒಲವು-ನಿಲುವುಗಳನ್ನು ನಾನು ಇಷ್ಟಪಟ್ಟಿದ್ದೇನೆ. ಕನ್ನಡದ ಮಟ್ಟಿಗೆ 'ಅಭಿಜಾತ ಸಾಹಿತ್ಯ' ವೆಂದರೆ ಕಾಲನಿಷ್ಠ ಸ್ಥಾವರವಲ್ಲ! ಮೇಲಿನ ವಿಷಯ ವ್ಯಾಪ್ತಿಯಲ್ಲಿ ಜನಪದ ಸಾಹಿತ್ಯ, ತತ್ವಪದಗಳು, ಆಧುನಿಕ ಸಾಹಿತ್ಯ ಮುಂತಾದವುಗಳನ್ನು ಕೂಡ ಒಳಗೊಂಡಿದ್ದರೆ, ನಮ್ಮ ಚರ್ಚೆಗೊಂದು ಸಮಗ್ರತೆಯ ದೃಷ್ಟಿ ಸಿಗುತ್ತಿತ್ತು.

ಎಲ್. ಬಸವರಾಜು ಅವರು ಹೇಳಿದ ನುಡಿಗಳಿವು :

''...ಅಲ್ಲಮನ ವಚನಗಳು ಅಭಿಜಾತ ಸಾಹಿತ್ಯವೇ ಆಗಿವೆ. ಅಭಿಜಾತ ಸಾಹಿತ್ಯವೆಂದರೆ ಯಾವುದೋ ಪ್ರಾಚೀನ ಕಾಲಕ್ಕೆ ಸೇರಿದ, ಹಳಗನ್ನಡದಲ್ಲಿರುವ ಸಾಹಿತ್ಯ ಮಾತ್ರವೆಂದು ತಿಳಿಯಬಾರದು. ಅಭಿಜಾತ ಸಾಹಿತ್ಯದಲ್ಲಿ ಎರಡು ಬಗೆಗಳಿವೆ : (೧) ಶಾಸ್ತ್ರೀಯವಾಗಿ ಮನೋಹರವಾಗಿರುವುದು. ಉದಾ : ಪಂಪ-ರನ್ನರ ಕಾವ್ಯಗಳು; (೨) ಜಾನಪದೀಯವಾಗಿ ಮನೋಹರವಾಗಿರುವುದು. ಉದಾಹರಣೆಗೆ, ಜನಪದ ಸಾಹಿತ್ಯ. ಬಸವಣ್ಣ ಮುಂತಾದವರು, ಮಾದಾರ ಚನ್ನಯ್ಯ, ಡೋಹಾರ ಕಕ್ಕಯ್ಯ ಮುಂತಾದವರಿಂದ ಭಿಕ್ಷೆ ಬೇಡಿ ಕನ್ನಡ ಸಾಹಿತ್ಯದ ಪಾತ್ರೆಯನ್ನು ತುಂಬಿಸಿದ್ದಾರೆ...''

ಕನ್ನಡ ಸಾಹಿತ್ಯ ಸಂಸ್ಕೃತಿಗೆ ಸಂಬಂಧಪಟ್ಟಂತೆ 'ಲಿಖಿತ ಪರಂಪರೆ' ಮತ್ತು 'ಮೌಖಿಕ ಪರಂಪರೆ'ಗಳೆರಡನ್ನೂ ಅಭಿಜಾತ ಸಾಹಿತ್ಯದ ವ್ಯಾಪ್ತಿಯಲ್ಲಿ ಪರಿಗಣಿಸಬೇಕಾಗಿದೆ. ಲಿಖಿತ ಪರಂಪರೆಯನ್ನು ಅಭಿಜಾತ ಮಾರ್ಗ ಸಾಹಿತ್ಯವೆಂದೂ ಮೌಖಿಕ ಪರಂಪರೆಯನ್ನು ಅಭಿಜಾತ ದೇಸಿ ಸಾಹಿತ್ಯ ವೆಂದೂ ಕರೆದುಕೊಳ್ಳಬಹುದು. ಇದು ನಮ್ಮ ಕನ್ನಡ ಸಾಹಿತ್ಯ ಪರಂಪರೆಯ ದ್ವಿದಳ ಧಾನ್ಯದ ಬೆಳೆಯಾಗಿದೆ.

ಅಲ್ಲಮಪ್ರಭುವಿನ ವಚನಗಳು 'ಅಭಿಜಾತ' ಅಥವಾ 'ಕ್ಲಾಸಿಕ್' ಮಾತ್ರವಲ್ಲ! ಅಲ್ಲಮನ ವಚನಗಳ ಧಾತು ಮತ್ತು ಧೋರಣೆಗಳನ್ನು ಸಮಗ್ರವಾಗಿ ವಿವರಿಸುವುದಕ್ಕೆ ಈ ಪರಿಭಾಷೆಗೆ ಶಕ್ತಿ ಸಾಲದು! ಅಲ್ಲಮನ ವಚನಗಳು 'ಅಭಿಜಾತ'ಕ್ಕಿಂತಲೂ ಅಧಿಕ! ಅಲ್ಲಮನ ವಚನಗಳನ್ನು 'ಅಧಿಕ ಅಭಿಜಾತ' (= ಮೆಟಾಕ್ಲಾಸಿಕ್) ಎಂದೇ ಕರೆಯಬಹುದು. ಈ 'ನಾಮಕರಣ' ಅಥವಾ 'ನೇಮಿಂಗ್' ಎನ್ನುವುದೇ ಒಂದು ರಾಜಕೀಯ. ರಾಮಾಶಾಸ್ತ್ರೀ, ರಾಮೇಗೌಡ, ರಾಮಪ್ಪ, ರಾಮಾಚಾರಿ ಎಂಬ ಹೆಸರುಗಳ ಹಿಂದೆ ಸುಸ್ಪಷ್ಟವಾಗಿರುವ ಜಾತಿ ವಾಸನೆ ಒಂದು ಸಾಂಸ್ಕೃತಿಕ ರಾಜಕಾರಣವೇ ಆಗಿದೆ. ಇದನ್ನು ತಪ್ಪಿಸಬೇಕೆಂದರೆ, ಹೊಸ ಬಗೆಯ ನಾಮಕರಣ ಮಾಡಲೇಬೇಕು.

ಕ್ಲಾಸಿಕಲ್ ಲಿಟರೇಚರ್, ಕ್ಲಾಸಿಕಲ್ ಲಾಂಗ್ವೇಜ್ – ಎಂಬುದೊಂದು ರಾಜಕೀಯ! ಇದು ಯಾವುದೇ ಒಂದು ಭಾಷೆಯ ಗುತ್ತಿಗೆ ಪದ್ಧತಿಯಲ್ಲ. ಒಂದು ಭಾಷಾ ಕುಟುಂಬಕ್ಕೆ ಸೇರಿದ ದ್ರಾವಿಡ ಭಾಷೆಗಳಲ್ಲಿ ಲಿಖಿತ ಆಧಾರಗಳಿರುವುದು ತಮಿಳು, ಕನ್ನಡ, ತೆಲುಗು, ಮಲಯಾಳ ಭಾಷೆಗಳಿಗೆ ಮಾತ್ರ! ಇನ್ನುಳಿದ ಇಪ್ಪತ್ತಕ್ಕೂ ಹೆಚ್ಚಿನ ದ್ರಾವಿಡ ಭಾಷೆಗಳಿಗೆ ಲಿಖಿತ ಆಧಾರಗಳಿಲ್ಲ, ಅಂದಮಾತ್ರಕ್ಕೆ ಈ ಲಿಪಿರಹಿತ ಭಾಷೆಗಳು ಅರ್ವಾಚೀನವೆಂದು ಹೇಳಲಾಗದು. ಇವು ತಮಿಳಿನಷ್ಟೇ ಪ್ರಾಚೀನತೆಯನ್ನು ಪಡೆದಿವೆ. ಮೂಲ ದ್ರಾವಿಡ ಭಾಷೆಯ ಎಷ್ಟೋ ಲಕ್ಷಣಗಳನ್ನು ಲಿಪಿರಹಿತ ಭಾಷೆಗಳಲ್ಲಿ ಗುರುತಿಸಲಾಗಿದೆ. ಆದ್ದರಿಂದ, ಯಾವೊಂದು ಭಾಷೆಯೂ ತಾನು 'ಕ್ಲಾಸಿಕಲ್' ಎಂದು ಬೀಗುವುದು ತರವಲ್ಲ. ಇದೀಗ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ 'ಕ್ಲಾಸಿಕಲ್ ವ್ಯಸನ' ಕೋರ್ಟಿನಲ್ಲಿ ಬಗೆಹರಿಯಬೇಕಾದ ಮಟ್ಟವನ್ನು ತಲುಪಿರುವುದರಿಂದ, ಪ್ರಜಾಪ್ರಭುತ್ವದ ಆಶಯಗಳಿಗೆ ಅನುಗುಣವಾಗಿ ನಾವು 'ಕ್ಲಾಸಿಕಲ್' – ಎಂಬ ಪರಿಭಾಷೆಗೆ ಕಾಯಕಲ್ಪ ಚಿಕಿತ್ಸೆ ನೀಡಬೇಕಾಗಿದೆ. ಕ್ಲಾಸಿಕ್ ಎಂಬ ಪರಿಕಲ್ಪನೆಗಿಂತಲೂ ಅಧಿಕವಾದ ಅಲ್ಲಮನ ವಚನಗಳನ್ನು ಈ ಕಾರಣದಿಂದಲೆ 'ಮೆಟಾಕ್ಲಾಸಿಕ್' ಎಂದು ಕರೆಯಲಾಗಿದೆ. ಮೆಟಾಕ್ಲಾಸಿಕ್ ಜೊತೆಗೆ, 'ನಿರ್‌ಭೀತಿಯ ಅಭಿಜಾತ ಸಾಹಿತ್ಯ' ಎಂಬ ಹೊಸ ನಾಮಕರಣವನ್ನೂ ಇಟ್ಟುಕೊಳ್ಳಬಹುದು.

**ನಿರ್‌ಭೀತಿಯ ಅಭಿಜಾತ ಸಾಹಿತ್ಯ**

ಅಲ್ಲಮನ ವಚನಗಳು ನಿರ್‌ಭೀತಿಯ ಅಭಿಜಾತ ಸಾಹಿತ್ಯ ವೆಂಬುದನ್ನು ಮನಗಾಣಬೇಕಾದರೆ, ಮುಂದೆ ನಿರೂಪಿಸಿರುವ ವಿಚಾರಸರಣಿಯನ್ನು ಒಳಹೊಕ್ಕು ಅರ್ಥಮಾಡಿಕೊಳ್ಳಬೇಕಾಗಿದೆ :

**೧. ಜಮೈಕ ದೇಶದ ಈ ಗಾದೆಯನ್ನು ಗಮನಿಸಿ :** 'ದೇವಸ್ಥಾನದ ಸಮೀಪಕ್ಕೆ ಹೋದಂತೆಲ್ಲ ದೇವರಿಂದ ದೂರ ಹೋದಂತೆಯೇ'. ದೇವಸ್ಥಾನಗಳಿಗೆ ಎಡತಾಕುವುದನ್ನೆ ಬಾಳಿನ ಗುರಿಯನ್ನಾಗಿಟ್ಟುಕೊಂಡವರಿಗೆ ಈ ಗಾದೆ ಅರ್ಥವಾಗುವುದು ಕಷ್ಟಕರ!

**೨. ಝೆನ್ ಕಥಾಪ್ರಸಂಗ :** ಗುರುತಂಕಾ ಮಳೆ ಚಳಿಯಿಂದ ರಕ್ಷಣೆ ಪಡೆಯಲು ಬುದ್ಧನ ಕಾಷ್ಠಮೂರ್ತಿಯನ್ನು ಉರುವಲಾಗಿ ಬಳಸಿಕೊಂಡು ಅಲ್ಲಿದ್ದ ಅರ್ಚಕನಿಗೆ ದಿಗ್‌ಭ್ರಾಂತಿ ಹುಟ್ಟಿಸುತ್ತಾನೆ. ಬುದ್ಧನ ಕಾಷ್ಠಮೂರ್ತಿಯ ರೂಪು ಅಥವಾ ಕುರುಹಿನ ನಿರಾಕರಣೆಯ ಕಾಣ್ಕೆ ಇಲ್ಲಿದೆ.

**೩. ಜಮೈಕ ದೇಶದ ಗಾದೆ ಮತ್ತು ಝೆನ್ ಕಥಾಪ್ರಸಂಗವನ್ನು ಸಮರ್ಥಿಸುವ ಅಲ್ಲಮನ ಆಯ್ದ ವಚನಗಳು :**

*೧. ರೂಪನೆ ಕಂಡರು, ನಿರೂಪನು ಕಾಣರು!*
*ತನುವನೆ ಕಂಡರು, ಅನುವನೆ ಕಾಣರು!*
*ಆಚಾರವನೆ ಕಂಡರು, ವಿಚಾರವನೆ ಕಾಣರು!*
*ಗುಹೇಶ್ವರ!*
*ನಿಮ್ಮ ಕುರುಹನೆ ಕಂಡು*
*ಕೂಡಲರಿಯದೆ ಕೆಟ್ಟರು (೨೫೧)*

'ಅಂಗದ ಮೇಲೆ ಲಿಂಗ ಸಾಹಿತ್ಯ'ವನ್ನು ಪ್ರತಿಪಾದಿಸುವ ವೀರಶೈವರು ಇಷ್ಟಲಿಂಗವನ್ನು ದೇಹದ ಯಾವ ಯಾವ ಭಾಗಗಳಲ್ಲಿ ಇಟ್ಟುಕೊಳ್ಳಬೇಕೆಂಬುದನ್ನು ಶಾಸ್ತ್ರೀಯವಾಗಿ ನಿರೂಪಿಸಿದ್ದಾರೆ. ಅಲ್ಲಮನು ಅಂಥ ಅಂಗ ಭಾಗಗಳಿಗೆಲ್ಲ ಒದಗುವ ದುರ್ಗತಿಯನ್ನು ಬಹುಚೆನ್ನಾಗಿ ವಿಡಂಬಿಸಿದ್ದಾನೆ :

*೨. ಅಂಗ ಸೋಕೆಂಬುದು ಅಧಮವು*
*ಉರಸೆಜ್ಜೆಯೆಂಬುದು ಎದೆಯ ಗಂಡ*
*ಕಕ್ಷವೆಂಬುದು*
*ಕವುಚಿನ ತವರುಮನೆ*
*ಬಾಯಬಗದಳ ಅಮಲೋಕ್ಯವೆಂಬುದು*
*ಮುಖ ಸೆಜ್ಜೆಯೆಂಬುದು ಪಾಂಡುರೋಗ*
*ಕರಸ್ಥಳವೆಂಬುದು ಮರವಡದ ಕುಳಿ*
*ಉತ್ತಮಾಂಗವೆಂಬುದು ಸಿಂಬಿಯ ಕಪ್ಪಡ*
*ಎಲ್ಲರಿಗೆ ಸೋಂಕಾಯಿತ್ತು ಈ ಹುಸಿಯ ಗುಂಟದಲ್ಲಿ*
*ಬಿಡು. ಬಾಲಭಾಷೆಯ ಭಂಡರ ನುಡಿಯ*
*ಕೇಳಲಾಗದು,*
*ಗೊಗೇಶರ. (೩೯೭)*




ತುಮಕೂರು ಜಿಲ್ಲಾ ಸಾಂಸ್ಕೃತಿಕ ಜನೋತ್ಸವವನ್ನು ಯಶಸ್ವಿಯಾಗಿ ನಡೆಸಲು ಸಹಕಾರ ನೀಡಿದ ಜಿಲ್ಲಾಧಿಕಾರಿ ಮಾನ್ಯ ಡಾ|| ಸಿ. ಸೋಮಶೇಖರ್ ಅವರಿಗೆ ನವಕರ್ನಾಟಕ ಪ್ರಕಾಶನದ ಪರವಾಗಿ 'ಕರ್ನಾಟಕ ಕಲಾದರ್ಶನ' ಸಂಪುಟವನ್ನು ನೆನಪಿನ ಕಾಣಿಕೆಯಾಗಿ ನೀಡಲಾಯಿತು. ತುಮಕೂರಿನ ಸಾಹಿತ್ಯಾಸಕ್ತರು ಚಿತ್ರದಲ್ಲಿದ್ದಾರೆ.

೩. ತಮ್ಮ ತಮ್ಮ ಭಾವಕ್ಕೆ ಉಡಿಯಲ್ಲಿ ಕಟ್ಟಿಕೊಂಡರು
ತಮ್ಮ ತಮ್ಮ ಭಾವಕ್ಕೆ ಕೊರಳಲ್ಲಿ ಕಟ್ಟಿಕೊಂಡರು
ನಾನೆನ್ನ ಭಾವಕ್ಕೆ ಪೂಜಿಸಹೋದರೆ,
ಕೈತಪ್ಪಿ, ಮನದಲ್ಲಿ ಸಿಲುಕಿತ್ತೆನ್ನ ಲಿಂಗ!
ಸಾಧಕನಲ್ಲ, ಭೇದಕನಲ್ಲ;
ಗುಹೇಶ್ವರನಲ್ಲಯ್ಯ ತಾನೆ ಬಲ್ಲ (೧೩೭)

೪. ಎನಗೊಂದು ಲಿಂಗ
ನಿನಗೊಂದು ಲಿಂಗ
ಮನೆಗೊಂದು ಲಿಂಗವಾಯಿತ್ತು!
ಹೋಯಿತ್ತಲ್ಲಾ ಭಕ್ತಿ ಜಲವ ಕೂಡಿ!
ಉಳಿ ಮುಟ್ಟಿದ ಲಿಂಗವ
ಮನ ಮುಟ್ಟಬಲ್ಲುದೇ ಗುಹೇಶ್ವರ? (೧೧೯)

ಸ್ಥಾವರಲಿಂಗದ ಬಗ್ಗೆ ಅಲ್ಲಮನ ಅಭಿಪ್ರಾಯ ಬೆಚ್ಚಿ ಬೀಳಿಸುವಂಥಾದ್ದು. ಶಿವಲಿಂಗದ ಉಗಮವೇ ಅಪವಿತ್ರವಾದುದು! ಅದು ಒಬ್ಬರಿಗೆ ಹುಟ್ಟಿದ್ದಲ್ಲ! ಮೂವರಿಗೆ ಹುಟ್ಟಿದ್ದು ಎಂಬುದನ್ನು ಹೀಗೆ ಹೇಳಿದ್ದಾನೆ:

೫. ಪೃಥ್ವಿಗೆ ಹುಟ್ಟಿದ ಶಿಲೆ
ಕಲ್ಕುಟಿಗಂಗೆ ಹುಟ್ಟಿದ ಮೂರುತಿ
ಮಂತ್ರಕ್ಕೆ ಲಿಂಗವಾಯಿತ್ತಲ್ಲಾ!
ಈ ಮೂವರಿಗೆ ಹುಟ್ಟಿದ ಮಗನ
ಲಿಂಗವೆಂದು ಕೈವಿಡಿವ
ಅಚ್ಚವ್ರತಗೇಡಿಗಳನೇನೆಂಬೆ ಗುಹೇಶ್ವರ. (೧೨೧)

ಹೀಗೆ ಇಷ್ಟಲಿಂಗ ಮತ್ತು ಸ್ಥಾವರಲಿಂಗ ಎರಡನ್ನೂ ನಿರಾಕರಿಸುವ ಅಲ್ಲಮನ ಅಭಿಮತ ಏನಿರಬಹುದು? ದೇವರನ್ನು ತನ್ನ ಕಣ್ಣಳತೆಯ ಪ್ರಮಾಣಕ್ಕೆ ಇಳಿಸಿಕೊಳ್ಳುವ ನರನ ಬುದ್ಧಿಯ ಚಾಪಲ್ಯಕ್ಕೆ ಅಲ್ಲಮನ ಉತ್ತರವಿದು:

೬. ನಾನೆಂಬುದು ಪ್ರಮಾಣ. ನೀನೆಂಬುದು ಪ್ರಮಾಣ
ಸ್ವಯವೆಂಬುದು ಪ್ರಮಾಣ, ಪರವೆಂಬುದು
ಪ್ರಮಾಣ
ಪ್ರಮಾಣವೆಂಬುದು ಪ್ರಮಾಣ,
ಗೊಹೇಶ್ವರನೆಂಬುದು ಅಪ್ರಮಾಣ. (೧೧೬೩)

ವಿಶ್ವ ಚೈತನ್ಯದ ಅಪ್ರಮಾಣವನ್ನು ತನ್ನ ಮನದಲ್ಲಿ ತುಂಬಿಕೊಂಡ ಆತುಮ ತುಂಬಿ, ಪರಮಾತುಮ ತುಂಬಿ ಅಲ್ಲಮನು ತುಂಬಿ ನೋಡಿದ ಬಗೆಯಿದು:

೭. ಹರಿವ ನದಿಗೆ ಮೈಯೆಲ್ಲ ಕಾಲು
ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ
ಬೀಸುವ ಗಾಳಿಗೆ ಮೈಯೆಲ್ಲ ಕೈ
ಇದು ಕಾರಣ, ಗೊಹೇಶ್ವರ
ನಿಮ್ಮ ಶರಣಂಗೆ ಸರ್ವಾಂಗವೆಲ್ಲ ಲಿಂಗ
ಮಯವಯ್ಯ! (೩೬೫)

(೧) ಜಮೈಕ ದೇಶದ ಗಾದೆ (೨) ಝೆನ್ ಕಥಾ ಪ್ರಸಂಗ (೩) ಅಲ್ಲಮನ ವಚನಗಳು – ಈ ಮೂರನ್ನು ಏಕ ಗ್ರಾಹಕವಾಗಿ ಸಂಧಿಸಿ ನೋಡಿದರೆ, ಇವು ಕೂಡಲ ಸಂಗಮ ತತ್ವವೆಂಬುದು ಅರಿವಾಗುತ್ತದೆ. ಇಂಥ ತತ್ವ ವಿಚಾರಗಳು ಭೀತಿಯಿಂದ ಹುಟ್ಟುವುದಿಲ್ಲ. ಇದೇ ನಿರ್‌ಭೀತಿಯ ಅಭಿಜಾತ ಸಾಹಿತ್ಯ. 'ಅಜ್ಜ ನೆಟ್ಟಾಲ' ಎಂಬಂತೆ ಸುಪ್ರಸಿದ್ಧವಾದ 'ಸ್ಥಾವರ'ದ ಪರಿಭಾಷೆಯಾದ 'ಕ್ಲಾಸಿಕ್-ಕ್ಲಾಸಿಕಲ್' ಎಂದು ಮಾತನಾಡುವುದಕ್ಕಿಂತಲೂ (= ಹೀಗೆ ಹೇಳುವುದು ತೋರುಂಬ ಲಾಭ!) ಇದರ ಹಂಗನ್ನು ಹರಿದುಕೊಳ್ಳುವುದು ಮೇಲು!

ಡಾ॥ ಕೆ. ವಿ. ನಾರಾಯಣ ಅವರು ಹೇಳಿದ ಮಾತುಗಳಿವು: ''ಕನ್ನಡದ ಬೌದ್ಧಿಕ ಪರಂಪರೆ ಅಲ್ಲಮನಿಂದಲೇ ಆರಂಭವಾಗುತ್ತದೆ. ಈ ಸಂಗತಿ ನನಗೆ ಮೊದಲು ಗೊತ್ತಿರಲಿಲ್ಲ. ನನ್ನ ಓದು ಸಾಗುತ್ತಾ ಬಂದಂತೆ ಈ ಸತ್ಯ ಕ್ರಮೇಣ ಅನುಭವಕ್ಕೆ ಬಂದಿತು...'' ಕೆ.ವಿ.ಎನ್. ಮಾತುಗಳ ನಿಜದುದಯವನ್ನು ಬಲ್ಲವರಿಗೆ ಅಲ್ಲಮಪ್ರಭು ಕನ್ನಡ ಬೌದ್ಧಿಕ ಪರಂಪರೆಯ ಅತ್ಯುನ್ನತ ಶಿಖರ ಎಂಬುದು ನಿಚ್ಚಳವಾಗಿದೆ. ಮಾಮೂಲಿಯಾದ 'ಅಭಿಜಾತ ಸಾಹಿತ್ಯ'ಕ್ಕಿಂತ ಬೇರೆಯಾದ ಅಲ್ಲಮನ ವಚನಗಳನ್ನು 'ವಿಚಾರ ಸಾಹಿತ್ಯ' ಎಂದು ಕರೆಯುವುದು ಹೆಚ್ಚು ಉಚಿತ. 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಎಂಬ ಕುವೆಂಪು ಅವರ ನಿರ್‌ಭೀತಿಯ ಕರೆಗೆ ಬೆನ್ನೆಲುಬಾಗಿರುವುದು ಅಲ್ಲಮ ಕೂಗಿದ ಕೂಗು. ಕನ್ನಡ ಸಂಸ್ಕೃತಿಯ ವಿಚಾರ ಸಾಹಿತ್ಯದ ಕೃಷಿಯನ್ನು ಇಪ್ಪತ್ತನೆ ಶತಮಾನದಿಂದ ಮನಗಾಣುವುದಕ್ಕೆ ಬದಲು ಅಲ್ಲಮನ ವಚನಗಳಿಂದಲೇ ಆರಂಭಿಸುವುದು ಹೆಚ್ಚು ಉಚಿತ!

ಈ ಸಂದರ್ಭಕ್ಕಾಗಿ ಆಯ್ದ ಅಲ್ಲಮನ ನಾಲ್ಕು ವಚನಗಳು

೧. ತ್ರಿಸ್ಥಾನದ ನುಡಿಗಳು
ವಸ್ತುಕ ವರ್ಣಕ ತ್ರಿ(=ಪ್ರ) ಸ್ಥಾನದ ಮೇಲೆ ನುಡಿವ
ನುಡಿಗಳು ಇತ್ತಿತ್ತಲಲ್ಲದೆ, ಅತ್ತಲಾರು ಬಲ್ಲರು?
ಇವರೆತ್ತಲೆಂದರಿಯರು!
ಗಿಳಿವಿಂಡುಗೆಡೆವರು
ನಿಮ್ಮನೆತ್ತ ಬಲ್ಲರು ಗುಹೇಶ್ವರ! (೩೧೪)

೨. ಅಕ್ಷರದ ಅಹಂಕಾರ
ಅಕ್ಷರವ ಬಲ್ಲೆವೆಂದು
ಅಹಂಕಾರವೆಡೆಗೊಂಡು ಲೆಕ್ಕಗೊಳ್ಳರಯ್ಯ
ಗುರುಹಿರಿಯರು ತೋರಿದ ಉಪದೇಶದಿಂದ
ವಾಗದ್ವೈತವ ಕಲಿತು ವಾದಿಪರಲ್ಲದೆ
ಆಗು-ಹೋಗೆಂಬುದನರಿಯರು
ಭಕ್ತಿಯನರಿಯರು- ಯುಕ್ತಿಯನರಿಯರು -
ಮುಕ್ತಿಯನರಿಯರು
ಮತ್ತೂ ವಾದಿಗೆಳಸುವರು
ಹೋದರು, ಗುಹೇಶ್ವರ, ಸಲೆ ಕೊಂಡ
ಮಾರಿಂಗೆ! (೪೭)

೩. ಚಿತ್ರಗುಪ್ತರ ಕೈಯಪತ್ರ
ಹಾಳೂರೊಳಗೊಂದು ಮನೆಯಮಾಡಿ
ಬದ್ದಹೆನೆಂದು ಹೋದರೆ
ಕಾಳೋರಗ ಬಂದು ಕಡಿಯಿತ್ತು ನೋಡಾ!
ಕೇರಿ ಕೇರಿಯೊಳಗೆಲ್ಲ
ಹರಿದಾಡುತ್ತಿದ್ದವು
ಮಾರಿಯ ತೋರದ ಮದಗಜಂಗಳು!
ಚಿತ್ರಗುಪ್ತರ ಕೈಯಪತ್ರವ ತಿಳಿದು ನೋಡಿದರೆ
ಹಾಳೂರು ಹಾಳಾಯಿತ್ತು ಗುಹೇಶ್ವರ! (೧೬೫)

೪. ಹಿಂದುಮುಂದಾಗಿ ನೋಡುವುದು
ತಿಳಿದಿರ್ದ ಮಡುವಿನೊಳಗೆ
ಸುಳಿದಾಡುತ್ತದೆ ಒಂದು ಸುವರ್ಣದ ಬಿಂದು!
ಅದು ಹಿಂದುಮುಂದಾಗಿ ನೋಡಿದವರಿಗಲ್ಲದೆ
ಕಾಣಬಾರದು.
ಮಡುವ ತುಳುಕದೆ
ದಡವ ಸೋಂಕದೆ ಹಿಡಿಯಬಲ್ಲಡೆ
ಗುಹೇಶ್ವರನೆಂಬ ಲಿಂಗವು ಈಗಳೆ ಸಾಧ್ಯ! (೪೬೭)

**ತ್ರಿಸ್ಥಾನದ ನುಡಿಗಳು**: ಈ ವಚನದಲ್ಲಿರುವ 'ತ್ರಿಸ್ಥಾನ'ವೆಂಬುದು ಅಪರಿಚಿತ ಪ್ರಯೋಗ. ವಸ್ತುಕ-ವರ್ಣಕವೆಂಬುದು ಪರಿಚಿತ ಪ್ರಯೋಗ. ಕಥಾವಸ್ತುವನ್ನು ಒಳಗೊಂಡಿರುವ ಕಾವ್ಯಗಳೂ 'ವಸ್ತುಕ'; ಕಥಾವಸ್ತುರಹಿತವಾದ ಮತ್ತು ವರ್ಣನೆಗಳಿಂದ ಕೂಡಿರುವ ಕಾವ್ಯಗಳು 'ವರ್ಣಕ'. ಪಂಪನಿಗಿಂತ ಮೊದಲೆ ಕನ್ನಡದಲ್ಲಿ ವಸ್ತುಕ ಕಾವ್ಯಗಳೂ ವರ್ಣಕ ಕಾವ್ಯಗಳೂ ಚಾಲ್ತಿಯಲ್ಲಿದ್ದವು. ವರ್ಣಕವಿತ್ವವನ್ನು ವಸ್ತುಕವಿತ್ವದಲ್ಲಿ ಒಪ್ಪವಾಗಿ ಒಡಂಬಡುವಂತೆ ಹೇಳಲು ಪಂಪನೇ ಸಮರ್ಥನೆಂದು ಆ ಕಾಲದ ಪಂಡಿತರು ಒತ್ತಾಯಿಸಿದ್ದಕ್ಕೆ ಪಂಪನು 'ವಿಕ್ರಮಾರ್ಜುನವಿಜಯ'ವೆಂಬ ಪ್ರಬಂಧ ಕಾವ್ಯವನ್ನು ರಚಿಸಿದನು. 'ಸೂಕ್ತಿ ಸುಧಾರ್ಣವ' ರೀತಿಯ ಕಾವ್ಯಗಳೇ ವರ್ಣಕ ಕಾವ್ಯಗಳು. 'ತ್ರಿಸ್ಥಾನ'ವೆಂದರೆ ಏನೆಂದು ತಿಳಿಯದ ಕಾರಣಕ್ಕೆ ಡಾ॥ ಎಲ್. ಬಸವರಾಜು ಅವರು 'ಪ್ರಸ್ಥಾನ' ಎಂಬ ಸೃಜನಶೀಲ ಪಾಠಾಂತರವನ್ನು ಕೊಟ್ಟದ್ದಾರೆ. ಕಿಟ್ಟೆಲ್ 'ತ್ರಿಸ್ಥಾನ'ಕ್ಕೆ 'ದ ತ್ರೀ ಅಕ್ಟೇವ್ಸ್ ಇನ್ ಸಿಂಗಿಂಗ್' – ಎಂಬರ್ಥ ಕೊಟ್ಟಿದ್ದಾರೆ. ಆದರೆ, ಇತ್ತೀಚೆಗೆ ನನಗೆ 'ತ್ರಿಸ್ಥಾನ'ದ ಅರ್ಥ ಥಟ್ಟನೆ ಹೊಳೆಯಿತು. ಬಸವಣ್ಣನ ''ತಾಳಮಾನ ಸರಿಸವನರಿಯೆ, ಓಜೆ ಬಜಾವಣೆ ಲೆಕ್ಕವನರಿಯೆ, ಅಮೃತಗಣ ದೇವಗಣವನರಿಯೆ''... ಎಂಬ ವಚನ ಛಂದೋಬದ್ಧ ರಚನೆಗಳ ನಿರಾಕರಣೆಯನ್ನು ಹೇಳುತ್ತಿದೆ. ಅಲ್ಲಮನ 'ತ್ರಿಸ್ಥಾನದ ನುಡಿಗಳು' ಎಂಬ ವಚನ ಕೂಡ ಛಂದೋಬದ್ಧ ರಚನೆಗಳ ನಿರಾಕರಣೆಯಾಗಿದೆ. ತ್ರಿಸ್ಥಾನವೆಂದರೆ ಮೂರು-ಮೂರು ಗಣಗಳಿಂದ ಕೂಡಿದ ನುಡಿಗಡಣ. ಅಕ್ಷರ ಛಂದಸ್ಸಿನಲ್ಲಿ 'ಯಮಾತಾರಾಜಭಾನಸಲಗಂ' – ಎಂಬ ಸೂತ್ರಗರ್ಭಿತವಾದ ಮೂರು-ಮೂರು ಅಕ್ಷರಗಳ ಗಣಗಳು, ಅಂಶ ಛಂದಸ್ಸಿನಲ್ಲಿ ಬ್ರಹ್ಮ-ವಿಷ್ಣು-ರುದ್ರ ಎಂಬ ಮೂರು ಗಣಗಳು, ಮಾತ್ರ ಛಂದಸ್ಸಿನಲ್ಲಿ ಮೂರು-ನಾಲ್ಕು-ಐದು ಮಾತ್ರೆಗಳ ಗಣಗಳು ಬಹು ಪ್ರಸಿದ್ಧವಾಗಿವೆ. ಇಂಥ ಛಂದೋಬದ್ಧವಾದ ರಚನೆಗಳೆಲ್ಲವೂ ತ್ರಿಸ್ಥಾನದ ನುಡಿಗಳು. ಸಮಗ್ರ ಛಂದಸ್ಸಿನ ಎಲ್ಲ ವೈವಿಧ್ಯಗಳನ್ನು ಒಂದೇ ಮಾತಿನಲ್ಲಿ 'ತ್ರಿಸ್ಥಾನದ ನುಡಿಗಳು' ಎಂದು ನಿರ್ದೇಶಿಸುತ್ತಿರುವ ಅಲ್ಲಮನ ಶಬ್ದದೊಳಗಣ ನಿಃಶಬ್ದ ಅಪೂರ್ವ ತೇಜದ ಮಾಂತ್ರಿಕ ವಿದ್ಯೆಯಾಗಿದೆ. ''ಕತ್ತಲೆ ಎಂಬುದು ಇತ್ತಲೆ ಅಯ್ಯ ಗುಹೇಶ್ವರನೆಂಬುದು ಅತ್ತಲೆ ಅಯ್ಯ'' – ಎಂಬಂತೆ, ತ್ರಿಸ್ಥಾನದ ನುಡಿಗಳು ಇತ್ತಿತ್ತಲಲ್ಲದೆ, ಅತ್ತಲಾರು ಬಲ್ಲರು, ಎಂಬ ಪ್ರಶ್ನೆಯಲ್ಲಿ ಅರಗಿಳಿಯಾಲಾಪ ಅಥವಾ ಗಿಳಿವಿಂಡು ಗೆಡೆಯುತ್ತಾ ನಿಜದುದಯದಿಂದ ದೂರಸಿಡಿದವರ ಅಜ್ಞಾನವನ್ನು ಬಯಲಿಗೆಳೆಯಲಾಗಿದೆ.

**ಅಕ್ಷರದ ಅಹಂಕಾರ**: ಮೌಖಿಕ ಪರಂಪರೆ ಮತ್ತು ಲಿಖಿತ ಪರಂಪರೆ ಎಂಬ ಸಂಸ್ಕೃತಿ ನದಿಯ ಎರಡು ದಡಗಳ ವಿಮರ್ಶೆ ಇಲ್ಲಿದೆ. ಮೌಖಿಕ ಪರಂಪರೆಯಲ್ಲಿ ಸಮಷ್ಟಿಪ್ರಜ್ಞೆ ಮತ್ತು ಲಿಖಿತ ಪರಂಪರೆಯಲ್ಲಿ ವ್ಯಷ್ಟಿಪ್ರಜ್ಞೆ ಎದ್ದುಕಾಣುವ ವ್ಯತ್ಯಾಸ. ಇದರಿಂದಾಗಿಯೇ ಮೌಖಿಕ ಪರಂಪರೆಯಲ್ಲಿ 'ನಾ ನಿಮ್ಮೊಳಗು' ಎಂಬ ವಿನಯವಿದ್ದರೆ, ಲಿಖಿತ ಪರಂಪರೆಯಲ್ಲಿ 'ನಾ ಬಲ್ಲೆ'ನೆಂಬ ಅಹಂಕಾರ ಇರುತ್ತದೆ. ವ್ಯಕ್ತಿಯಲ್ಲಿ 'ನಾನು' ಎಂಬ ಪ್ರಜ್ಞೆಯನ್ನು ಹುಟ್ಟುಹಾಕುವ ಅಕ್ಷರವೇ ಹೇಗೆ ಅಹಂಕಾರವಾಗಿ ಮಾರ್ಪಡುತ್ತದೆ ಎಂಬುದನ್ನು ಟಿ. ಪಿ. ಕೈಲಾಸಂ ಅವರ 'ಟೊಳ್ಳುಗಟ್ಟಿ' ಎಂಬ ನಾಟಕ ದೃಶ್ಯಾತ್ಮಕವಾಗಿ ನಿರೂಪಿಸಿದೆ. 'ದೀಪದ ಕೆಳಗೆ ಕತ್ತಲೆ' ಎಂಬಂತೆ ಅಕ್ಷರ ಸೂರ್ಯನೇ ಕ್ರಮೇಣ

ಅಕ್ಷರದ ಅಹಂಕಾರವನ್ನುಂಟುಮಾಡುವ ಬಗೆಯನ್ನು ಅಲ್ಲಮನು ಬಹುಖಚಿತವಾಗಿ ಮನಗಂಡಿದ್ದಾನೆ. ಮೌಖಿಕ ಪರಂಪರೆಯ ಎಷ್ಟೋ ವಿಚಾರಗಳು ಲಿಖಿತ ಪರಂಪರೆಗೆ ಬರುತ್ತಿದ್ದಂತೆಯೇ ಪರಿಷ್ಕರಣ ಕಾರ್ಯ ಆರಂಭವಾಗಿ, ಅರಿಯದ ಹಾಗೆ ಕೈತಪ್ಪು, ಕೈಚಳಕ, ಕೈವಾಡ ಸಂಭವಿಸಿ ಬಿಡುತ್ತದೆ. ಮೌಖಿಕ ಪರಂಪರೆಯನ್ನು ಆಧರಿಸಿದ ಲಿಖಿತ ಪಠ್ಯಗಳು-ಕಥನಗಳು-ನಾಟಕಗಳು ಸಮಷ್ಟಿ ಪ್ರಜ್ಞೆಯಿಂದ ದೂರ ಸಿಡಿದು ವ್ಯಷ್ಟಿಪ್ರಜ್ಞೆಯ ವಿಕಾರಗಳಿಗೆ ಎಡೆಕೊಟ್ಟಿರುವುದನ್ನು ಸಾಹಿತ್ಯದ ಇತಿಹಾಸದ ತುಂಬ ಮನಗಾಣಬಹುದು. ಇದನ್ನು ಅಲ್ಲಮಪ್ರಭು 'ವಾಗದ್ವೈತ' ಎಂಬ ಮಾತಿನಿಂದ ಕರೆದು ನಡೆ-ನುಡಿ ಬೇರೆ-ಬೇರೆಯಾಗಿರುವ ಟೊಳ್ಳು ಜೀವನ ಶೈಲಿಯನ್ನು ಭಕ್ತಿ-ಯುಕ್ತಿ-ಮುಕ್ತಿಯನ್ನು ಅರಿಯದ ಕಪಟಮಾರ್ಗವೆಂದು ನಿರೂಪಿಸಿದ್ದಾನೆ. ವಾದ-ಭೇದಗಳನ್ನೇ ಬಾಳಿನ ಉಸಿರಾಟ ಮಾಡಿಕೊಂಡು ಬಗೆ ಬಗೆಯ ವಾದ-ವಿವಾದಗಳನ್ನು ಹುಟ್ಟುಹಾಕುತ್ತಾ ಕಡೆಗೊಮ್ಮೆ ಮೃತ್ಯು ಸ್ವರೂಪಳಾದ ಮಾರಿಗೆ ಔತಣವಾಗಿ ಸತ್ತು 'ಹೋದರು' ಎಂಬುದನ್ನು ಈ ವಚನ ಕಣ್ಮುಂದೆ ನಿಲ್ಲಿಸುತ್ತದೆ.

**ಚಿತ್ರಗುಪ್ತರ ಕೈಯಪತ್ರ** : ತೆಲುಗಿನ ಮಹಾಕವಿ ಗುರ್ರಂ ಜಾಷುವ 'ಗಬ್ಬಿಲಮು' ಎಂಬ ಖಂಡಕಾವ್ಯವನ್ನು ರಚಿಸಿದ್ದಾರೆ. ದಲಿತ ಜೀವನದ ನೋವು-ಅವಮಾನ-ಬಡತನದ ಬವಣೆಗಳನ್ನು ಪರಮೇಶ್ವರನಿಗೆ ನಿವೇದನೆ ಮಾಡಿಕೊಳ್ಳುತ್ತಾ, ಮೇಘಸಂದೇಶದ ಶೈಲಿಯಲ್ಲಿ ಸಮದುಃಖಿಯಾದ ತೊಗಲು ಬಾವಲಿಯನ್ನು ದೂತನನ್ನಾಗಿ ಕಲ್ಪಿಸಿಕೊಂಡು ಬರೆದ ಖಂಡಕಾವ್ಯವೇ ಗಬ್ಬಿಲಮು. ಈ ಖಂಡಕಾವ್ಯದಲ್ಲಿ ಜಾಷುವ ನಮ್ಮ ದೇಶದ ಜಾತಿಪದ್ಧತಿ-ಅಸ್ಪೃಶ್ಯತೆಯ ದಾರುಣತೆಯನ್ನು ಪರಿಣಾಮಕಾರಿಯಾಗಿ ಬಿಂಬಿಸಿದ್ದಾರೆ. ನಾಲ್ಕು ವರ್ಣಗಳಿಂದ ಕೂಡಿರುವ ಹಿಂದೂಧರ್ಮದ ಸಾಮಾಜಿಕ ವ್ಯವಸ್ಥೆಯನ್ನು ನಾಲ್ಕು ಹೆಡೆಗಳಿರುವ ಹಿಂದೂ ಸರ್ಪಕ್ಕೆ ರೂಪಕ ಮಾಡುತ್ತಾ (= ನಾಲ್ಗು ಪಡಗಲ ಹೈಂದವ ನಾಗರಾಜು) ಇದು ದಲಿತನ ಗಾಳಿ ಸೋಕಿದರೆ ಸಾಕು, ಕೆರಳಿ ಬುಸುಗುಡುವುದೆಂದು ಹೇಳಿರುವುದು ಅನುಭವಿಸಿದ ಅವಮಾನದ ಅಭಿವ್ಯಕ್ತಿಯಾಗಿದೆ. ಅಲ್ಲಮನು ಹೇಳುತ್ತಿರುವ ಹಾಳೂರಿನಲ್ಲಿ ಜಾತಿಯ ವಿಷಸರ್ಪಗಳಿವೆ; ಅಷ್ಟೈಶ್ವರ್ಯಗಳಿಂದ ಬೀಗುತ್ತಿರುವ ಮದಗಜಗಳಿವೆ. ನಾನು 'ಮೇಲು' ಎಂಬ ಅಹಂಕಾರದಿಂದ ಅಟಮಟ ಕುಟಿಲ ಕುಹಕವೆಂಬ ಬಿರುಗಾಳಿ ಹುಟ್ಟಿ, ಜ್ಞಾನಜ್ಯೋತಿ ಕೆಟ್ಟು, ಹಿರಿಯರೆಲ್ಲ ತಾಮಸಕ್ಕೊಳಗಾಗಿ, ದೇಶವನ್ನೆಲ್ಲ 'ಹಾಳೂರು' ಮಾಡಿದ್ದಾರೆ (ಅಲ್ಲಮನ ವಚನ : ೩೫೧). ಇದನ್ನು ಮನಗಂಡ ಮಹಾತ್ಮರನೇಕರು ಹಿಂದು ಮುಂದುಗಳನ್ನು ಸಂಧಿಸಿ ನೋಡುವ ಕಾಲಜ್ಞಾನದಿಂದ ತಾಳ ಪತ್ರಗಳ ಮೇಲೆ ಕೈಯಾರೆ ಬರೆದಿಟ್ಟು ಹೋಗಿದ್ದಾರೆ. ಇದನ್ನು ತಿಳಿದು ನೋಡಿದರೆ ಮನುಷ್ಯರು ಹಾಳಾಗುವುದಿಲ್ಲ; ಬದಲಿಗೆ ಆ ಹಾಳೂರು ಹಾಳಾಗಿಹೋಗುತ್ತದೆ; ಮಾನವ ಕಲ್ಯಾಣದ ಸಿದ್ಧಿಯಾಗುತ್ತದೆ.

**ಹಿಂದು ಮುಂದಾಗಿ ನೋಡುವುದು** : ಕ್ರಿ.ಪೂ. ಮತ್ತು ಕ್ರಿ.ಶ. ಎಂಬ ಕಾಲಾನುಕ್ರಮಣಿಕೆಯ ಮೂಲಕ ನಾಗರಿಕತೆಗಳ ಉಗಮ-ವಿಕಾಸಗಳನ್ನು ಗ್ರಹಿಸುತ್ತಾ ಬಂದಿದ್ದೇವೆ. ಈ ರೂಢಿಗೆ ಒಗ್ಗಿಹೋದ ನಾವು ಸಕಲ ವಿಧವಾದ ವಸ್ತುವಿಷಯಗಳನ್ನು ಅನುಕ್ರಮವಾಗಿ ನೋಡುತ್ತಾ ಆದಿ-ಮಧ್ಯ-ಅಂತಗಳೆಂಬ ಸ್ವಯಂ ವಿರಚಿತ ಭ್ರಾಂತಿಗೆ ಒಳಗಾಗಿದ್ದೇವೆ. ಕಾಲವೆಂಬ ಕಣ್ಣಡಕವಿಲ್ಲದೆ ವಸ್ತುವಿಷಯಗಳನ್ನು ಗ್ರಹಿಸುವುದಕ್ಕೆ ಜನಪದ ಸಾಹಿತ್ಯ ಉತ್ತಮ ನಿದರ್ಶನ. ಲಿಖಿತ ಪರಂಪರೆಯಲ್ಲಿ ಲಭ್ಯವಿರುವ ಆಧಾರಗಳಿಂದಾಗಿ ವಸ್ತುವಿಷಯಗಳನ್ನು ಕಾಲಕ್ರಮದ ಸೋಂಕಿಗೊಳಪಡಿಸಿಯೇ ನೋಡುತ್ತೇವೆ. ಕಾಲಾನುಕ್ರಮಣಿಕೆ ಮತ್ತು ಕಥಾನುಕ್ರಮಣಿಕೆಗಳು ಅವಳಿ ಜವಳಿ ಇದ್ದಂತೆ! ಆಶ್ವಾಸಾನುಕ್ರಮಣಿಕೆ, ಸ್ಥಲಾನುಕ್ರಮಣಿಕೆ, ಪರಿಚ್ಛೇಧಾನುಕ್ರಮಣಿಕೆ ಮುಂತಾದವುಗಳೆಲ್ಲ ವಿಸ್ತರಣೆಗಳು ಮಾತ್ರ ! ಯಾವೊಂದು ಸಾಹಿತ್ಯ ಕೃತಿಯನ್ನೂ ಹೀಗೆ ಅನುಕ್ರಮವಾಗಿ ಯಾರೂ ಓದುವುದಿಲ್ಲ. ಕೈಲಾಸಪರ್ವತವನ್ನೇರುವ ಕಾರಿಕಾಲಮ್ಮೆಯ ತಲೆಕೆಳಗು ನಡೆ ಒಂದು ವಿಪರೀತ ಚರಿತ್ರ! ರಾಮಾಯಣ, ಮಹಾಭಾರತ, ವಚನಸಾಹಿತ್ಯ, ಮಲೆಗಳಲ್ಲಿ ಮದುಮಗಳು ಮುಂತಾದ ಕೃತಿಗಳಿಗೆ ಸಂಬಂಧಪಟ್ಟಂತೆ ಸಹೃದಯರ ಅಂತರಂಗದಲ್ಲಿ "ತಿರುಗುಮುರುಗು ಪಾದದ ಪರಿಷೆ" (=ಗೋ. ಕೃ. ಅಡಿಗ) ನಡೆಯುತ್ತಲೇ ಇರುತ್ತದೆ. ಮುದ್ರಿತ ಪುಸ್ತಕದ ಅನುಕ್ರಮಣಿಕೆಯನ್ನು ನಿರಾಕರಿಸುವ, ಮನಃಸ್ವೇಚ್ಛೆಯ ಓದುಗಳು ಅಥವಾ ಹಿಂದು ಮುಂದಿನ ನೋಟಗಳು ನಮ್ಮ ವಿಚಾರಗಳನ್ನು ಆಲೋಚನೆಗಳನ್ನು ರೂಪಿಸುತ್ತಿರುತ್ತವೆ. ಕವಿಯ 'ಮುಖೋದ್ಗತ'ವೆನ್ನಬಹುದಾದ ಸಾಹಿತ್ಯ ಕೃತಿ, ಸಹೃದಯರಲ್ಲಿ 'ಹೃದ್ಗತ'ವಾಗುತ್ತಾ ಮರು ಹುಟ್ಟು ಪಡೆಯುವುದೇ 'ಹೃದಯ ಸಂವಾದ' ಎನಿಸಿಕೊಂಡಿದೆ. ಸ್ಥಲಾನುಸಾರಿಯಾಗಿ ವಿಂಗಡಿಸಿ, ಸಂಪಾದಿಸಿಕೊಂಡಿರುವ ಇಡೀ ವಚನಸಾಹಿತ್ಯದ ಒಳಹೊಕ್ಕು ಹಿಂದು ಮುಂದಾಗಿ ನೋಡುವುದು ಅಥವಾ ಉಲ್ಟಾಪಲ್ಟಾ ಓದಿಕೊಳ್ಳುವುದು ಇಂದಿನ ಅಗತ್ಯ! ಸಂಸ್ಕೃತಿದತ್ತವಾದ ಮಾನವನಿರ್ಮಿತ ಜ್ಞಾನ ಪರಂಪರೆಯನ್ನೆಲ್ಲ ಹಿಂದು ಮುಂದಾಗಿ ನೋಡುವುದನ್ನು ಕಲಿತುಕೊಂಡರೆ, ಮನಸ್ಸು ಕಾಲ-ದೇಶಗಳ ಸಂಕೋಲೆಗಳಿಂದ ಬಿಡುಗಡೆ ಪಡೆದು ಸುಂದರ ಸ್ವೈರ ವಿಹಾರದಲ್ಲಿ ಮುಳುಗೇಳುತ್ತದೆ. ಇಲ್ಲಿ ಅಲ್ಲಮನು ಇಂಥ ನಿರಂಕುಶ ನೋಟವು ಈಗಳೆ ಸಾಧ್ಯವೆಂಬುದನ್ನು ತೋರಿದ್ದಾನೆ.

ಅಲ್ಲಮನ ವಚನಗಳೆಂದರೆ, ಬಹುಕ್ಲಿಷ್ಟವಾದುವು, ದುರವಗಾಹಿ, ನಾರಿಕೇಳ ಪಾಕದಂತೆ ಕಠಿಣವೆಂಬ ಅಭಿಪ್ರಾಯವು ವಿದ್ವಜ್ಜನ ವಲಯದಲ್ಲಿ ಜನಜನಿತವಾಗಿ ಬಿಟ್ಟಿದೆ. ಇದು ನಿಜದುದಯವಲ್ಲ! ಅಲ್ಲಮನ ವಚನಗಳನ್ನು ಸಾಂಪ್ರದಾಯಿಕ ಟೀಕುಗಳು ಮತ್ತು ವಿಮರ್ಶೆಯ ವಾಗ್‌ವಿಲಾಸಗಳಿಂದ ಗ್ರಹಿಸಲು ಹೊರಟಾಗ ತೊಡಕೆನಿಸಬಹುದು. ಗಗನಕ್ಕೆ ಗಗನವೇ ಸರಿಸಾಟಿ, ವಚನಕ್ಕೆ ವಚನವೇ ಮೀಟುಗೋಲು. ಸರಳವಾದ ವಚನಗಳಿಂದ ಸಂಕೀರ್ಣ ವಚನಗಳನ್ನು ನೋಡುವಂತೆ ಸಂಕೀರ್ಣವಾದ ವಚನಗಳಿಂದ ಸರಳ ವಚನಗಳನ್ನು ನೋಡಬೇಕು. ಆಗ ಸರಳ-ಸಂಕೀರ್ಣಗಳೆರಡೂ ಒಂದರೊಳಗೊಂದು ಬೆರೆತು ಹಿಂದು ಮುಂದಾಗಿ ನೋಡುವುದು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಬಸವಣ್ಣನ ನೂರಾ ಎಪ್ಪತ್ತೈದಕ್ಕಿಂತಲೂ ಅಧಿಕ ವಚನಗಳಿಗೆ ಅಲ್ಲಮನ ನೂರಾ ಎಪ್ಪತ್ತೈದಕ್ಕಿಂತಲೂ ಅಧಿಕ ವಚನಗಳನ್ನು ಸಂಯೋಜಿಸಿರುವ 'ಬಸವ-ಅಲ್ಲಮ ಸಂವಾದ'ವೆಂಬ ನವನವೀನ ಸಂಪಾದನೆ ಶೂನ್ಯ ಸಂಪಾದನೆಯ ಖಂಡಾಂಶದಂತೆ ತೋರುತ್ತದೆ. (ಹೆಚ್ಚಿನ ವಿವರಗಳಿಗೆ : 'ನಾ ನಿಮ್ಮೊಳಗು' - ವಿ. ಚಂದ್ರಶೇಖರ ನಂಗಲಿ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೧).

ಅಲ್ಲಮನ ವಚನಗಳು ಮಾತ್ರವಲ್ಲ, ಇಡೀ ವಚನ ಸಾಹಿತ್ಯವೇ ಜನಪದರ ನಡೆಮಾತುಗಳು, ನುಡಿಗಟ್ಟುಗಳಿಂದ ಮೂಡಿಬಂದಿರುವುದನ್ನು ಡಾ॥ ಎಲ್. ಬಸವರಾಜು (ಬೆಡಗಿನ ವಚನ ಪರಂಪರೆ) ಮತ್ತು ಪ್ರೊ॥ ಸುಧಾಕರ (ಬಿತ್ತನೆ ಹರ್ತನೆ) ಸವಿವರವಾಗಿ ತೋರಿಸಿಕೊಟ್ಟಿದ್ದಾರೆ. ಆದರೂ, ನಾನಿಲ್ಲಿ ಪುನರುಕ್ತಿಗೆ ಅವಕಾಶಕೊಡದಂತೆ ವಚನ ಸಾಹಿತ್ಯಕ್ಕೂ ಜನಪದ ಸಾಹಿತ್ಯಕ್ಕೂ ಇರುವ ತಾಯಿ-ಮಗು ಸಂಬಂಧವನ್ನು ವಿವರಿಸಲಿಚ್ಛಿಸುತ್ತೇನೆ.

ನಮಗೆ ಯಾವುದನ್ನು 'ಕಾಲ'ವೆಂದು ನಂಬಿಸುತ್ತಾ ಬರಲಾಗಿದೆಯೋ ಅಂಥ ಪರಿಮಿತ 'ಕಾಲ'ದ ಸೋಂಕಿಗೆ ಒಳಪಡದಂತೆ ಜನಪದ ಸಾಹಿತ್ಯ ಮೂಡಿಬಂದಿದೆ. ಜನಪದರ ಗಾದೆ ಮಾತುಗಳು, ಒಗಟುಗಳು ಯಾವ ಕಾಲಕ್ಕೆ ಸೇರಿವೆ, ಎಂಬ ಪ್ರಶ್ನೆಗೆ ನಾವು ನಿರುತ್ತರರಾಗುತ್ತೇವೆ. ಅಲ್ಲಮನ ವಚನಗಳು ಕೂಡ ಹೀಗೇ ಇವೆ. ಅಲ್ಲಮನ ವಚನಗಳನ್ನು ಕಾಲದ ಸೋಂಕಿಗೆ ಒಳಪಡಿಸಲು ಸಾಧ್ಯವಿಲ್ಲ. ವೇದ ಸುಳ್ಳಾದರೂ ಗಾದೆ ಸುಳ್ಳಾಗುವುದಿಲ್ಲ ಎಂಬ ಮಾತಿದೆ. ಜೀವನಾನುಭವದಿಂದ ಹುಟ್ಟಿದ ಗಾದೆಗಳು ಸುಸ್ಪಷ್ಟವಾದ ಬಿಂಬಜ್ಞಾನವನ್ನು ಹೊಂದಿರುತ್ತವೆ. ಕಸದ ತಿಪ್ಪೆಯ ಮೇಲೆ ಅತ್ತೆಯ ಮುಖ ಕಲ್ಪಿಸಿಕೊಂಡ ಸೊಸೆಯೊಬ್ಬಳು ತಾನು ಹೊತ್ತು ತಂದ ಕಸವನ್ನು ರಪ್ಪನೆ ಚೆಲ್ಲಿದಾಗ 'ಅತ್ತೆ ಮೇಲಿನ ಕೋಪ ತಿಪ್ಪೆ ಮೇಲೆ' ಎಂಬ ಗಾದೆ ಹುಟ್ಟಿಕೊಂಡಿದೆ. ರೈತಾಪಿ ಜನರು ಧಾನ್ಯಗಳನ್ನು ಗಾಳಿಗಾಗಿ ಕಾಯುತ್ತಾ ತೂರಿಕೊಳ್ಳುತ್ತಾರೆ. 'ಗಾಳಿ ಬಂದಾಗ ತೂರಿಕೊ' ಎಂಬ ಗಾದೆಗೆ ಕೃಷಿಯ ಕಾಯಕವೇ ಪ್ರೇರಣೆ. 'ನನಗೆ ಇಲ್ಲ ಗೀಚು ಬೆಲ್ಲ ನಿನಗೆಲ್ಲಿ ತರ್‍ಲಿ ನೆಕ್ಕು ಬೆಲ್ಲ' – ಎಂಬ ಗಾದೆಗೆ ಆಲೆಮನೆಯೇ ಜನ್ಮಭೂಮಿ. ಹೀಗೆ, ಪ್ರತಿಯೊಂದು ಗಾದೆಯೂ ಜೀವನಾನುಭವ ಅಥವಾ ಬಿಂಬಜ್ಞಾನವನ್ನು ಪಡೆದಿರುತ್ತದೆ. ವಚನಗಳಲ್ಲಿ ಗಾದೆ ಮಾತುಗಳ ನೇರ ಬಳಕೆಯಿದೆ. ಅಂತೆಯೇ ಜೀವನಾನುಭವದ ಬಿಂಬಜ್ಞಾನವಿದೆ. ಉದಾಹರಣೆಗೆ, ಉಣ್ಣೆ ಕೆಚ್ಚಲೊಳಿದ್ದು ಉಣ್ಣದದು ನೊರೆವಾಲು, ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ, ಹೊರಿಸಿಕೊಂಡು ಹೋದ ನಾಯಿ ಮೊಲನೇನ ಹಿಡಿವುದಯ್ಯ, ಬೆವಸಾಯವ ಮಾಡಿ



ಮನೆಯ ಬೀಯಕ್ಕೆ ಬತ್ತವಿಲ್ಲದಿದ್ದಡೆ ಆ ಬೆವಸಾಯದ ಗೊಡವೆ ಏತಕಯ್ಯ – ಮುಂತಾದ ವಚನಗಳಲ್ಲಿರುವ ಬಿಂಬಜ್ಞಾನ ಬರಿಯ ಕಲ್ಪನಾವಿಲಾಸವಲ್ಲ!

ಒಗಟುಗಳು ಕೂಡ ಕಲ್ಪನಾವಿಲಾಸವಲ್ಲ. ಒಗಟುಗಳಲ್ಲಿರುವ ಬಿಂಬಜ್ಞಾನವನ್ನು ಸಾಂಕರ್ಯ ಮಾರ್ಗ ಅಥವಾ ಕಲಬೆರಕೆಯ ದಾರಿ ಎಂದು ಕರೆಯಬಹುದು. ಉದಾಹರಣೆಗೆ, ಕತ್ತಲು ಮನೆಯಲ್ಲಿ ಕತ್ತಿವರಸೆ (= ಕೊಟ್ಟಿಗೆಯಲ್ಲಿ ಎಮ್ಮೆ ಬಾಲದ ಬೀಸು ಚಲನೆ). ಒಂದು ಅನುಭವದ ಚಹರೆಗಳನ್ನು ಅಳಿಸಿ ಹಾಕಿ, ಮತ್ತೊಂದು ಅನುಭವದ ಚಹರೆಗಳನ್ನು ವರ್ಣಿಸುತ್ತಾ ಭಿನ್ನ ವಿಷಯ ಪ್ರತಿಪಾದನೆ ಮಾಡುವುದನ್ನು ಒಗಟುಗಳಲ್ಲಿ ಮನಗಾಣುತ್ತೇವೆ. ಅಲ್ಲಮನ ಬಹುತೇಕ ವಚನಗಳಲ್ಲಿ ಈ ಬಗೆಯ ಭಿನ್ನ ವಿಷಯ ಪ್ರತಿಪಾದನೆಯಿದೆ :

**ಜನಪದ** : ಕೈಯುಂಟು ಕಾಲಿಲ್ಲ
ಕೊರಳುಂಟು ತಲೆಯಿಲ್ಲ
ದೇಶವೆಲ್ಲ ತಿರುಗುವುದು
ಕೋಣೆಯೊಳಗೆ ಅಡಗುವುದು (= ಅಂಗಿ)

**ಅಲ್ಲಮೋಕ್ತ** : ತಲೆಯಿಲ್ಲದ ಮೃಗ ಒಡಲಿಲ್ಲದೆ ಆಹಾರವ ಕೊಂಡಿತ್ತು.
ಹೆಜ್ಜೆಯಿಲ್ಲದೆ ಹರಿಯಿತ್ತು
ಅದ ಶುದ್ಧಿಯ ಮಾಡ ಹೋದಾತನಿನ್ನೂ ಮರಳನು
ವೆಜ್ಜವಿಲ್ಲದ ಮಣಿಯ ದಾರವಿಲ್ಲದೆ ಪವಣಿಸುವ
ಗೊಗೇಶ್ವರ, ನಿಮ್ಮ ಶರಣನ ಪರಿಯ ನೋಡಾ. (೮೧೧)

ಒಡಲುಳ್ಳ ಆಹಾರ, ಹೆಜ್ಜೆಯುಳ್ಳ ಹರಿದಾಟ, ಚಿತ್ತ ಶುದ್ಧಿಗಾಗಿ ತೀರ್ಥಯಾತ್ರೆ, ವೆಜ್ಜವುಳ್ಳ ಜಪಮಣಿ ಸರವನ್ನು ಕೈಯಲ್ಲಿ ತಿರುಗಿಸುತ್ತಾ ಧ್ಯಾನ ಮಾಡುವುದು ಇವೆಲ್ಲ ಲೋಕ ಸಹಜವಾದ ನಡೆ-ನುಡಿಗಳು. ಅಲ್ಲಮನ ಪ್ರಕಾರ ಶರಣನೆಂದರೆ ನಡೆಗೆಟ್ಟ ನಡೆಯ ನಡೆಯಬೇಕು, ನುಡಿಗೆಟ್ಟ ನುಡಿಯ ನುಡಿಯಬೇಕು. ಅಲ್ಲಮನ ವಚನ ನಿಜ ಶರಣನ ವಿಪರೀತ ಚರಿತ್ರದ ರೂಪಕ. ಇದನ್ನರಿಯದೆ, ಮೇಲಿನ ಬೆಡಗಿನ ವಚನಕ್ಕೆ ಮಱೀಯವಾದ ಅಥವಾ ಮತೀಯವಾದ ಅರ್ಥಗಳನ್ನು ಆರೋಪಿಸಿ ಮಾಡುವ ಟೀಕುಗಳು, ವ್ಯಾಖ್ಯಾನಗಳು ನಿರರ್ಥಕವಾಗುತ್ತವೆ. ಅಲ್ಲಮನ ವಚನಗಳನ್ನು ಮುಕ್ತವಾಗಿ ಗ್ರಹಿಸಬೇಕು ಎನ್ನುವವರು ಮೊದಲಿಗೆ, ಸಾಂಪ್ರದಾಯಿಕವಾದ ಟೀಕುಗಳು ಮತ್ತು ವಿದ್ವತ್‌ಪೂರ್ಣ ವ್ಯಾಖ್ಯಾನಗಳನ್ನು ವರ್ಜಿಸಬೇಕಾಗಿದೆ. ವಚನ ಸಾಹಿತ್ಯವೆಂಬ ಬೆಳುದಿಂಗಳಿನಿಂದ ಅಲ್ಲಮನ ವಚನ ಚಂದ್ರಿಕೆಯನ್ನು ಗ್ರಹಿಸುವುದು ಬಸವರಾಜ ಮಾರ್ಗವಾಗಿದೆ.

**ವಿ. ಚಂದ್ರಶೇಖರ ನಂಗಲಿ**
ನಂ. ೧೬, 'ಶ್ರೀಗೌರಿ', ೪ನೇ ಕ್ರಾಸ್, ಕನಕನಗರ, ಹೊಸಕೋಟೆ-೫೬೨೧೧೪, ಬೆಂಗಳೂರು ಗ್ರಾಮಾಂತರ ಜಿಲ್ಲೆ

## ನಕ್ಷತ್ರಗಳ ಜೀವನ ಚರಿತ್ರೆ

ಮಿಣ ಮಿಣ ಮಿಣ ಮಿಣ ಮಿನುಗುತಲಿರುವ ನಕ್ಷತ್ರ
ಹೇಳಲೆ ನಿನ್ನಯ ಹುಟ್ಟಿನ ಗುಟ್ಟನು
ಮಿಣ ಮಿಣ ಮಿಣ ಮಿಣ ಮಿಂಚುತಲಿರುವ ನಕ್ಷತ್ರ
ನಿನಗೂ ಇದೆ ನಮ್ಮಂತೆಯೇ ಜೀವನ ಚಕ್ರ ॥೩॥

ಗೆಲಕ್ಸಿಯಲ್ಲಿನ ಹೈಡ್ರೊಜನ್ ಹೀಲಿಯಂಗಳ ಒಮ್ಮಿಲನ
ಸಾರ್ವುದು ತಾರೆಗಳ ಆಗಮನ
ತನ್ನದೆ ಗುರುತ್ವದಿಂ ಕುಗ್ಗುವ ಅನಿಲಗಳ ಮಿಶ್ರಣ
ಅದಾಗಲೆ ಆದಿ ನಕ್ಷತ್ರದ ಆಗಮನ ॥೩॥

ಆದಿನಕ್ಷತ್ರವು ಕುಗ್ಗುತ ಕುಗ್ಗುತ
ಕಳೆವುದು ಪಲ ಮಿಲಿಯನ್ ವರುಷ
ಹೈಡ್ರೊಜನ್ ಬೀಜಗಳ ಸಮ್ಮಿಲನ
ಹೀಲಿಯಂ ಕಣಗಳ ಉತ್ಪಾದನಾ
ಅಪಾರ ಶಕ್ತಿಯ ವಿಕಿರಣಗಳ ಒತ್ತಡವು
ತಡೆವುದು ಗುರುತ್ವ ಕುಸಿತವನು
ತರುವುದು ನಕ್ಷತ್ರಕ್ಕೆ ಸ್ಥಿರಸ್ಥಿತಿಯನು ॥ಮಿಣ ಮಿಣ॥

ಹೀಲಿಯಂ ಅನಿಲವು ಕಾಲಾಂತರದಲಿ
ತುಂಬಿಕೊಳ್ಳುವುದು ನಕ್ಷತ್ರ ಗರ್ಭದಲಿ
ಒತ್ತಡದಲಿ ಆಗುವುದು ಕಡಿತ
ತನ್ನದೆ ಗುರುತ್ವದಿಂ ತಾರೆಯಾ ಕುಸಿತ
ಆದರೂ, ನಡೆವುದು ಹೊರಗಿನ ಚಿಪ್ಪಲಿ ಹೈಡ್ರೊಜನ್ ಸಮ್ಮಿಲನ

ಕೆಂಪು ದೈತ್ಯದ ಮುಪ್ಪಿನ ವಿಶ್ವದರ್ಶನ ॥೩॥
ಕೊನೆಯಲಿ ಉಳಿವುದು ನಕ್ಷತ್ರಗರ್ಭ
ಮಸುಕಲಿ ಹೊಳೆವುದು ಶ್ವೇತಕುಬ್ಜ ॥೩॥

ಗುರುತ್ವಾಕರ್ಷಣ ಬಲದಿಂ ಕುಸಿಕುಸಿದು
ನವನಕ್ಷತ್ರಗಳ ಸೃಷ್ಟಿಗೆ ವೇಷ್ಠಿಯನೊದಗಿಸುವ
ಬೃಹತ್ ಚೇತನ ಮಹಾನವ್ಯ ಸೂಪರ್‌ನೋವ ॥ಮಿಣ ಮಿಣ॥

ಉಳಿಯುವ ನಕ್ಷತ್ರಗರ್ಭ ಗುರುತ್ವದಿಂ ಕುಸಿಕುಸಿದು
ಪಡೆವುದು ಅಲ್ಪಗಾತ್ರ ಅಗಾಧಸಾಂದ್ರ
ಕರೆಸಿಕೊಳುವುದು ನ್ಯೂಟ್ರಾನ್ ನಕ್ಷತ್ರ ॥೩॥
ರೇಡಿಯೋ ಅಲೆಗಳ ಹೊರಸೂಸುತ

ಕುಸಿಯುತ ಕುಸಿಯುತ ನ್ಯೂಟ್ರಾನ್ ನಕ್ಷತ್ರ
ಅತಿಸಾಂದ್ರತೆಯ ಘಟ್ಟವ ತಲುಪುತ
ಬೆಳಕನು ಬಿಡದೆ ಅಗೋಚರವೆನಿಸುತ
ಕಪ್ಪು ಕುಳಿಯಾಗುವುದನವರತ ॥ಮಿಣ ಮಿಣ॥

**ವೈದೇಹಿ**
'ಪುನರ್ವಸು', ನವಿಲು ರಸ್ತೆ,
ಕುವೆಂಪುನಗರ, ಮೈಸೂರು - ೫೭೦ ೦೨೩

# ಸಂತಾನಹೀನತೆಗೆ ಕಾರಣವಾಗುತ್ತಿದೆ

# ದಢೂತಿತನ !



ಒಬ್ಬ ವ್ಯಕ್ತಿಯ ದೇಹದ ತೂಕದಲ್ಲಿ ಶೇಕಡ 30ರಷ್ಟು ಕೊಬ್ಬೇ ಇದ್ದರೆ ಅಂಥವರನ್ನು ದಢೂತಿ ಅಥವಾ ಬೊಜ್ಜು ದೇಹಿಗಳು ಎನ್ನಬಹುದು. ಹೃದಯದ ತೊಂದರೆಗಳು, ಅಧಿಕ ರಕ್ತದೊತ್ತಡ, ಮಧುಮೇಹ, ಸಂಧು ನೋವು ಮೊದಲಾದ ಸಮಸ್ಯೆಗಳಿಗೆ ಬೊಜ್ಜು ಕಾರಣವಾಗುತ್ತದೆ ಎನ್ನುವುದು ಹಳೆಯ ಮಾತು. ಆದರೆ ಬೊಜ್ಜಿನ ದುಷ್ಪರಿಣಾಮ ಇಷ್ಟಕ್ಕೇ ನಿಂತಿಲ್ಲ. ಸಂತಾನಹೀನತೆಗೂ ಅದು ಪ್ರಮುಖ ಕಾರಣವಾಗುತ್ತಿದೆ. ಬೊಜ್ಜಿನಿಂದ ಸಂತಾನಹೀನತೆಯಂಥ ಸಮಸ್ಯೆ ಕಾಣಿಸಿಕೊಳ್ಳುವುದು ಮಹಿಳೆಯರಲ್ಲಿ ಮಾತ್ರ ಎನ್ನುವ ತಿಳಿವಳಿಕೆ ಈತನಕ ಇತ್ತು. ಬೊಜ್ಜು ದೇಹಿ ಪುರುಷರಲ್ಲೂ ಸಂತಾನ ಸಮಸ್ಯೆ ಕಂಡುಬರುತ್ತದೆ ಎಂಬುದನ್ನು ಇತ್ತೀಚಿನ ಸಂಶೋಧನೆ ಸಾಬೀತುಪಡಿಸಿದೆ.

ಅಂಡಾಶಯ ಹಾಗೂ ಆಡ್ರಿನಲ್ ಗ್ರಂಥಿ ಹೀಗೆ ಎರಡು ಮೂಲಗಳಿಂದ ದೇಹಕ್ಕೆ ಈಸ್ಟ್ರೋಜನ್ ಹಾರ್ಮೋನು ಸರಬರಾಜಾಗುತ್ತದೆ. ಬೊಜ್ಜುದೇಹಿಗಳಲ್ಲಿ ಈ ಗ್ರಂಥಿಗಳ ಕಾರ್ಯ ಏರುಪೇರಾಗುವುದೇ ಸಂತಾನಹೀನತೆಗೆ ಮುಖ್ಯ ಕಾರಣ.

ಋತುಚಕ್ರದ ಕ್ರಮಬದ್ಧತೆ ಮೇಲೂ ಕೆಲವು ತೊಂದರೆಗಳನ್ನು ಪತ್ತೆ ಮಾಡುವುದು ಸಾಧ್ಯ. ಋತುಚಕ್ರ ಸರಿಯಾಗಿಲ್ಲದಿದ್ದರೆ ಏನು...

- ಜನಿಸುವ ಮಗುವಿನ ತೂಕದಲ್ಲಿ ಏರುಪೇರು.
- ಅವಧಿ ಪೂರ್ವ ಹೆರಿಗೆ ಆಗಬಹುದು.
- ಸಹಜ ಹೆರಿಗೆ ಬದಲು ಸಿಸೇರಿಯನ್‌ಗೆ ಒಳಗಾಗುವ ಸಾಧ್ಯತೆ ಹೆಚ್ಚು.

ಇಂಥ ತೊಂದರೆದಾಯಕ ಬೊಜ್ಜು ಕರಗಿಸಿಕೊಳ್ಳಲು, ಬೊಜ್ಜಿನಿಂದ ದೂರವಿರಲು ಇಂದು ಹಲವು ರೀತಿಯ ದಾರಿಗಳಿವೆ. ಸಾಮಾನ್ಯವಾದುವು :

**ಪಥ್ಯ ಮತ್ತು ವ್ಯಾಯಾಮ**

ಸ್ಯಾಚುರೇಟೆಡ್ ಫ್ಯಾಟ್, ಸಕ್ಕರೆಯುಕ್ತ ಆಹಾರ ಸೇವನೆ ಬಿಡಿ. ಹಸಿ ತರಕಾರಿ, ಸೊಪ್ಪು, ಹಣ್ಣುಗಳಂಥ ಆಹಾರವನ್ನು ಜಾಸ್ತಿ ಸೇವಿಸಿ. ನಿತ್ಯವೂ ವ್ಯಾಯಾಮ ಮಾಡಿ. ವಾಕಿಂಗ್, ಏರೋಬಿಕ್ಸ್ ಇವೆಲ್ಲ ತೂಕ ಇಳಿಸಲು ಸಹಕಾರಿ.

**ಪುರುಷರಲ್ಲಿ ತೊಂದರೆಗಳು**

ಪುರುಷನೊಬ್ಬನ ದೇಹದ ತೂಕಕ್ಕೂ ಹಾಗೂ ಆತನ ವೀರ್ಯಾಣುಗಳ ಗುಣಮಟ್ಟಕ್ಕೂ ಸಂಬಂಧ ಇದೆ. ಯಾರು ಅತಿಯಾದ ತೂಕ ಹೊಂದಿರುತ್ತಾರೋ ಅಂಥವರ ವೀರ್ಯಾಣುಗಳ ಗುಣಮಟ್ಟ ಕಳಪೆಯಾಗಿರುತ್ತದೆ ಎಂಬುದು ಸಂಶೋಧನೆಗಳಿಂದ ದೃಢಪಟ್ಟಿದೆ. ಇಂಥ ವ್ಯಕ್ತಿಗಳಲ್ಲಿ ವೀರ್ಯದ ಪ್ರಮಾಣವೂ ಗಣನೀಯವಾಗಿ ಕಡಮೆಯಾಗುತ್ತದೆ ಎನ್ನುತ್ತಾರೆ ಸಂಶೋಧಕರು. ಏಕೆ ಹೀಗೆ ?

ಪುರುಷರ ಲೈಂಗಿಕಾಂಗಗಳ ಬೆಳವಣಿಗೆ, ಲೈಂಗಿಕ ಸ್ವಭಾವಗಳ ಮೇಲೆ ಪ್ರಮುಖ ಪರಿಣಾಮ ಬೀರುವುದು ಟೆಸ್ಟೋಸ್ಟಿರಾನ್ ಹಾರ್ಮೋನ್. ಸಂಶೋಧಕರು ಹೇಳುವ ಪ್ರಕಾರ ಟೆಸ್ಟೋಸ್ಟಿರಾನ್ ಹಾರ್ಮೋನ್‌ಗಳು ಮುಖ್ಯವಾಗಿ ಬಿಡುಗಡೆಯಾಗುವುದು ವೃಷಣದಲ್ಲಿನ ಪ್ರಮುಖ ಕಾರಣಗಳಿಂದ. ಇದಕ್ಕೆ ಪಿಟ್ಯೂಟರಿ ಗ್ರಂಥಿಯಿಂದ ಬಿಡುಗಡೆಯಾಗುವ ಎಲ್‌ಎಚ್ ಹಾರ್ಮೋನ್‌ಗಳ ಉತ್ತೇಜನಬೇಕು. ಚಟುವಟಿಕೆಯಿಂದ ಇರುವವರು, ನಿರಂತರ ದೈಹಿಕ ಶ್ರಮ ವಹಿಸುವವರಲ್ಲಿ ಮಾತ್ರ ಇಂಥ ಹಾರ್ಮೋನ್‌ಗಳ ಕಾರ್ಯ ಸರಿಯಾಗಿ ಆಗಲು ಸಾಧ್ಯ. ಅಂದರೆ ಒಟ್ಟಾರೆಯಾಗಿ, ಬೊಜ್ಜು ದೇಹಿಗಳಲ್ಲಿ ದೈಹಿಕ ಚಟುವಟಿಕೆ ಕಡಿಮೆ ಇರುವುದು ಸಂತಾನಹೀನತೆಗೆ ಮುಖ್ಯ ಕಾರಣ. ಬೊಜ್ಜು ಬಂದವರಲ್ಲಿ ಲೈಂಗಿಕ ಆಸಕ್ತಿ ಕೂಡ ಮೊದಲಿಗಿಂತ ಕಡಿಮೆಯಾಗುವುದು ಇದು ಉತ್ತಮ ಉದಾಹರಣೆ ಎನ್ನುತ್ತಾರೆ. ಬೊಜ್ಜು ಕ್ಲಿನಿಕ್, ವಿಕ್ರಂ ಆಸ್ಪತ್ರೆ, ಮಿಲ್ಲರ್ಸ್ ರಸ್ತೆ, ಬೆಂಗಳೂರು. ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ: ಡಾ|| ಟುಲಿಪ್ (080-4500 4500).

ನಾನಾ ಆಹಾರಗಳ ಮೂಲಕ ದೇಹದೊಳಗೆ ಸೇರುವ ಜಿಂಕ್ ಅಂಶ ಕೂಡ ಮನುಷ್ಯನ ಲೈಂಗಿಕ ಚಟುವಟಿಕೆ ಮೇಲೆ ಪರಿಣಾಮ ಬೀರುತ್ತದೆ. ಕೂದಲು, ಚರ್ಮ ಮೊದಲಾದ ಅಂಗಗಳ ಆರೋಗ್ಯ ಕಾಪಾಡಿಕೊಳ್ಳುವಲ್ಲಿ, ವೀರ್ಯಾಣುಗಳ ಗುಣಮಟ್ಟ ಹಾಗೂ ಗರ್ಭ ಧರಿಸುವ ಸಾಮರ್ಥ್ಯ ಕಾಯ್ದುಕೊಳ್ಳುವಲ್ಲಿ ಜಿಂಕ್ ಪ್ರಮುಖ ಪಾತ್ರವಹಿಸುತ್ತದೆ. ಇವರಲ್ಲಿ ವೀರ್ಯದ ಗುಣಮಟ್ಟ ಕುಸಿಯುವುದು ಸಾಮಾನ್ಯ. ಬೇಳೆ-ಕಾಳುಗಳು, ಬೀಜಗಳು ಸಮುದ್ರ ಚಿಪ್ಪು, ಮಾಂಸಾಹಾರ ಸೇವಿಸುವುದರಿಂದ ದೇಹದ ಹೆಚ್ಚಿನ ಜಿಂಕ್ ಅಂಶ ದೊರೆಯುತ್ತದೆ.

ಇತ್ತೀಚೆಗೆ ಅತಿ ಬೊಜ್ಜು ನಿವಾರಣೆಗಾಗಿ ಕೆಲವು ತರಹದ ಉದರದರ್ಶಕ ಶಸ್ತ್ರ ಚಿಕಿತ್ಸೆಗಳು ಬಂದಿವೆ. ಇಂತಹ ಶಸ್ತ್ರ ಚಿಕಿತ್ಸೆಯನ್ನು ಕೇವಲ 'ಅರ್ಧ ಅಥವಾ ಒಂದು ಸೆಂಟಿ ಮೀಟರ್ ಗಾತ್ರದ ಚಿಕ್ಕ ರಂಧ್ರಗಳ ಮೂಲಕ ಮಾಡಲಾಗುತ್ತದೆ. ಇದರಿಂದ 30ರಿಂದ 80 ಕೆಜಿಯವರೆಗೂ ತೂಕವನ್ನು ಕಡಿಮೆ ಮಾಡಿಕೊಳ್ಳಲಾಗುವುದು. ಹೀಗೆ ತೂಕ ಕಡಿಮೆಯಾದ ನಂತರ ಹಾರ್ಮೋನುಗಳು ಸಹಜ ಸ್ಥಿತಿಗೆ ಬಂದು, ಋತುಚಕ್ರ ಸಾಮಾನ್ಯವಾಗಿ ಸಂತಾನಕ್ಕೂ ಸಹಾಯಮಾಡುವುದು. ಇಂತಹ ಒಂದು ಶಸ್ತ್ರ ಚಿಕಿತ್ಸೆಯಾದ ನಂತರ, ಒಂದು ವಾರದ ಬಳಿಕ ಎಲ್ಲ ಕೆಲಸ ಮಾಡುವ ಸ್ಥಿತಿಗೆ ಮರಳಬಹುದು. ಕೇವಲ 3 ದಿನ ಆಸ್ಪತ್ರೆಯಲ್ಲಿ ದಾಖಲಾಗಬೇಕಾಗುವುದು. ಇಂತಹ ಶಸ್ತ್ರ ಚಿಕಿತ್ಸೆಯಿಂದ ಬಂಜೆತನ ನಿವಾರಣೆಯಾಗುವುದಲ್ಲದೆ, ಬೊಜ್ಜಿನಿಂದ ಬರುವಂತಹ ಮಧುಮೇಹ, ರಕ್ತದೊತ್ತಡ ಮತ್ತಿತರ ಖಾಯಿಲೆಗಳ ನಿವಾರಣೆ ಮಾಡಿಕೊಳ್ಳಬಹುದು.

**- ಡಾ|| ರಮೇಶ್ ಎಂ., ವಿಕ್ರಂ ಆಸ್ಪತ್ರೆ, 98450 06123**
**ಡಾ|| ಟುಲಿಪ್, ವಿಕ್ರಂ ಆಸ್ಪತ್ರೆ, 98453 74457**

**ಜಾಹೀರಾತು**

# ಮೈ ದೇವರ ಪರ

ಎಟ್ಟೆ ಬರ ಅಷ್ಟಾಗಿ ಸೋಕಾಡದೆ
ವರ್ಷಗಟ್ಟಲೆ ಸೊರಗಿದ 'ಪರಕ್ಕೆ'
ನಸೀಬು ಖುಲಾಯಿಸಿ
ಬೋರಪ್ಪ ಈರಪ್ಪಗಳ ಮೇಲೆ
ಕಾರಪ್ಪ ಉರಿಯಪ್ಪ ದೇವರು:
ಮಳೆ ಬೆಳೆ ಕಾಯಿಲೆ ಕಸಾಲೆ
ಲಾಭನಷ್ಟ ಕರಮರಿಯ ಕಣಿಗೆ
ಊರ ನಡುರಂಗದಲಿ
ಕೇರಿಕೇರಿಯ ನೆರೆಯ
ಸಿರಿಸಂಪತ್ತು ಮಡುಗಟ್ಟಿ

ಕಾದ ಹರೆದೋಣು ತಮಟೆಗೆ -
ಹೊಸ ಬಟ್ಟೆ ಪಡ್ಡೆಗಳ ಸುಮ್ಮಾನ
ಹಸೆ ಜೋಡಿಗಳ ರಸರೋಮಾಂಚನ !

ಕೋಳಿಕುರಿ ಘಮಲು :
ಬಂಧು ಬಳಗದ ಮೂಗಿಗೆ !
ಬಿಟ್ಟಿ ನಶೇ : ಶೀಶೆ ಮೂಸಿದ
ಗಾಳಿಗರಾವಿಗೆ !

ತುಂಬಿ ತುಳುಕುವ ಕನಸು
ಪುಳಿಚಾರು ಪೂಜಾರಿಯ
ಗೊಪ್ಪೆ ಜೋಳಿಗೆಗೆ ...

* * *

ತನಿತಂಪು ಇನಿಗಂಪು ಹೊತ್ತು
ಅಲೆಮಾರಿ ಗಾಳಿ ಜತೆ
ದೇವದೂತನ ಹಾಗೆ
ಎಲ್ಲಿಂದಲೋ ಬಂದು
ಮನೆಮನೆಯ ಗೆದ್ದು
ನೆಲೆ ನಿಂತ ಶೀಲವಂತನ
ಶಿಲೆಗದ್ದುಗೆಯ ಮೊದಲ
ಪೂಜೆಗೆ -
ಮೊಟ್ಟಮೊದಲ ಸಲ
ರೂಢಿ ಮುರಿದೆದ್ದ

ಕಿರಿಕುಲದ ಪಟ್ಟು:
ತೊಡೆತೀಡಿ ಹೊಸೆದ ಹುರಿ
ಕಡುಪು ಕುಣಿಕೆ ಜೀರಿ
ಹುಂಬಕೊಂಬುಗಳ ತಲೆ ತುಂಬ

ಹುಳುವಾಡಿ
ಕುಲಕುಲದ ಗುದ್ದು ಮುರಿ !
ಕತ್ತಿ ಮಸೆತ, ಮಸ್ತಿ ಗಜ ಕುಸ್ತಿ !

ಹಳೆ ಹುತ್ತಗಳು ಹೆಡೆಯಾಡಿ
ಕಟ್ಟೆಯ ಜಾಗ, ಡಬ್ಬಿ ಕಾಣಿಕೆ
ವಶಕ್ಕೆ
ಹುಲಿಸಿಂಹ ತೋಳಗಳ
ಘೀಳು ಘರ್ಜನೆ ಊಳು !

ನೋಡ ನೋಡುತ್ತಿದ್ದಂತೆ
ಹಾಡು ಹಗಲಿಗೆ ಕಾಡುಗತ್ತಲೆ
ಕವಿದು
ಬಾನಂಗಳ ಸೀಳಿದ
ಸಂಚು ಹೊಂಚಿನ ಮಿಂಚಾಡಿ
ಕಂಚಿನ ಸಿಡಿಲರಗಿ
ಕತ್ತಿ ದಡಿಕಣೆಗಳ ಜಡಿಮಳೆಗೆ -
ಚೆಲ್ಲಾಪಿಲ್ಲಿ : ಕಾಯಿ ಕರ್ಪೂರ
ಮಡ್ಲಕ್ಕಿ !
ಚಿಂದಿ ಚಿತ್ರಾನ್ನ ಸಿಂಗಾರದ
ಕಳಸ ಪಲ್ಲಕ್ಕಿ !
ತುಂಬಿ ತುಳುಕಿತು ಮೋರಿ
ತರಿದ ತಲೆ ಕಾಲು ಕಾರಿ !

* * *

ಹೀರೆಹಿಗ್ಗಿನ ಸಿರಿ ಸುಗ್ಗಿ ಕಣದಲ್ಲಿ
ಹೆಪ್ಪುಗಟ್ಟಿದ ಮಸಣದ ಗಪ್ಪು!
ಹೊಗೆ ಬಾನಿನ ತುಂಬ



ಹದ್ದು ಕಾಗೆಯ ಹಿಂಡು !
ಬೆಂದ ನೆಲ ಕಕ್ಕಿ ಉಕ್ಕೆದ್ದ
ಉರಿಮಾರಿ ಧಗೆ !

ನಿಂತು ಕುಂತಲ್ಲೆ ಬಿಕ್ಕಿದವು
ನಡೆಯಲಾರದ ಗುಡಿಯ ದೇವರು !

ಮಲಗಿದಲ್ಲೆ ಮುಲುಗಿದನು
ಯಾರ ಮೈಮೇಲೂ ಬಾರದ
ಗದ್ದಿಗೆ ಅಯ್ಯ !

**ಬಿ. ರಾಜಣ್ಣ**
ನಂ. ೧೩೩, ೮ನೇ 'ಎ' ಮುಖ್ಯರಸ್ತೆ, ೪ನೇ ಹಂತ, ೪ನೇ ಬ್ಲಾಕ್
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯



ಬಿ. ಶ್ರೀನಿವಾಸ್

# ಕಾಣದಾಯಿತೋ ಊರುಕೇರಿ...

ಮುಂಜಾನೆ ಕಣ್ಣು ತೆರೆದಾಗ ತೊನ್ನು ಹತ್ತಿದ ಮುದುಕರಂತೆ ಯಾವುದೋ ನಿಗೂಢ ರೋಗಕ್ಕೆ ತುತ್ತಾದವರಂತೆ ತೋರುವ ಗುಡ್ಡಗಳು, ಡಾಕ್ಟರಿಗೆ ತೋರಿಸಿ ಆರೈಕೆ ಮಾಡಿಸಿಕೊಳ್ಳಲು ಮಕ್ಕಳಿಲ್ಲದೆ ಅನಾಥರಂತೆ ರೋದಿಸುತ್ತಾ ಕುಳಿತವರಂತೆ ತೋರುತ್ತಿದ್ದವು, ಅತ್ತಿಂದಿತ್ತ ಓಡಾಡುವ ಕಾರು -ಜೀಪು, ಲಾರಿ -ಟಿಪ್ಪರುಗಳು ಎಬ್ಬಿಸುವ ಧೂಳಿನಲ್ಲಿ ತಂದೆ ಮಗ ಇಬ್ಬರೂ ಕಾಣದಾದರು. ಕಾರ್ಮೋಡ ಕರಗಿ ನೀರಾಗಿ ಹರಿಯತೊಡಗಿತ್ತು. ಅಪ್ಪ ಹೇಳಿದ ಕುಮಾರಸ್ವಾಮಿಯ ಅದಿರು ಅಗೆದವರ ಬೆವರು ಕೆಂಪನೆಯ ನೆತ್ತರಾಗಿ ಗುಡ್ಡ ಬೆಟ್ಟ ಕಂದಕಗಳನ್ನು ತುಂಬಿ ಧುಮ್ಮಿಕ್ಕುವಂತೆ ಸುರಿಯುತ್ತಿತ್ತು. ಸುರಿವ ಮಳೆಯಲ್ಲೂ ಸುಮ್ಮನೆ ಮಲಗಿದ್ದ ಅಪ್ಪನನ್ನು ನರಸಿಂಹ ''ಅಪ್ಪ ಏಳಪ್ಪ, ಅಪ್ಪ ಏಳಪ್ಪ ಮಳೆ ಬರ್ತಿದೆ'' ಎಂದು ಅಲ್ಲಾಡಿಸುತ್ತಲೇ ಇದ್ದ, ಸುರಿವ ಮಳೆಯ ನೆತ್ತರಿಗೆ ಊರುಕೇರಿ ಕಾಣದಾಯಿತು.

**ಮುಂ**ಜಾನೆಯಿಂದಲೇ ಭರಮಣ್ಣನಿಗೆ ತಳಮಳ ಶುರುವಾಗಿತ್ತು, ಯಾವಾಗಲೂ ಗದ್ದಲದಿಂದ ಕೂಡಿರುತ್ತಿದ್ದ ಆ ಪ್ರದೇಶ ಇವತ್ತು ಬಿಕೋ ಎನ್ನುತ್ತಿತ್ತು, ರಜಾದಿನವಾಗಿದ್ದರಿಂದ ಯಾರೊಬ್ಬರೂ ಕೂಡ ಡೇರೆಗಳಲ್ಲಿ ಇರುವುದಿಲ್ಲ, ವಾರ ಪೂರ್ತಿ ಕಾಲಿಗೆ ಗೆಜ್ಜೆ ಕಟ್ಟಿ ಕುಣಿಯುವವರಂತೆ ಕೆಲಸ ಮಾಡಿದವರು, ವಾರದ ರಜಾದಿನದಂದು ಅಪ್ಪ ಅವ್ವನನ್ನು ನೋಡಲೆಂದೋ, ಬೀಗರ ಊರಿಗೋ... ಇನ್ನೂ ಕೆಲವರು ಹರೆಯದ ಹುಡುಗರು ಸಂಡೂರಿನ ಟಾಕೀಸಿನಲ್ಲಿ ಚಿರಂಜೀವಿಯ ಹೊಸ ಪಿಚ್ಚರ್ ನೋಡಿಕೊಂಡು ಬರಲೆಂದೋ ಹೋಗಿದ್ದರು. ದುಡಿದು ಸಾಕಾಗಿ ದಣಿವಾರಿಸಿ ಕೊಳ್ಳುತ್ತಿರುವಂತೆ ನಿಂತ ಲಾರಿಗಳು, ಮುಂದಿನ ತಮ್ಮ ಬಾಡಿಯನ್ನೆತ್ತಿ ಒಂಟಿ ಕಾಲಲ್ಲಿ ತಪಸ್ಸು ಮಾಡುತ್ತಿವೆಯೇನೋ ಎಂಬಂತೆ ನಿಂತ ಟಿಪ್ಪರುಗಳು, ಅವುಗಳ ಮುಂದೆ ಹಚ್ಚಿದ ಪೋಸ್ಟರ್‌ಗಳಲ್ಲಿ ರಾಜಕುಮಾರ್-ಚಿರಂಜೀವಿಯೂ ಕೂಡ ಕೆಂಪಾಗಿದ್ದರು. ದಿನವಿಡೀ ಸಾಹುಕಾರ -ಧಣಿ – ಮ್ಯಾನೇಜರು - ಮೇಸ್ತ್ರಿ ಎಂದು ಹೊತ್ತು ತಿರುಗಾಡುವ ಜೀಪುಗಳು... ಒಬ್ಬರಿಗೊಬ್ಬರು ಕುಶಲ ವಿಚಾರಿಸಿಕೊಳ್ಳುತ್ತ ನಿಂತವರ ಹಾಗೆ ಸಾಲಾಗಿ ನಿಂತಿವೆ. ಹಳ್ಳಿಯ ಕೇರಿಗಳಲ್ಲಿ, ಮನೆಗಳ ಅಂಗಳದಲ್ಲಿ ನೆಲೆಸಿರುವ ಮೌನದಂತೆ... ಮೌನ ರೋದನದ ಆ ಮನೆಗಳ ಮುಂದೆ ಕಾಲವನ್ನು ಶಪಿಸುತ್ತ ಕೋಲೂರಿ ಕುಳಿತ ಸಿದ್ದಜ್ಜನ ಮನಸ್ಸಿನಂತೆ ಭರಮಣ್ಣನಿಗೆ ತಳಮಳವೋ ತಳಮಳ.

ಭರಮಣ್ಣ ಸುತ್ತಲೂ ನೋಡಿದ. ಆಗೊಮ್ಮೆ ಈಗೊಮ್ಮೆ ಬೀಸುವ ಗಾಳಿಗೆ ಏಳುವ ಕೆಂಪು ಧೂಳು. ಉಸಿರಾಡುವ ಗಾಳಿ ಕೂಡ ಕೆಂಪಾಗಿತ್ತು. ಭರಮಣ್ಣನ ಜೊತೆಯಲ್ಲಿ ಕೆಲಸಕ್ಕಿರುವ ಉಳಿದವರೂ ಅಷ್ಟೆ, ಒಬ್ಬರಿಗೊಬ್ಬರೂ ಮಾತನಾಡಲಾಗದಷ್ಟು ಕೆಲಸ. ಇಲ್ಲಿ ಹತ್ತಿರವಿದ್ದೂ ದೂರವಾದವರಂತೆ, ಎಲ್ಲರ ಬಣ್ಣವೂ ಒಂದೇ. ಯಾರು ಯಾವ ಕಲರಿನ ಅಂಗಿ, ನಿಕ್ಕರ, ಪಂಚೆ ಧರಿಸಿರುವರೆಂಬುದೇ ತಿಳಿಯದಷ್ಟು ಕೆಂಪು. ರಜಾ ದಿನವಾದರೆ ಪರಿಚಯದವರೊಡಗೂಡಿ ಒಂದೊತ್ತು ಕುಳಿತು ಒಳ್ಳೇದು - ಕೆಟ್ಟದ್ದು ಮಾತನಾಡೋಣವೆಂದರೆ ಒಬ್ಬರೂ ಸಿಗುವುದಿಲ್ಲ. ಕೆಲಸದ ದಿನಗಳಲ್ಲಿ ಭರಮಣ್ಣನಿಗೆ ಹೀಗೆ ಬೇಸರ ತರಿಸುವುದಿಲ್ಲ, ರಜಾ ಬಂತೆಂದರೆ ಸಾಕು, ಹಸಿವಾದರೂ ಉಣ್ಣಲು ಮನಸ್ಸಾಗದು, ನಿದ್ದೆ ಬರುವಷ್ಟು ಸುಸ್ತಾಗಿದ್ದರೂ ಮಲಗಬೇಕೆನಿಸುವುದಿಲ್ಲ, ಎಲ್ಲದಕ್ಕೂ ಮುಗಿಲು ನೋಡುತ್ತಲೇ ಕಾಲದೂಡಬೇಕು. ಸಣ್ಣವನಿದ್ದಾಗ ಅಜ್ಜಿ ಹೇಳಿದ ಕತೆಗಳು, ಗುಡುಗು ಸಿಡಿಲುಗಳ ಆರ್ಭಟಕ್ಕೆ ಕೃಷ್ಣಾರ್ಜುನರು ರಥವೇರಿ ಯುದ್ಧಕ್ಕೆ ಹೊರಡುವ ದೃಶ್ಯ ಕಣ್ಮುಂದೆ ಇರುವಂತೆ ವರ್ಣಿಸುತ್ತಿದ್ದುದು ಎಲ್ಲ ನೆನಪಾಗುತ್ತದೆ. ಇಡೀ ಮುಗಿಲು ಮೌನವಾದಂತೆ, ನೋವು ಬಂದು ಎದೆ ತುಂಬಿಕೊಂಡು ಭಾರವಾರದಂತೆನಿಸಿ ಮುಖ ಕಿವುಚಿಕೊಂಡ.

ಕಣ್ಣಲ್ಲೇನೋ ನೀರು ಒಸರಿದಂತೆನಿಸಿ ಬೆರಳಿನಿಂದ ಕಣ್ಣೊರಸಿಕೊಂಡು ದೂರದವರೆಗೂ ಕಣ್ಣು ಹಾಯಿಸಿದರೆ ಮನಸ್ಸು ಮತ್ತೆ ಹಿಂದಕ್ಕೋಡುತ್ತದೆ. ಅದೆಷ್ಟು ಹಸಿರಿತ್ತು! ತಾನು ಈಗ ನಿಂತಿರುವ ಜಾಗಕ್ಕೆ ಬರಬೇಕೆಂದರೆ ಅದೆಷ್ಟು ಹಸಿರಿತ್ತು!

ಆ ಬಿಕ್ಕಿಯ ಹಣ್ಣಿನಾಸೆಗೆ, ಕಾರೆ ಹಣ್ಣಿನ ಸವಿಗೆ, ಕಾಡು ಒಳಹೊಕ್ಕು - ದಾರಿ ಕಾಣದೆ ಭಯದಿಂದ ಉಚ್ಚೆ ಹೊಯ್ಕೊಂಡಿದ್ದು... ಸುತ್ತಲಿನ ಹಸಿರ ಘಮಘಮ ಮೂಗಿಗೆ ಬಡಿಯುತ್ತಿರುವಂತೆ. ಅರೆ! ನಾನೇನು ಯೋಚಿಸುತ್ತಿದ್ದೆ? ನಾನು ಎಲ್ಲಿದ್ದೇನೆ? ...ಹೌದು. ನಾನು ಅದೇ ಜಾಗದಲ್ಲಿಯೇ ಇದ್ದೇನೆ! ಹಚ್ಚ ಹಸಿರು ಕಡು ಸುಡುಗಾಡು ಆದ ಜಾಗದಲ್ಲೇ ನಿಂತಿದ್ದೇನೆ. ಹಳೆಯ ನೆನಪುಗಳೆಲ್ಲ ಬೇಡಬೇಡವೆಂದರೂ ಒತ್ತರಿಸಿ ಬರುತ್ತಿವೆ. ಕೆಂಪು ಕಲ್ಲು, ಕೆಂಪು ಮಣ್ಣು, ಕೆಂಪು ಜನರು, ಗೂರಲು ಕೆಮ್ಮುತ್ತ ಮಲಗಿದ ಮುದುಕರು, ಪಾರ್ಶ್ವರೋಗ ಪೀಡಿತರಾಗಿ ನಡೆದಾಡಲೂ ಆಗದೆ ಹಾಸಿಗೆಯಲ್ಲಿಯೇ ಒದ್ದಾಡುವ ಒಂದು ಕಾಲದ ಲಾರಿ ಟಿಪ್ಪರುಗಳ ಡ್ರೈವರುಗಳು, ಜೀವಗಳ ಲೆಕ್ಕಿಸದ ಸುಡುಗಾಡು ಪ್ರಪಂಚವೊಂದರ ಚಕ್ರವ್ಯೂಹದಲ್ಲಿ ತಾನಿದ್ದೇನೆಂಬ ಭಾಸವಾಗುತ್ತಿದೆ.

ನಾರಿಹಳ್ಳದ ದಂಡೆಯಲ್ಲಿರುವ ಗುಡಿ ನರಸಿಂಹ ದೇವಸ್ಥಾನದ ಪಕ್ಕದಲ್ಲಿಯೇ ಭರಮಣ್ಣನ ಹೊಲವಿತ್ತು. ಸುತ್ತಲೂ ಹಚ್ಚ ಹಸುರಾದ ಕಾಡು, ಕಡಿದಾದ ಬೆಟ್ಟ. ಆ ಹಸಿರಿನ ನಡುವೆ ಯಾರೋ ಅಡಗಿ ಕುಳಿತಂತೆ ಗುಡಿ ನರಸಿಂಹ ದೇವರು ಇದ್ದ, ಪಕ್ಕದಲ್ಲಿ ವೈಯ್ಯಾರದಿ ಹರಿಯುವ ನಾರಿಹಳ್ಳ. ಒಮ್ಮೊಮ್ಮೆ ಭರಮಣ್ಣನಿಗೆ ನಾರಿಹಳ್ಳ ಗುಡ್ಡ ಬಳಸಿ ಬಳುಕಿ ನಡೆಯುವುದೂ ಹೆಂಡತಿ ಚಂದ್ರಿ ನಡೆಯುವುದೂ ಒಂದೇ ಎಂದು ಹೇಳಿ ನಾಚಿಸುತ್ತಲೇ ಹೊಲದಲ್ಲಿ ಕೆಲಸ ಮಾಡುತ್ತಿದ್ದ. ಕೆಲಸ ಮುಗಿಸಿ ಹೊಲದ ಬದುವಿನಲ್ಲಿರುವ ಹೊಂಗೆ ಮರದ ನೆರಳಿನಲ್ಲಿ ತಲೆಯ ಮೇಲಿನ ವಲ್ಲಿ ತೆಗೆದು ಬುತ್ತಿ ಬಿಚ್ಚಿ ಉಣ್ಣಾಕ ಕುಳಿತರೆಂದರೆ ಕಟ್ಟಿಕೊಂಡು ತಂದ ಬುತ್ತಿ ಗಂಟು ಅಮೃತವಾಗುತ್ತಿತ್ತು. ಸುಂದರ ಸಂಸಾರಕ್ಕೆ ಗುಡಿ ನರಸಿಂಹನೇ ನಾಚಿ ನೀರಾಗಿ – ಗಂಡುಮಗುವನ್ನು ದಯಪಾಲಿಸಿದ್ದನೆಂದು ಇಬ್ಬರೂ ನಂಬಿದ್ದರಿಂದಲೇ ಹುಟ್ಟಿದ ಮಗನಿಗೆ ನರಸಿಂಹನೆಂದು ನಾಮಕರಣ ಮಾಡಿದ್ದರು. ಮರದ ನೆರಳಿನಲ್ಲಿ ಹುಲ್ಲಗರಿಕೆಯ ಮೇಲೆ ಗೋಣಿಚೀಲ ಹಾಸಿ ನರಸಿಂಹನನ್ನು ಮಲಗಿಸಿದರೆಂದರೆ ಮರದ ಮೇಲೆ ಕುಳಿತ ಗಿಳಿ ಹಾಡುತ್ತಿತ್ತು, ಗುಬ್ಬಿ ಚಿಲಿಪಿಲಿಸುತ್ತಿತ್ತು ಕುಮಾರಸ್ವಾಮಿ - ನರಸಿಂಹ ದೇವರ ಜಾತ್ರೆಯಲ್ಲಿ ತಂದ ಆಟಿಕೆ ಸಾಮಾನಿನತ್ತ ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಚಂದ್ರಿ ಗಂಡನಿಗೆ ಸಮವಾಗಿ ಹೊಲದಲ್ಲಿ ದುಡಿಯುತ್ತಿದ್ದಳು. ಇದ್ದ ಒಂದೆಕೆರೆಯಷ್ಟು ಹೊಲದಲ್ಲಿಯೇ ಹೊಟ್ಟೆ ತುಂಬುವಷ್ಟು ಧಾನ್ಯ ಬೆಳೆಯುತ್ತಿದ್ದರು.

ಸುಂಯ್ಯನೆ ಗಾಳಿ ಬೀಸಿತೆಂದರೆ ಸಾಕು ವನಸುಮಗಳ ಘಮಘಮ ಹರಿದುಬರುತ್ತಿತ್ತು. ಕಾಡಿನಲ್ಲಿ ನಾಲ್ಕು ಹೆಜ್ಜೆ ಹೋದರೆ ಸಾಕು ಮರಗಳಡಿಗಳಲ್ಲಿಯೇ ಹಣ್ಣಾಗಿ ನಿಂತ ಫಲ ಸಿಗುತ್ತಿತ್ತು. ಬಿಕ್ಕೆಯೋ ಸೀತಾಫಲವೋ... ಸಿಕ್ಕರೆ ಓಣಿಯ ಹುಡುಗರಿಗೆಲ್ಲ ಹಂಚುತ್ತಿದ್ದರು. ಹೂವುಗಳಂತೂ ಅದೆಷ್ಟೋ ಆ ಗುಡಿ ನರಸಿಂಹನಿಗೇ ಗೊತ್ತು. ಮೂರು ವರುಷಕ್ಕೊಂದು ಸಾರಿ ನಡೆಯುವ ನರಸಿಂಹದೇವರ ಜಾತ್ರೆ ಬಹಳ ಪ್ರಸಿದ್ಧಿ. ಯಾವ ಪರಿಷೆಯೂ ಇಷ್ಟು ಜೋರಾಗಿ ನಡೆಯುವುದಿಲ್ಲ. ಎಷ್ಟು ಎತ್ತಿನಗಾಡಿಗಳು! ಅದೇನು ಸಂಭ್ರಮ! ಅದೆಷ್ಟು ಜನ! ಜಾತ್ರೆಗೆಂದು ಬಂದ ಜನರು ದೇವಸ್ಥಾನದ ಪಕ್ಕದಲ್ಲಿರುವ ಭರಮಣ್ಣನ ಹೊಲದಲ್ಲಿಯೇ ಒಲೆ ಹಾಕೋದು ಭರಮಣ್ಣನಿಗೆ ಅದೇನೋ ಖುಷಿ ಕೊಡುತ್ತಿತ್ತು. ಸಂಡೂರಿನ ಮಹಾರಾಜರು ಗಂಡಿ ನರಸಿಂಹನಿಗೆ ಹರಕೆ ತೀರಿಸಲು ಬಂದಾಗಲೂ ಹೊಲದಲ್ಲಿ ನಡೆದಾಡಿದ್ದನ್ನು ನೆನೆಸಿಕೊಂಡು ಭರಮ - ಚಂದ್ರಿ ಅವರಿವರ ಮುಂದೆ ಹೇಳಿಕೊಂಡಿದ್ದಿದೆ. ಮಕ್ಕಳಿಂದ ಹಿಡಿದು ಮುದುಕರವರೆಗೂ ಒಂದೇ ತೆರನಾದ ಉತ್ಸಾಹ. ಕಡಿಮೆಯೆಂದರೂ ಮೂರು ದಿನಗಳ ಕಾಲ ನಡೆಯುವ ಪರಿಷೆಯಲ್ಲಿ ಅದೆಷ್ಟು ಹೆಣ್ಣುಮಕ್ಕಳ ಮದುವೆ ನಿಶ್ಚಯವಾಗಿಲ್ಲ! ಎಂದೂ ಮಾತನಾಡದ ಅಣ್ಣತಮ್ಮಂದಿರು ಒಬ್ಬರಿಗೊಬ್ಬರು ಆ ದಿನ ಮಾತನಾಡುತ್ತಾರೆ. ಭರಮಣ್ಣನೂ ಅಷ್ಟೆ, ಅದೆಷ್ಟೆ ಕಷ್ಟವಿರಲಿ ಬಂಧುಬಳಗದವರನ್ನು ಎಂದೂ ಬಿಟ್ಟುಕೊಟ್ಟವನಲ್ಲ, ಗಂಡಿ ನರಸಿಂಹ ದೇವರ ಜಾತ್ರೆಗೆಂದು ದೂರದೂರಿಗೆ ಹೋಗಿ ಅಕ್ಕ-ತಂಗಿಯರನ್ನು ಬೀಗರನ್ನು ಕರೆಯುವುದು ವಾಡಿಕೆ. ಇದ್ದ ಒಂದೆಕರೆ ಹೊಲದಲ್ಲಿ ಬೆಳೆದ ಧಾನ್ಯದಲ್ಲಿ ಒಂದಷ್ಟು ಮಾರಿ ಬಟ್ಟೆ ಬರೆ ತರೋನು. ಇರುವ ಒಂದೆಕೆರೆ ಹೊಲದಲ್ಲಿ ಬೆಳೆಯದ ಬೆಳೆಯೇ ಇಲ್ಲವೆನ್ನಬೇಕು. ಹುಳ್ಳಿ, ಜ್ವಾಳ ಒಂದು ಕಡೆಗೆ ಹಾಕಿದರೆ ಇನ್ನೊಂದು ಕಡೆಗೆ ಸಜ್ಜೆ ಜೊತೆಗೆ ತೊಗರಿಯನ್ನು (ಅಕ್ಕಡಿ ಕಾಳು) ಬೆಳೆಯುತ್ತಿದ್ದ. ಸಂಜೆಯಾಗುತ್ತಲೇ ತಾನು ಎತ್ತು ಮೇಯಿಸಿಕೊಂಡು, ''ಬರ್ತೀನಿ ನೀನು ನಡಿ'' ಎಂದು ಹೆಂಡತಿಯನ್ನು ಕಳಿಸಿ ಸೂರ್ಯ ಮುಳುಗಿದ ನಂತರ ಎತ್ತುಗಳ ಹೊಡಕೊಂಡು ಮನೆಗೆ ಬರುವಾಗ ಸಂಡೂರಿನ ಬೀದಿದೀಪಗಳು ಬೆಳಗುತ್ತಿರುತ್ತವೆ. ಓಣಿಯ ಮನೆಗಳಲ್ಲಿ ಒಲೆಯ ಬೆಳಕಿನಲ್ಲಿ ಹೆಂಗಸರು ರೊಟ್ಟಿ ಸುಡುತ್ತಿದ್ದರೆ ಗಂಡಸರು ಬಾಯಿಗೆ ಬೀಡಿ ಹಚ್ಚಿ ಅದೇನೋ ಗಹನವಾದ ವಿಚಾರದಲ್ಲಿ ಮುಳುಗಿರುವವರಂತೆ ಸುರುಳಿ ಸುರುಳಿಯಾಗಿ ಹೊಗೆ ಬಿಡುತ್ತಿರುತ್ತಾರೆ. ಹೊರಗೆ ಬೀದಿಯಂಗಳದ ದೀಪದ ಬೆಳಕಿನಲ್ಲಿ ಹುಡುಗರು,

ಇವನೆ ನೋಡು ಅನ್ನದಾತ
ಹೊಲದಿ ದುಡಿದೆ ದುಡಿವನು

– ಎಂದು ರಾಗವಾಗಿ ಹಾಡುವುದು, ಓದುವುದು ಕೇಳಿಸುತ್ತದೆ. ಇಡೀ ಕೇರಿಯೇ ಜೀವಂತಿಕೆಯಿಂದ ತುಂಬಿದಂತೆ ಭಾಸವಾಗುತ್ತದೆ. ಎತ್ತುಗಳನ್ನು ಕೊಟ್ಟಿಗೆಯಲ್ಲಿ ಕಟ್ಟಿಹಾಕಿ, ಮೈದಡವಿ ಮುಸರೆ ನೀರು ಕುಡಿಸಿ, ಬೀಡಿ ಹಚ್ಚಿ ಕುಳಿತನೆಂದರೆ... ಬೀಡಿ ಹೊಗೆಯ ತುಂಬ ಕನಸುಗಳು ಓಲಾಡಿದಂತೆ ಕಾಣುತ್ತಿದ್ದವು. ಚಂದ್ರಿ ಮಾಡಿದ ಬಿಸಿ ಬಿಸಿ ರೊಟ್ಟಿ, ಕೊಲೆನ್ನ ಸೊಪ್ಪು, ಹಸಿ ಮೆಣಸಿನಕಾಯಿಗೆ ಉಪ್ಪು, ಹುಳಿ ಹಾಕಿ ತಿಕ್ಕಿದ ತಂಬಳಿ, ಅಮೃತವೆನಿಸುತ್ತಿತ್ತು, ಹೊಟ್ಟೆ ಬಿರಿಯುವಂತೆ ಉಣ್ಣುತ್ತಿದ್ದ.

ಅರೆ, ನಾನೆಷ್ಟು ಹೊತ್ತು ಕುಳಿತುಬಿಟ್ಟೆ?! ಮ್ಯಾನೇಜರ್ರ ಹತ್ರ ಹೋಗಬೇಕು... ಮತ್ತೆ ಮತ್ತ ಬೇಡುತ್ತ ನಿಲ್ಲಬೇಕು...! ಈ ಸರ್ತಿ ಏನಾದರೂ ಮಾಡಿ ಕರಕೊಂಡು ಬರಲೇಬೇಕು ಎಂದು ಯೋಚಿಸುತ್ತಲೇ, ಮಲಗಿದ್ದ ಮಗ ನರಸಿಂಹನ ಕಡೆಗೆ ನೋಡಿದ. ಸೂರ್ಯನ ಎಳೆಬಿಸಿಲು ಮಗನ ಮೇಲೆ ಬೀಳುತ್ತಿತ್ತು. ಪಾಪ! ಹುಡುಗ ಸಾಲಿ ಕಲೀತಿನಿ ಅಂದರೂ ಬಿಡದೆ ಕೆಲಸಕ್ಕೆ ಕರಕೊಂಡುಬಂದಿದ್ದ ನರಸಿಂಹ ''ಅವ್ವ... ಅವ್ವ'' ಎಂದು ಕನವರಿಸಿದ ಧ್ವನಿ ಕೇಳಿ ''ಮಗಾ'' ಎಂದ. ''ಏನಪ್ಪ'' ಎಂದವನೆ ನರಸಿಂಹ ಧಡಕ್ಕನೆದ್ದು ಕುಳಿತ.

''ಅಪ್ಪ, ಅವ್ವನ್ನ ಕರ್ಕೊಂಡು ಬರಣಾ?'' ಎಂದು ಅವಸರಪಡಿಸತೊಡಗಿದ. ಅವಸರವಸರದಿಂದ ಹಲ್ಲುಜ್ಜಿ ಮುಖ ತೊಳೆದುಬಂದ ನರಸಿಂಹ, ''ಅಪ್ಪಾ, ಬೇಗ ಹೋಗನ್ನಡಿ'' ಎಂದ ಮಗನ ಮುಖ ನೋಡಿದ. ಮಗನ ಮುಖದ ತುಂಬ ಅವ್ವನ ನೋಡುವ ಕಾತರವಿತ್ತು, ಭರಮಣ್ಣನಿಗೆ ಹೊಟ್ಟೆಯಲ್ಲಿ ಯಾರೋ ಕೈ ಆಡಿಸಿದಂತಾಯ್ತು, ಮಗನನ್ನು ಕರಕೊಂಡು ಡೇರೆಯಿಂದ ಹೊರಟ ಭರಮಣ್ಣನ ಕಣ್ಣು ತುಂಬಿದ್ದವು. ಕಾಲುಗಳು ಧಡಧಡನೆ ಮ್ಯಾನೇಜರನ ಮನೆಯತ್ತಲೇ ಹೆಜ್ಜೆ ಹಾಕುತ್ತಿದ್ದರೂ ಮನದಲ್ಲಿ ಏನೋ ಆತಂಕ, ಭರಮಣ್ಣ ಅಕ್ಷರಶಃ ನಿಶ್ಶಕ್ತನಂತೆ ತೋರುತ್ತಿದ್ದ, ಅಪ್ಪನಿಗಿಂತಲೂ ನರಸಿಂಹನೇ ಜೋರಾಗಿ ನಡೆಯುತ್ತಿರುವವನಂತೆ ತೋರುತ್ತಿತ್ತು, ಭರಮಣ್ಣ ಮಾತ್ರ ತಲೆಯಲ್ಲಿ ಏನೋ ಯೋಚಿಸುತ್ತ ಯಾಂತ್ರಿಕವಾಗಿ ಹೆಜ್ಜೆ ಹಾಕುತ್ತಿದ್ದ.

ಅತ್ತ ಆ ಬೆಟ್ಟದ ದಕ್ಷಿಣಕ್ಕೆ ಸುಬ್ಬರಾಯನಹಳ್ಳಿ ಇದ್ದರೆ, ಇತ್ತಕಡೆ ದೇವಗಿರಿ. ಕೆಳಗೆ ಕುಮಾರಸ್ವಾಮಿ ದೇವರ ಗುಡಿ, ಇನ್ನು ಅತ್ತಿತ್ತ ಸರಿದರೆ ನಂದಿಹಳ್ಳಿ, ಹೊಸಳ್ಳಿ, ಕಣಿವೆಹಳ್ಳಿ, ಸೀಗೆನಹಳ್ಳಿ... ಹೀಗೆ ಎಷ್ಟೊಂದು ಹಳ್ಳಿಗಳು! ಸಂಡೂರಿನ ರಾಜರು ಈ ಹಳ್ಳಿಗಳಿಗೆ ಕೃಷ್ಣನಗರ, ಯಶವಂತನಗರ, ತಾರಾನಗರ, ವೆಂಕಟಗಿರಿನಗರ ಎಂದು ತನ್ನ ತಂಗಿ,ಅಣ್ಣ, ತಮ್ಮ, ಯುವರಾಜರ ಹೆಸರು ಇಟ್ಟರೂ ಜನ ಕರೆಯುತ್ತಿದ್ದುದು ಮಾತ್ರ ಹಳೆಯ ಹೆಸರುಗಳಿಂದಲೇ. ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಹೋಗಬೇಕೆಂದರೆ ನಡಕೊಂಡೇ ಹೋಗಬೇಕಿತ್ತು. ಅಷ್ಟೊಂದು ದುರ್ಗಮ ಹಾದಿ. ಕೆಲವು ಹಳ್ಳಿಗಳಂತೂ ಬೆಟ್ಟಗಳ ಮೇಲೆಯೇ ಇದ್ದುವು. ಅಲ್ಲೊಂದು ಇಲ್ಲೊಂದು ಎಂಬಂತೆ ಇದ್ದ ಮಹಾರಾಜರ ಮೈನ್ಸ್‌ನಲ್ಲಿ ಕೆಲಸ ಮಾಡುವ ಮಂದಿ ಅಲ್ಲಿ ವಾಸಮಾಡುತ್ತಿದ್ದರು. ಮುಂಜಾವಿನ ಮಂಜಿನಲ್ಲಿ ಮುಳುಗಿದಂತೆ ತೋರುತ್ತಿದ್ದರು. ಆಕಳು ಎಮ್ಮೆಗಳಿಗಂತೂ ಹಸಿರು ಹುಲ್ಲಿನ ಸುಗ್ಗಿಯೋ ಸುಗ್ಗಿ, ಹೀಗಾಗಿ ಹೈನ ಸಾಕಷ್ಟಿತ್ತು, ಸಂಜೆ ಮೈನ್ಸ್ ಕೆಲಸ ಮುಗಿಸಿಬರುವಾಗ ಎಲ್ಲರ ಎಡಗೈಲಿ ಎಂಡ ಬಲಗೈಲಿ ಹುಂಜವೋ - ಕೋಳಿಯೋ ಇರುತ್ತಿತ್ತು, ಬಂದವರು ಹೆಂಡತಿಯ ಅಡುಗೆಗೆ ಸಹಾಯ ಮಾಡೋದೇನೊ, ಬೆಳ್ಳುಳ್ಳಿ ಸುಲಿದು ಹಸಿಶುಂಠಿ, ಕೊತ್ತಂಬ್ರಿ ಸೊಪ್ಪು, ಮಸಾಲೆ ಅರೆದು ಕೊಡೋದೇನೊ... ಇಡೀ ಓಣಿ ತುಂಬ ಮಸಾಲೆ ಘಮಘಮಿಸುತ್ತಿರುವಾಗಲೇ ನಿಧಾನಕ್ಕೆ ಎಂಡ ದೇಹಕ್ಕೆ ಇಳಿಸುತ್ತಿದ್ದರು. ಇಳಿಸಿದ ನಂತರ ಈಗ ಮಸಾಲೆ ರುಬ್ಬಿದವರು ಇವರೇನಾ ಎಂಬಂತಾಡುತ್ತಿದ್ದುದು ಎಲ್ಲ ಮಾಮೂಲಿಯಾಗಿಬಿಟ್ಟಿತು. ಆ ದಿನಗಳನ್ನು ನೆನೆಸಿಕೊಳ್ಳುತ್ತಲೇ ಭರಮಣ್ಣನ ಮುಖದಲ್ಲಿ ನಗು ಬೇಡವೆಂದರೂ ಬಂದುಬಿಟ್ಟಿತು.

ಯಾಕಪ್ಪಾ ನಗ್ತಿದೀಯ ಎಂದು ನರಸಿಂಹ ಕೇಳಿದಾಗಲೇ ಎಚ್ಚರವಾಗಿದ್ದು.

ಕಣ ಮಾಡಬೇಕು ಅಂದ್ರೆ ಭರಮಣ್ಣನೇ ಸೈ ಅನ್ನೋರು ಊರ ಜನ. ಶ್ರದ್ಧೆಯಿಂದ ಒಂದು ಕಾಳೂ ಪೋಲಾಗದಂತೆ ಕೆಲಸ ಮಾಡುತ್ತಿದ್ದ, ಹೊಲದಲ್ಲಿ ತೆನೆ ಮುರಿಯೋದ್ರಿಂದಾ ಹಿಡಿದು ಕಣ ಬಳಿದು ಸೆಗಣಿ ಸಾರಿಸಿ ಕಸ ಕಡ್ಡಿ ತೆಗೆದು ನೀಟಾಗಿ ಕೆಲಸ ಮಾಡುತ್ತಿದ್ದ. ಗುಂಡು ಹೊಡೆದು ರಾಶಿ ಮಾಡೋನು ಭರಮಣ್ಣನೇ. ಕಣ ಮಾಡ್ತಾರೆ ಅಂದ್ರೆ ಅಲ್ಲಿ ಭರಮಣ್ಣ ನಿದ್ದಾನೆ ಅಂತಲೇ ಜನ ತಿಳ್ಕೋತಿದ್ರು. ಅಂತಹ ಆಸಾಮಿ ಭರಮಣ್ಣ, ಸಂಡೂರು ಮಹಾರಾಜರ ಮನೆತನದವರು ಮೈನ್ಸ್ ಮಾಡಿದ್ದಾಗಲೂ ಸಹ ಜನರು ಬೇಸಾಯ ನಿಲ್ಲಿಸಿದ್ದಿಲ್ಲ, ಮನೆಗೊಬ್ಬ ಮಗನಂತೆ ಮೈನ್ಸ್‌ನವರು ತಿಂಗಳಿಗೊಂದು ಸಾರಿ ನೀಡುತ್ತಿದ್ದ ರೇಷನ್ ಆಸೆಗೋಸ್ಕರ ದುಡಿಯುತ್ತಿದ್ದರೆ ಉಳಿದವರು ಹೊಲಗಳಲ್ಲಿ ದುಡಿಯುವವರಾಗಿದ್ದರು.

ಆದರೆ ಯಾವಾಗ ಹೊಲ-ಗದ್ದೆಗಳಲ್ಲಿ, ಕಲ್ಲುಮಣ್ಣುಗಳಲ್ಲಿ ಕೂಡ ಕಬ್ಬಿಣ ಸಿಗ್ತದೆ ಅಂದ್ರೋ ಅಲ್ಲಿಂದ್ಲೇ ಸುರುವಾತು. ಎಂದೆಂದೂ ನೋಡದ ಯಾವ ಯಾವ್ರೋ ದೇಸದಿಂದ ಜನರು ಬಂದ್ರು, ಸಾರಾಯಿ ಹೆಂಡದಂಗಡಿಗಳಲ್ಲಿ ಬ್ಯಾರೇ ದೇಶದ ಬಾಟ್ಲಿಗಳೂ ಬಂದ್ವು. ಸ್ಕೂಲಿಗೋಗುವ ಮಕ್ಕಳು ಓದೋದನ್ನ ಬಿಟ್ಟು ಹೊಲದಲ್ಲಿ ಕಲ್ಲೋ-ಮಣ್ಣೋ ಗುಂಪು ಮಾಡಿದ್ರೆ ಸಾಕಿತ್ತು, ದಿನವೊಂದಕ್ಕೆ ೧೦೦-೨೦೦ ರೂಪಾಯಿ ದುಡಿಯೋರು. ಸಾಲಿ ಬಿಟ್ಟ ಮಕ್ಕಳು ಮಣ್ಣು ಹೊರೋದಕ್ಕೆ ಸುರು ಮಾಡಿದ್ವು, ಓಣಿ-ಕೇರಿ-ಹಳ್ಳಿ-ನಗರ ಎಲ್ಲಾ ಕೆಂಪಾದವು. ಹಚ್ಚ ಹಸಿರು ಕಾಡು ಬರಿದಾಗುತ್ತಲೇ ಸಾಗಿತ್ತು, ಕಣವೆಂಬೋ ಕಣಗಳಲ್ಲಿ ಬಂಗಲೆಗಳೆದ್ದವು. ಗಂಡಿ ನರಸಿಂಹನ ಬುಡದಲ್ಲೇ ಡೈನಮೈಟುಗಳು, ಸಿಡಿಮದ್ದುಗಳು ಸಿಡಿಯತೊಡಗಿದ್ದವು. ಹೊಲ ಮಾರಿದ ಜನರ ಕೈತುಂಬ ರೊಕ್ಕ ತುಂಬಿತ್ತು, ಯಾರೂ ಪ್ರತಿಭಟಿಸಲು ಕಾರಣಗಳೇ ಇರಲಿಲ್ಲ, ಯಾಕೆಂದರೆ ಎಂದೂ ಕಾಣದ ರೊಕ್ಕ ಬಂದು ಗುಡಿಸಲುಗಳಲ್ಲಿ ಬಿದ್ದಿತ್ತು, ಓಣಿಯ ಹೈಕಳುಗಳೆಲ್ಲಾ ದುಡ್ಡಲ್ಲಿ ಧಾಮ್-ಧೂಮ್ ಎಂದು ಹೀರೋಹೊಂಡಾಗಳಂತೆ ಸೂಪರ್ ಸಿನಿಮಾ ಎಂದೆಲ್ಲ ಮೋಜು ಮಾಡತೊಡಗಿದರು.

ಭರಮಣ್ಣನಿಗೂ ಹೊಲ ಮಾರದೆ ಬೇರೆ ದಾರಿಯಿರಲಿಲ್ಲ. ಮೊದಮೊದ್ಲು, ''ಸತ್ತೆನೆಂದರೂ ನಾ ಹೊಲ ಮಾರಲ್ಲ'' ಎಂದು ಹೇಳಿದ್ದ ಭರಮಣ್ಣನನ್ನು ರಾತ್ರೋರಾತ್ರಿ ಅದ್ಯಾರೋ ಎತ್ತಿಕೊಂಡು ಹೋಗಿದ್ದರು. ಆಮೇಲೆ ಭರಮಣ್ಣ ಹೆದರಿ ಒಪ್ಪಿಕೊಂಡಿದ್ದ. ಓಣಿ ತುಂಬ ಪ್ರತಿದಿನ ಮಸಾಲೆ ವಾಸನೆ ಘಮಘಮಿಸುತ್ತಿತ್ತು, ಸಾಲಿಗೋಗುವ ಮಕ್ಕಳಿಗಂತೂ ಮೇಷ್ಟ್ರ ತಂಟೆಯಿಲ್ಲವೆಂದೂ, ನಾವು ರೊಕ್ಕ ಗಳಿಸುತ್ತೇವೆ ಎಂದೂ, ಬೀದಿಯ ಬೆಳಕಿನಲ್ಲಿ ಮಾತಾಡುತ್ತ ಕುಳಿತಿರುತ್ತಿದ್ದರು, ಗುಡಿಸಲುಗಳಲ್ಲಿ ಟಿವಿಗಳು ಮಾತಾಡುತ್ತಿದ್ದವು. ಜನರು ಮಾತಾಡೋದನ್ನು ನಿಲ್ಲಿಸಿ ಯಾವುದೋ ಕಾಲವಾಗಿತ್ತು.

ಯಾರೂ ಉತ್ತದಿದ್ದರೂ, ಬಿತ್ತಿ ಬೆಳೆಯದಿದ್ದರೂ ಮನೆ ತುಂಬ ಬರುವ ಅಕ್ಕಿ ಗೋಧಿ ಕಂಡು ಭರಮಣ್ಣ ಬೆರಗಾಗುತ್ತಿದ್ದ. ಭರಮಣ್ಣನೂ, ಮಗನೂ ಮೈನ್ಸ್‌ಗೆ ಹೋಗತೊಡಗಿದರು. ಹೆಂಡತಿ ಚಂದ್ರಿಯೂ ಸಹ ಬಂಗಲೆಯಲ್ಲಿನ ಕಸ-ಮುಸರೆಯ ಕೆಲಸಕ್ಕೆ ಸೇರಿಕೊಂಡಳು. ಹೀಗೊಂದು ದಿನ ಬೆಳ್ಳಗೆ, ತೆಳ್ಳಗಿದ್ದ ಚಂದ್ರಿ ಮೇಲೆ ಮ್ಯಾನೇಜರ್‌ನ ಕಣ್ಣು ಬಿದ್ದಿತ್ತು. ಚಂದ್ರಿಯನ್ನು ಮರುಳು ಮಾಡಿ ಮನೆಗೆ ಕಳಿಸದೆ ಬಂಗಲೆಯಲ್ಲಿಯೇ ಇರಿಸಿಕೊಳ್ಳತೊಡಗಿದ. ಕೇಳಿದರೆ, ಯಾರೋ ಬಂದು ರಾತ್ರಿ ಒದೆಯುತ್ತಿದ್ದರು, ಮಗ-ಹೆಂಡತಿಯನ್ನು ಕೊಲ್ಲುವುದಾಗಿ ಬೆದರಿಸುತ್ತಿದ್ದರು, ಕೈಯೋ ಕಾಲೋ ಬಿದ್ದು ಮರ್ಯಾದಿಸಲ್ವಾಗಿ ಹಬ್ಬ-ಹರಿದಿನಗಳಲ್ಲಿ ಮಾತ್ರ ಹೆಂಡತಿಯನ್ನು ಕಳಿಸುವುದಾಗಿ ಹೇಳುತ್ತಿದ್ದ, ಗಣಿಯ ಗುಂಡಿಗಳು ಭರಮಣ್ಣನ್ನ ಅಣಕಿಸುತ್ತಿರುವಂತೆ ಜೀವಕ್ಕೆ ಜೀವವಾದ ಹೆಂಡ್ತಿ, ಹೊಲ ಎಲ್ಲಾ ಕಸಿದುಕೊಂಡಿತ್ತು, ಭರಮಣ್ಣನ ಮೈಯ್ಯ ರಕ್ತ ಹೊರಗೆ ಕೆಂಪಾದ ಧೂಳಿನಂತೆ ಹಾರಾಡುತ್ತಿತ್ತು.

ತಂದೆ-ಮಗ ನಡೆಯುತ್ತಲೇ ಇದ್ರು. ಮಗ ನರಸಿಂಹನ ತಲೆಯಲ್ಲಿ ಅಪ್ಪ ಯಾಕೆ ಪ್ರತಿಸಲ ಅವ್ವನ ಕರ್‍ಕೊಂಡಬರಾಕೆ ಮ್ಯಾನೇಜರನ್ನ ಕೇಳಬೇಕು ? ಅವ್ವನಾದ್ರೂ ಯಾಕೆ ಬರಬಾರ್‍ದು! ಅಂತೆಲ್ಲಾ ಯೋಚಿಸ್ತಿದ್ದ. ಭರಮಣ್ಣನ ತಲೆಯ ಯೋಚನೆಗಳೇ ಬೇರೆ. ಯೋಚಿಸುತ್ತಾ ಅದಾಗಲೇ ಮ್ಯಾನೇಜರ ಬಂಗಲೆಯೆದುರು ಬಂದು ನಿಂತದ್ದಾಗಿತ್ತು.

ಭರಮಣ್ಣ ತನ್ನ ತಲೆಯ ಮ್ಯಾಲಿನ ವಲ್ಲಿ ತೆಗೆದು ಕೈಯಲ್ಲಿ ಹಿಡಿದು ನಡು ಬಗ್ಗಿಸಿ ದೈನ್ಯದಿಂದ ನಿಂತಿದ್ದ. ಪಕ್ಕದಲ್ಲಿ ನರಸಿಂಹ ಅಪ್ಪನನ್ನೊಮ್ಮೆ ಮ್ಯಾನೇಜರನ್ನೊಮ್ಮೆ ಪಿಳಿಪಿಳಿ ಕಣ್ಣುಬಿಟ್ಟು ನೋಡುತ್ತಿದ್ದ. ಅಪ್ಪ ಮಗನ ತಲೆಗಳು ಕೆಂಪಾಗಿದ್ದವು. ಇಬ್ಬರೂ ತೊಟ್ಟ ಬಟ್ಟೆಗಳು ಯಾವ ಕಲರಿನವಾಗಿದ್ದವು ಎಂದು ಹೇಳೋದೇ ಕಷ್ಟವಾಗಿತ್ತು.

''ಏನೋ ಭರಮ ? ಇಷ್ಟು ದೂರ ಬಂದಿದೀಯಾ ?'' ಮ್ಯಾನೇಜರನ ಧ್ವನಿಯಲ್ಲಿ ದರ್ಪವಿತ್ತು.

''ಬುದ್ಧಿ, ನಾಳೆ ನನ್ನ ಅಕ್ಕ-ತಂಗೇರು ಬರ್‍ತವ್ರೆ, ಗಂಡಿ ನರಸಿಂಹಗೆ ಕಾಯಿ ಕರ್ಪೂರ ಮಾಡಿಸ್ಕೊಂಡು ಹೋಗಾಕಾಂತ ಬರ್‍ತವ್ರೆ ಅದಕ್ಕೆ ನನ್ನ ಹೆಂಡ್ತಿನ''... ಅನ್ನುತ್ತಲೇ

''ಏನೋ ನಿನ್ನ ಹೆಂಡ್ತಿ...?'' ಎಂದು ಅರ್ಧದಲ್ಲಿ ಗದರಿಸಿದ. ಮ್ಯಾನೇಜರ ಕೃತಕವಾಗಿ ನಕ್ಕ, ನರಸಿಂಹ ಬುಸುಗುಡುತ್ತಿದ್ದ.

''ಯಾಕ್ಲಾ... ಕೊಟ್ಟ ರೊಕ್ಕ ಜಾಸ್ತಿಯಾತೇನು ? ಸೊಕ್ಕು ಬಂತೇನು ?''

**ಕಾಲ**

ವರ್ಣಾಶ್ರಮಗಳು
ಅಳಿದುವು : ಕಾಲ
ಕೆಟ್ಟುಹೋಯಿತು ಎಂದು
ಕೆಲವರ ವಿಷಾದ।
ಹಾಗಿದ್ದರೆ,
ಇನ್ನಷ್ಟು ಕೆಡಲಿ,
ಕುಲಗೆಟ್ಟು ಹೋಗಲಿ।

ಸಿ.ಪಿ.ಕೆ.
ಮೈಸೂರು

''ಹಂಗಲ್ಲಾ ಬುದ್ದಿಯೋರ... ನಾಳೆಯೊಂದಿವ್ಸ ಅಷ್ಟೆ, ಮತ್ತ ಸಂಜಿ ಕಡೆಗೆ ತಮ್ಮ ಮನಿಗೆ ಬಂದ್ ಸೇರಸ್ತಿನಿ ಬುದ್ಧಿ'' ಅಂದ. ದೈನ್ಯದಿಂದ ಬೇಡುತ್ತಿದ್ದ ಅಪ್ಪನ್ನ ನೋಡಿ ನರಸಿಂಹ ಬುಸುಗುಡುತ್ತಿದ್ದ.

''ಸರಿ, ಸರಿ, ನಾಳೆ ಬಂದು ಕರ್‍ಕೊಂಡೋಗು. ಸಂಜೆ ಹೊತ್ತಿಗೆ ವಾಪಾಸ್ ಕರ್‍ಕಂಡಬರ್‍ಲಿಲ್ಲ ಅಂದ್ರೆ...'' ಎಂದು ಅವಡುಗಚ್ಚಿದ್ದ ಮ್ಯಾನೇಜರ್‌ನ ನೋಡಿದ ಭರಮಣ್ಣ ''ಇಲ್ಲ, ಆ ನರಸಿಂಹನಾಣೆಗೂ ನಾನೇ ಕರ್‍ಕಂಡಬಂದು ಬಿಡ್ತೀನಿ'' ಎಂದ.

ಇದ್ದಕ್ಕಿದ್ದಂತೆ ನರಸಿಂಹನಿಗೆ ಎಚ್ಚರವಾಯ್ತು, ರಾತ್ರಿಯ ಆಕಾಶ ಎಷ್ಟು ನೋಡಿದ್ರು ಬರಿ ಆಕಾಶಾನೇ ಕಾಣಿಸ್ತಿತ್ತು. ಅದೇ ಚನ್ನಮ್ಮನ ದಂಡೆ, ಚುಕ್ಕಿ ಎಲ್ಲವೂ ಕಾಣ್ತಿದ್ದವು, ಅವು ಆಕಾಶದಲ್ಲಿ ನಿಂತು ಕರೆಯುತ್ತಿರುವಂತೆ ಕಾಣುತ್ತಿದ್ವು. ಸಿದ್ದಜ್ಜ ಹೇಳುತ್ತಿದ್ದ ರಾಣಿ ಚೆನ್ನಮ್ಮ ಬ್ರಿಟಿಷರನ್ನು ಕೊಂದು ಮೋಸಕ್ಕೀಡಾಗಿ ಆಕಾಶದಲ್ಲಿ ಚುಕ್ಕಿಯಾಗಿ ಗರತಿಯರ ಮುಡಿಯಲ್ಲಿನ ಹೂದಂಡೆಯ ಹಾಗೆ ತನ್ನ ದಂಡಿನೊಂದಿಗೆ ಬೆಳಗುವ ಚುಕ್ಕೆಗಳಂತೆ ಚನ್ನಮ್ಮನ ದಂಡೆ – ಎನ್ನುವ ಕಥೆ ಹೇಳ್ತಿನಿ ಬಾ ಮಗಾ ಎಂಬಂತೆ ತಂಗಾಳಿ ಬೀಸಿ ಕರೆದಂಗಾತು, ಪಕ್ಕದಲ್ಲಿ ಅಪ್ಪ ಮಲಗಿದ್ದನೆಂದು ಕಣ್ಮುಚ್ಚಲು ಪ್ರಯತ್ನಿಸಿದ. ಯಾರೋ ಅಳುವ ಸದ್ದು, ಅದೇ ಬಿಕ್ಕು ಧಿಗ್ಗನೆದ್ದು ಕುಳಿತ ನರಸಿಂಹ ''ಅಪ್ಪಾ, ಅಳಬ್ಯಾಡಪ್ಪ, ಅಪ್ಪಾ ಅಳಬ್ಯಾಡಪ್ಪಾ'' ಎಂದು ಅಪ್ಪನನ್ನು ಸಮಾಧಾನಪಡಿಸಹತ್ತಿದ.

ನರಸಿಂಹನಿಗೆ ಕೆರೆಯಂಗಳದಲ್ಲಿ ರಾತ್ರಿ ಕಲ್ಲಂಗಡಿ ಬಳ್ಳಿ ಕಾಯುವಾಗ ಅವ್ವ ಹೇಳಿದ ಕಥೆ ನೆನಪಾಯ್ತು, ''ಅಗೋ ನೋಡ ಮಗ, ಆ ಗುಡ್ಡ ಐತಲ್ಲಾ ಅದೇ ಕೆಂಪಾಗೈಯ್ತೆ. ಅದು, ಮತ್ತೆ ಈ ಕಡೆಗೆ ಐತಲ್ಲಾ ಬಿಳಿ ಗುಡ್ಡ ಅದಕ್ಕೊಂದು ಕಥೆ ಹೇಳ್ತಿನಿ ಕೇಳು'' ಎಂದು...

ಕುಮಾರಸ್ವಾಮಿಯೆಂಬೋ ಮಗನಿಗೆ ಮದ್ವಿ ಮಾಡಾಕಾಂತಾ ಪಾರ್ವತಿ ಪರಮೇಶ್ವರ ನಿರ್ಣಯಿಸ್ತಾರೆ. ಆವಾಗ ಪಾರ್ವತಿ ದೂರದ ಕನ್ಯಾಕುಮಾರಿಯಿಂದ ಚೆಲುವಿಯನ್ನು ಕನ್ಯಾ ಅಂತಾ ನೋಡಿಬರ್‍ತಾಳ, ಅವಳು ಬೆಳದಿಂಗಳಿನಂತೆ ಚೆಲುವಿ ಇರ್‍ತಾಳ, ಅಂತಾಕಿನ ಸೊಸೆ ಮಾಡ್ಕೊಂಡೇ ತೀರಬೇಕು ಅಂತಾ ಪಾರ್ವತಿಗೂ ಆಸೆಯಾಯ್ತಂತೆ. ಆಗ ಕುಮಾರಸ್ವಾಮಿ – ಕನ್ಯಾ ನೋಡಿ ಹಿಂತಿರುಗಿದ ತಾಯಿನ ''ಅವ್ವಾ, ಹೆಣ್ಣು ಹೆಂಗವಳೇ ?'' ಅಂತಾ ಕೇಳಿದ್ದಕ್ಕೆ ಪಾರ್ವತಿ ಯಾವುದೋ ಗ್ಯಾನದಾಗ ''ನನ್ನಂಗ ಸುಂದ್ರ ಅದಾಳ'' ಅಂದ್ಲಂತೆ. ಅಂಗಂದಿದ್ದೆ ತಡ ಕುಮಾರಸ್ವಾಮಿಗೆ ಚಿಂತಿ ಅತ್ತಿತಂತೆ, ಅವ್ವನಂಗ ಇರೋ ಹೆಣ್ಣು ನನಗೆ ಬ್ಯಾಡಾ, ಈ ಜಗದಲ್ಲಿನ ಎಲ್ಲಾ ಹೆಣ್ಮಕ್ಕಳು ನನ್ನ ತಾಯಿ ಸಮಾನ ಅಂತಾ ಹಠ ಹಿಡಿದು ಕುಂತನಂತೆ, ಆಗ ಪಾರ್ವತಿ, ''ನೀನು ಮದುವೆ ಆಗತಿ ಅಂತಾ ನಾನಾಗ್ಲೆ ಮಾತ ಕೊಟ್ಟು ಬಂದೀನಿ'' ಅಂದ್ಲಂತೆ. ಅದಕ್ಕೆ ಕುಮಾರಸ್ವಾಮಿ ಸುತರಾಂ ಒಪ್ಪಲಿಲ್ಲಂತೆ. ಆಗ ಪಾರ್ವತಿಗೆ ಸಿಟ್ಟು ಬಂದು, ''ನನ್ನ ಹೊಟ್ಯಾಗ ಹುಟ್ಟಿ ನನ್ನ ರಕ್ತ ಬಸಿದೀನಿ, ನನ್ನ ಹಾಲು ಕುಡಿದು ಬೆಳೆದಿ, ನೀನು ನನ್ನ ರಕ್ತ, ಹಾಲು ಕಕ್ಕಿಬಿಡು'' ಅಂತಾ ಹೇಳಿದ್ಲಂತೆ. ''ಹಂಗ್ ಕಾರಿದ ರಕ್ತ ಕೆಂಪುಗುಡ್ಡ, ಉರುಮಂಜು ಆಯ್ತಂತೆ, ಹಾಲು-ವಿಭೂತಿ ಗುಡ್ಡಿ ಆತಂತೆ'' ಎಂದು ಅವ್ವ ಹೇಳುತ್ತಿದ್ದುದು ನೆನಪಾಯ್ತು, ಕಣ್ಣು ನಿಧಾನಕ್ಕೆ ನಿದ್ದೆಗೆ ಜಾರಿದವು.

ಮುಂಜಾನೆ ಕಣ್ಣು ತೆರೆದಾಗ ತೊನ್ನು ಹತ್ತಿದ ಮುದುಕರಂತೆ ಯಾವುದೋ ನಿಗೂಢ ರೋಗಕ್ಕೆ ತುತ್ತಾದವರಂತೆ ತೋರುವ ಗುಡ್ಡಗಳು, ಡಾಕ್ಟರಿಗೆ ತೋರಿಸಿ ಆರೈಕೆ ಮಾಡಿಸಿಕೊಳ್ಳಲು ಮಕ್ಕಳಿಲ್ಲದೆ ಅನಾಥರಂತೆ ರೋದಿಸುತ್ತಾ ಕುಳಿತವರಂತೆ ತೋರುತ್ತಿದ್ದವು. ಅತ್ತಿಂದಿತ್ತ ಓಡಾಡುವ ಕಾರು-ಜೀಪು, ಲಾರಿ-ಟಿಪ್ಪರುಗಳು ಎಬ್ಬಿಸುವ ಧೂಳಿನಲ್ಲಿ ತಂದೆ ಮಗ ಇಬ್ಬರೂ ಕಾಣದಾದರು. ಕಾರ್ಮೋಡ ಕರಗಿ ನೀರಾಗಿ ಹರಿಯತೊಡಗಿತ್ತು. ಅಪ್ಪ ಹೇಳಿದ ಕುಮಾರಸ್ವಾಮಿಯ ಅದಿರು ಅಗೆದವರ ಬೆವರು ಕೆಂಪನೆಯ ನೆತ್ತರಾಗಿ ಗುಡ್ಡ ಬೆಟ್ಟ ಕಂದಕಗಳನ್ನು ತುಂಬಿ ಧುಮ್ಮಿಕ್ಕುವಂತೆ ಸುರಿಯುತ್ತಿತ್ತು. ಸುರಿವ ಮಳೆಯಲ್ಲೂ ಸುಮ್ಮನೆ ಮಲಗಿದ್ದ ಅಪ್ಪನನ್ನು ನರಸಿಂಹ ''ಅಪ್ಪ ಏಳಪ್ಪ, ಅಪ್ಪ ಏಳಪ್ಪ ಮಳೆ ಬರ್‍ತಿದೆ'' ಎಂದು ಅಲ್ಲಾಡಿಸುತ್ತಲೇ ಇದ್ದ, ಸುರಿವ ಮಳೆಯ ನೆತ್ತರಿಗೆ ಊರುಕೇರಿ ಕಾಣದಾಯಿತು.

ಬಿ. ಶ್ರೀನಿವಾಸ್
ಶಿರಸ್ತೇದಾರ, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ - ೫೮೧ ೧೧೦

# ಕುಹುಯೋಗದಲ್ಲಿ ವ್ಯಾಸರಾಯರ ಸಿಂಹಾಸನಾರೋಹಣ: ಒಂದು ಕಟ್ಟುಕತೆ

ಡಾ॥ ಹೆಚ್. ಚಂದ್ರಶೇಖರ

ಮೈಸೂರು ಜಿಲ್ಲೆಯ ಸೋಸಲೆ ಬಳಿಯ ಬನ್ನೂರು ಗ್ರಾಮದಲ್ಲಿ ಕ್ರಿ.ಶ. ೧೪೪೬ರಲ್ಲಿ ಜನಿಸಿ, ಕ್ರಿ.ಶ. ೧೫೪೦ ಅಥವಾ ೧೫೩೯ರಲ್ಲಿ ಹಂಪಿಯಲ್ಲಿ (ನವ ವೃಂದಾವನ) ವೃಂದಾವನಸ್ಥರಾದ ವ್ಯಾಸರಾಯರು ಮಾಧ್ವ ಸಂಪ್ರದಾಯದ ಅತ್ಯಂತ ಪ್ರಮುಖ ಹಾಗೂ ಪ್ರಭಾವಿ ಸಂನ್ಯಾಸಿಗಳು. ಅವರನ್ನು ವಿಜಯನಗರದ ಸಾಮ್ರಾಟ ಕೃಷ್ಣದೇವರಾಯನು ತನ್ನ ಗುರುವೆಂದು ಸ್ವೀಕರಿಸಿ, ಅಪಾರ ಭಕ್ತಿ-ಗೌರವಗಳಿಂದ ಕಾಣುತ್ತಿದ್ದನು ಎಂಬುದಕ್ಕೆ ರಾಯನ ಹಲವಾರು ಶಾಸನಗಳು ಸಾಕ್ಷಿಯಾಗಿವೆ.

ಇಂಥ ಮಹಾನುಭಾವರು ಕುಹುಯೋಗದ ಕ್ಷಣಗಳಲ್ಲಿ ಕರ್ನಾಟಕ ಸಿಂಹಾಸನವನ್ನೇರಿ ರಾಯನನ್ನು ಕಾಪಾಡಿದರೆಂದು ಕೆಲ ಇತಿಹಾಸಕಾರರು ಹಾಗೂ ಧಾರ್ಮಿಕ ಬರಹಗಾರರು ನಂಬುತ್ತಾರೆ. ಇಂಥ ಅಪರೂಪದ ಘಟನೆಯ ಬಗ್ಗೆ ಐತಿಹಾಸಿಕ ಮತ್ತು ವೈಜ್ಞಾನಿಕ ಹಿನ್ನೆಲೆಗಳಲ್ಲಿ ವಿಶ್ಲೇಷಿಸುವುದು ಈ ಸಂಪ್ರಬಂಧದ ಉದ್ದೇಶವಾಗಿದೆ. ಮುಂದೆ ಚರ್ಚಿಸುವುದಕ್ಕೆ ಮೊದಲು ಕುಹುಯೋಗ ಅಂದರೇನು ಎಂಬುದನ್ನು ತಿಳಿಯುವುದು ಅವಶ್ಯಕ.




ರಾಹು ಮತ್ತು ಕೇತುಗಳೆಂಬ ಬಿಂದುಗಳು ( ಆಕರ : ನವಕರ್ನಾಟಕ ಜ್ಞಾನ - ವಿಜ್ಞಾನ ಕೋಶ, ಸಂ-೨)

**ಕುಹುಯೋಗ ಅಂದರೇನು ?**

ವೆಂಕೋಬರಾಯರು ಕುಹುಯೋಗವೆಂದರೆ ಸೂರ್ಯ, ಮಂಗಳ (ಅಂಗಾರಕ) ಮತ್ತು ಶನಿ ಗ್ರಹಗಳು ರಾಹುವಿನಲ್ಲಿ ಒಂದೇ ಭೂಕೇಂದ್ರೀಯ ರೇಖಾಂಶದಲ್ಲಿ ಒಂದಾಗಿರುವುದು ಎಂದು ವಿವರಿಸುತ್ತಾರೆ. ಕೆಲವು ಲೇಖಕರು ರಾಹು ಕೂಡ ಒಂದು ಗ್ರಹವೆಂದು ಭಾವಿಸಿ ಈ ನಾಲ್ಕು ಗ್ರಹಗಳು ಒಂದೇ ಮನೆಯಲ್ಲಿ ಒಂದಾಗಿರುವುದೇ ಕುಹುಯೋಗವೆಂದು ಬರೆಯುತ್ತಾರೆ; ಇದು ಸರಿ ಅಲ್ಲ. ರಾಹು ಮತ್ತು ಕೇತುಗಳು ಗ್ರಹಗಳಲ್ಲ ಅಥವಾ ಯಾವುದೇ ಆಕಾಶಕಾಯಗಳಲ್ಲ. ಅವೆರಡೂ ಒಂದೊಂದು ಬಿಂದುಗಳು, ಭೂಮಿಯನ್ನು ಪಶ್ಚಿಮ-ಪೂರ್ವದಿಶೆಯಲ್ಲಿ ಪರಿಭ್ರಮಿಸುತ್ತಿರುವ ಚಂದ್ರಕ್ರಾಂತಿ ವೃತ್ತವನ್ನು ಧ್ರುವ ನಕ್ಷತ್ರವಿರುವ ಗೋಳಾರ್ಧದೆಡೆಗೆ ದಾಟುವ ಬಿಂದುವಿಗೆ ರಾಹು ಎಂದು ಕರೆಯಲಾಗುತ್ತದೆ. ಹಾಗೆಯೇ ಉತ್ತರ ಗೋಳಾರ್ಧದಿಂದ ದಕ್ಷಿಣ ಗೋಳಾರ್ಧದ ಕಡೆಗೆ ದಾಟುವ ಬಿಂದುವನ್ನು ಕೇತು ಎಂದು ಕರೆಯಲಾಗುತ್ತದೆ. ಇದು ಖಗೋಳಶಾಸ್ತ್ರದಲ್ಲಿ ವಿವರಿಸಲಾಗುವ ಸರಿಯಾದ ವೈಜ್ಞಾನಿಕ ವಿವರಣೆ.

**ಎಷ್ಟು ಕುಹುಯೋಗಗಳು**

ಇಂಥ ಕುಹುಯೋಗವು ಯಾವಾಗ ಸಂಭವಿಸಿತು ಎಂಬುದನ್ನು ತಿಳಿಯುವುದು ಅವಶ್ಯ. ಸ್ವಾಮಿಕಣ್ಣುಪಿಳ್ಳೆಯವರ ಕೋಷ್ಟಕವನ್ನಾಧರಿಸಿ ಗುರುವಾರ, ಫೆಬ್ರುವರಿ ೪, ಕ್ರಿ.ಶ. ೧೫೨೪ರಂದು ಸಂಭವಿಸಿತೆಂದು ಇತಿಹಾಸಕಾರರು ಬರೆಯುತ್ತಾರೆ. ಅಂದು ಅಮಾವಾಸ್ಯೆಯಾಗಿತ್ತು. ಅಂದು ಮೂರು ಮುಕ್ಕಾಲು ಘಳಿಗೆ ಕಾಲ ವ್ಯಾಸರಾಯರು ಸಿಂಹಾಸನವನ್ನೇರಿ ಕೃಷ್ಣದೇವರಾಯನಿಗೆ ಒದಗಬಹು ದಾಗಿದ್ದ ಅಪಾಯವನ್ನು (ಮೃತ್ಯು) ನೀಗಿಸಿದರೆಂದು ಕೆಲ ಇತಿಹಾಸಕಾರರು ಬರೆಯುತ್ತಾರೆ. ಆದರೆ ವೆಂಕೋಬರಾಯರು, ಕೆಲವು ಜ್ಯೋತಿಷಿಗಳನ್ನು ಸಂಪರ್ಕಿಸಿ ತಮ್ಮ ಮುನ್ನುಡಿಯ ಪ್ಯಾರಾ ೧೪೨ರಲ್ಲಿ ಅಂತಹ ಒಟ್ಟು ಏಳು ಕುಹುಯೋಗಗಳು ಸಂಭವಿಸಿದವು ಎಂದು ಈ ಕೆಳಗಿನಂತೆ ದಿನಾಂಕಗಳನ್ನು ಕೊಟ್ಟಿದ್ದಾರೆ.

| ಕ್ರಮ ಸಂಖ್ಯೆ | ದಿನಾಂಕ |
|---|---|
| * ೧ | ೪.೨.೧೫೨೪ |
| ೨ | ೨೨.೧೧.೧೫೧೯ |
| ೩ | ೧೦.೧೧.೧೫೨೦ |
| ೪ | ೨೯.೧೧.೧೫೨೧ |
| ೫ | ೧೮.೧೧.೧೫೨೨ |
| ೬ | ೬.೧೧.೧೫೨೩ |
| ೭ | ೨೫.೧೧.೧೫೨೪ |

(* ಈ ಕುಹುಯೋಗವನ್ನು ಮಾತ್ರ ಇತಿಹಾಸಕಾರರು ಉಲ್ಲೇಖಿಸುತ್ತಾರೆ.)

ನಾನು ಇಬ್ಬರು ಖಗೋಳಶಾಸ್ತ್ರಜ್ಞರೊಡನೆ (ಡಾ॥ ಬಿ. ಎಸ್. ಶೈಲಜಾ ಮತ್ತು ಡಾ॥ ಎಸ್. ಬಾಲಚಂದ್ರರಾವ್) ಚರ್ಚಿಸಿದ್ದೇನೆ. ಈ ಹಿನ್ನೆಲೆಯಲ್ಲಿ ಈ ಕುಹುಯೋಗದ ಪರಿಕಲ್ಪನೆ ಖಗೋಳಶಾಸ್ತ್ರದಲ್ಲಿಲ್ಲ; ಇದೊಂದು ಫಲಜ್ಯೋತಿಷದ ಪರಿಕಲ್ಪನೆ ಎಂಬುದು ಚರ್ಚೆಯಿಂದ ತಿಳಿದುಬಂತು.

**ಸಮಕಾಲೀನ ಶಾಸನಗಳಲ್ಲಿ ಮತ್ತು ಸಾಹಿತ್ಯದಲ್ಲಿ ಕುಹುಯೋಗದ ಉಲ್ಲೇಖವಿಲ್ಲ**

ಈ ಸದರಿ ಕುಹುಯೋಗದಂದು ರಾಜಗುರು ವ್ಯಾಸರಾಯರು ಸಿಂಹಾಸನವನ್ನೇರಿದರು ಎಂದು ಯಾವ ಸಮಕಾಲೀನ ಇತಿಹಾಸಕಾರರೂ ದಾಖಲಿಸಿಲ್ಲ. ರಾಯನ ಶಾಸನಗಳಲ್ಲಿಯೂ ಈ ಬಗ್ಗೆ ಉಲ್ಲೇಖವಿಲ್ಲ. ಆದರೆ ವೈಷ್ಣವ ಸಂಪ್ರದಾಯಕ್ಕೆ ಸೇರಿದ ಕೆಲವರು ಇತಿಹಾಸಕಾರರು ಮತ್ತು ದಾಸಸಾಹಿತ್ಯದ ಲೇಖಕರು ಇದು ಶಾಸನೋಕ್ತ ಘಟನೆ ಎಂದು ಬರೆದಿದ್ದಾರೆ. ರಾಯನು ವ್ಯಾಸರಾಯರಿಗೆ ಮಾಡಿದ ರತ್ನಾಭಿಷೇಕ ಮತ್ತಿತರ ದಾನಗಳೂ ಕುಹುಯೋಗದಿಂದ ಪಾರಾದದ್ದರಿಂದ ನೀಡಿದ ದಾನಗಳೆಂದು ಇವರು ಬರೆಯುತ್ತಾರೆ. ಈ ಶಾಸನಗಳಲ್ಲಿ ರಾಯನು ಭಕ್ತಿಪೂರ್ವಕವಾಗಿ ವ್ಯಾಸರಾಯರಿಗೆ ಪೂಜೆ, ಅಭಿಷೇಕ ಮಾಡಿದ್ದು ಮಾತ್ರ ಉಲ್ಲೇಖವಾಗಿದೆ. ಕುಹುಯೋಗ ನಿಜವಾಗಿ ನಡೆದು, ವ್ಯಾಸರಾಯರು ಸಿಂಹಾಸನಾರೋಹಣ ಮಾಡಿದ್ದೇ ಆಗಿದ್ದರೆ, ಇದೊಂದು ಅತ್ಯಪೂರ್ವ ಘಟನೆಯಾಗಿದ್ದು, ಶಾಸನಗಳಲ್ಲಿ, ಸಮಕಾಲೀನ ಪ್ರವಾಸೀ ಬರಹಗಳಲ್ಲಿ, ಖಂಡಿತವಾಗಿ ಉಲ್ಲೇಖಿತವಾಗುತ್ತಿತ್ತು.

**ವ್ಯಾಸಯೋಗಿ ಚರಿತಮ್**

ಸೋಮನಾಥ ಕವಿ ಸಂಸ್ಕೃತದಲ್ಲಿ ಬರೆದ ಸಮಕಾಲೀನ

ಕಾವ್ಯದಲ್ಲಿಯೂ ಈ ಸದರಿ ತಾತ್ಕಾಲಿಕ ಸಿಂಹಾಸನಾರೋಹಣದ ವರ್ಣನೆ ಇಲ್ಲ. ಸೋಮನಾಥ ಕವಿಯು 'ವ್ಯಾಸಯೋಗಿ ಚರಿತಮ್' ಬರೆದು ಸ್ವತಃ ವ್ಯಾಸರಾಯರಿಗೆ ಅರ್ಪಿಸಿದಾಗ ಅವರು ಕವಿಯನ್ನು ಸನ್ಮಾನಿಸಿದರೆಂದರೆ, ಇದೊಂದು ನಂಬಲರ್ಹ ಕೃತಿ. ಇಂಥ ಕೃತಿಯಲ್ಲಿ ಈ ಸಿಂಹಾಸನಾರೋಹಣದ ಉಲ್ಲೇಖವಿಲ್ಲವಾದ್ದರಿಂದ, ಈ ಸಿಂಹಾಸನಾರೋಹಣದ ಘಟನೆಯನ್ನು ನಂಬಲಾಗದೆಂದು ಇತಿಹಾಸಕಾರ್ತಿ ಕೊಂಡೂರಿ ಸರೋಜಿನಿ ದೇವಿ ಅಭಿಪ್ರಾಯಪಟ್ಟಿದ್ದಾರೆ.

**ರಾಯವಾಚಕ**

ಪಾಂಡ್ಯ ರಾಜಧಾನಿ ಮಧುರೆಯ ಕಾಶೀ ವಿಶ್ವನಾಥ ನಾನಯ್ಯನ ರಾಯಭಾರಿ ಬರೆದಿರುವ ''ರಾಯವಾಚಕವನ್ನು ಒಂದು ಪ್ರಮುಖ ತೆಲುಗು ಕೃತಿ ಎಂದೂ, ಪ್ರಮುಖ ಐತಿಹಾಸಿಕ ಆಕರಗ್ರಂಥವೆಂದೂ ಪರಿಗಣಿಸಲಾಗಿದೆ. ಈ ಗದ್ಯ ಕೃತಿಯನ್ನು ರಚಿಸಿರುವ ಲೇಖಕನ ಹೆಸರು ಗೊತ್ತಾಗಿಲ್ಲವೆಂದು'' ಇದನ್ನು ಅನುವಾದಿಸಿರುವ ಗುರುಮೂರ್ತಿ ಪೆಂಡಕೂರು ತಿಳಿಸುತ್ತಾರೆ.

ಕೃಷ್ಣದೇವರಾಯನ ಆಸ್ಥಾನದಲ್ಲಿ ಮಧುರೆಯ ಕಾಶೀ ವಿಶ್ವನಾಥ ನಾನಯ್ಯನ ರಾಯಭಾರಿಯಾಗಿದ್ದ ಈ ಅನಾಮಧೇಯ ಲೇಖಕನೂ ಕುಹುಯೋಗದ ಬಗ್ಗೆಯಾಗಲೀ, ವ್ಯಾಸರಾಯರ ತತ್ಕಾಲೀನ ಸಿಂಹಾಸನಾರೋಹಣದ ಬಗ್ಗೆಯಾಗಲೀ, ಬರೆದಿಲ್ಲ. ಬದಲಾಗಿ ಕೃಷ್ಣದೇವರಾಯನ ಆಡಳಿತ ಮತ್ತು ದಿನಚರಿಯ ವಿವರಗಳನ್ನು ಕುರಿತಂತೆ ಈ ಲೇಖಕನು ನಂಬಲರ್ಹ ಮಾಹಿತಿಗಳನ್ನು ನೀಡುತ್ತಾನೆ. ಇಂಥ ವರದಿಯಲ್ಲಿ ಸದರಿ ತತ್ಕಾಲೀನ ಸಿಂಹಾಸನಾರೋಹಣದ ಉಲ್ಲೇಖವಿಲ್ಲ ಎಂಬುದನ್ನು ಗಮನಿಸಲೇಬೇಕು.

**ಅಮುಕ್ತ ಮಾಲ್ಯದ**

ಇನ್ನು ರಾಯನೇ ರಚಿಸಿದ ತೆಲುಗು ಚಂಪೂ ಕಾವ್ಯ 'ಅಮುಕ್ತ ಮಾಲ್ಯ'ದಲ್ಲಿ ಕುಹುಯೋಗದ ಉಲ್ಲೇಖವೇ ಇಲ್ಲ. ಆದರ ಬದಲಾಗಿ ಮೂರು ನೈಸರ್ಗಿಕ ವಿಕೋಪಗಳ ಉಲ್ಲೇಖವಿದೆ (IV-೨೪೨) ಮತ್ತು ಅವುಗಳ ದುಷ್ಪರಿಣಾಮಗಳ ಪರಿಹಾರಕ್ಕಾಗಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನಗಳನ್ನು ನೀಡಬೇಕೆಂದು ರಾಯನು ಬರೆದಿದ್ದಾನೆ (IV-೨೫೩). ಮೂಢನಂಬಿಕೆಗೆ ಇದೊಂದು ಉದಾಹರಣೆ. ರಾಜನಾದವನು ವಿಕೋಪಗಳಿಗೆ ಒಳಗಾದ ಪ್ರಜೆಗಳಿಗೆ ಪರಿಹಾರ ನೀಡಬೇಕು; ಆದರ ಬದಲಾಗಿ ಬ್ರಾಹ್ಮಣರಿಗೆ ದಾನಗಳನ್ನು ನೀಡುವುದೆಂದರೆ, ಅದೊಂದು ಮೂಢನಂಬಿಕೆ ಅಲ್ಲದೆ ಮತ್ತಿನ್ನೇನು ? ಸದರಿ ಕಾವ್ಯದ ಸಂಬಂಧಿತ ನುಡಿಗಳ ಇಂಗ್ಲಿಷ್ ಅನುವಾದಗಳನ್ನು ಓದುಗರಿಗಾಗಿ ಈ ಕೆಳಗೆ ಕೊಡಲಾಗಿದೆ :

*"That would increase in the state evils*
*such as famine, disease and infant mortality !*
*So, it is sufficient if the king shows bhakti towards them !*
*The only evil that might then result is their suffering.*
*But no sin would accrue to the sovereign !*
*Be assured of this !* (IV - 242)

*"When the three sorts of disasters occur*
*The king should spend much money in feeding Brahmins,*
*And in appeasing gods*
*By offerings in the sacrificial fire !"*

ಅಂದರೆ, ನೋವಿನಿಂದ ಬಳಲುವ ಪ್ರಜೆಗಳಿಗಿಂತ ಭೂಸುರರ ಸಂತೃಪ್ತಿ, ಕಾಣದ ದೇವರುಗಳ ಸಂತೃಪ್ತಿ ಮತ್ತು ಯಾಗ-ಹೋಮಗಳೇ ಮುಖ್ಯವೆಂದು ಹೇಳುತ್ತಾನೆ ಈ ಸಾಮ್ರಾಟ !!

ಈ ಆಕ್ಷೇಪಣೆಗೆ ಉತ್ತರವೆಂಬಂತೆ, ರಾಯನು ಈ ಚಂಪೂ ಕೃತಿಯನ್ನು ಕ್ರಿ.ಶ. ೧೫೧೯ರಲ್ಲಿ ಆರಂಭಿಸಿ, ಕ್ರಿ.ಶ. ೧೫೨೦ರಲ್ಲಿ ಮುಗಿಸಿರಬಹುದೆಂದು ಡಾ|| ರಾಮಚಂದ್ರಯ್ಯ ಊರುಗುಂಟಿ ಅಭಿಪ್ರಾಯಪಡುತ್ತಾರೆ. ಮುಂಬರುವ ಕುಹುಯೋಗದ ಉಲ್ಲೇಖ ಈ ಚಂಪೂ ಕಾವ್ಯದಲ್ಲಿಲ್ಲ ಎಂಬುದು ಅವರ ಅಭಿಪ್ರಾಯ. ವಾದಕ್ಕಾಗಿ ಈ ಊಹೆಯನ್ನು ಒಪ್ಪಿಕೊಂಡರೂ, ಮೇಲೆ ಕ್ರ.ಸಂ. ೨ ಮತ್ತು ೩ರಲ್ಲಿ ತೋರಿಸಲಾಗಿರುವ ೧೫೧೯ ಮತ್ತು ೧೫೨೦ರಲ್ಲಿ ಸಂಭವಿಸಿರಬಹುದಾದ ಕುಹುಯೋಗಗಳ ಉಲ್ಲೇಖ ವಾದರೂ 'ಅಮುಕ್ತ ಮಾಲ್ಯದ'ದಲ್ಲಿ ಬರಬೇಕಾಗಿತ್ತಲ್ಲವೆ ? ಈ ಕಾರಣದಿಂದಲೂ ಕುಹುಯೋಗದಲ್ಲಿ ತತ್ಕಾಲೀನ ಸಿಂಹಾಸನಾರೋಹಣದ ಘಟನೆಯನ್ನು ನಂಬುವಂತಿಲ್ಲ.

**ಪುರಂದರದಾಸರು ಮತ್ತು ಕನಕದಾಸರು**

ವ್ಯಾಸರಾಯರಿಂದಲೇ ದೀಕ್ಷೆ ಪಡೆದ ಹಾಗೂ ಕೃಷ್ಣದೇವರಾಯನ ಕಾಲದಲ್ಲಿಯೇ ಬದುಕಿದ್ದ ಪುರಂದರದಾಸರ ಮತ್ತು ಕನಕದಾಸರ ಕೃತಿಗಳಲ್ಲಿ ಸದರಿ ಘಟನೆಯ ಉಲ್ಲೇಖವಿಲ್ಲ. ತಮ್ಮ ದೀಕ್ಷಾ ಗುರುಗಳಾದ ಶ್ರೀ ವ್ಯಾಸರಾಯರು ಕೃಷ್ಣರಾಯನಿಗೆ ಒದಗಬಹುದಾಗಿದ್ದ ಮೃತ್ಯುದೋಷದ ಪರಿಹಾರಕ್ಕಾಗಿ ತಾತ್ಕಾಲಿಕವಾಗಿ ಕರ್ನಾಟಕ ಸಿಂಹಾಸನಾರೋಹಣ ಮಾಡಿದ್ದರೆ, ಈ ದಾಸವರೇಣ್ಯರು ತುಂಬು ಹೃದಯದಿಂದ ಭಕ್ತಿಪೂರ್ವಕವಾಗಿ ವರ್ಣಿಸುತ್ತಿದ್ದರು. ಆದರೆ ಹಾಗಿಲ್ಲ; ಇದರ ಅರ್ಥ ಸ್ಪಷ್ಟ.




**ವಿಜಯದಾಸರ ಕೃತಿಯಲ್ಲಿ ಮಾತ್ರ ಉಲ್ಲೇಖ ಇದೆ.**

ದಾಸಸಾಹಿತ್ಯದಲ್ಲಿ ವಿಜಯವಿಠ್ಠಲ ಎಂಬ ಅಂಕಿತದಿಂದ ಕೃತಿಗಳನ್ನು ರಚಿಸಿರುವ ಪುರಂದರದಾಸರ (ಕ್ರಿ.ಶ. ೧೪೮೪-೧೫೬೪) ನಂತರ ಸುಮಾರು ನೂರು ವರ್ಷಗಳು ಕಳೆದ ಮೇಲೆ ಬಂದ ವಿಜಯದಾಸರು ಮಾತ್ರ ತಮ್ಮದೊಂದು ಕೃತಿಯಲ್ಲಿ ಶ್ರೀ ವ್ಯಾಸರಾಯರನ್ನು ಭಜಿಸುವಾಗ ಈ ರೀತಿಯಾಗಿ ಹೇಳುತ್ತಾರೆ :

ರಾಯ ಗದ್ದುಗೆಯನೇರಿ ಅವನಿಗೆ ಬಂದ ಮಹ ಕು
ಹಯೋಗವನೆ ನೂಕಿ ರಾಜ್ಯದೊಳಗೆ ಇದು
ಮಾಯಿಗಳ ಮರ್ದಿಸಿ ಮುದದಿಂದ ಸುವರ್ಣ
ಛಾಯದಂತೆ ಕಾಂತಿಯಲಿ (ನುಡಿ ೧೪)

ನನಗೆ ಲಭ್ಯವಾದ ಸಾಹಿತ್ಯ ಮತ್ತು ಶಾಸನಗಳ ಅಧ್ಯಯನದಲ್ಲಿ ಈ ನುಡಿಯಲ್ಲಿ ಮಾತ್ರ ಕುಹುಯೋಗದ ಉಲ್ಲೇಖವಿದೆ. ಆದರೆ, ಇದು ಸುಮಾರು ೧೫೦ ವರ್ಷಗಳ ನಂತರ ರಚನೆಯಾಗಿರುವುದರಿಂದ ನಂಬಲರ್ಹವಾದ ಐತಿಹಾಸಿಕ ದಾಖಲೆಯಾಗುವುದಿಲ್ಲ. ಬದಲಾಗಿ, ವಿಜಯದಾಸರು ತಾವು ಭಜಿಸುವ ವ್ಯಾಸರಾಯರನ್ನು ಪವಾಡಪುರುಷರು ಎಂದು ಬಿಂಬಿಸುವುದಕ್ಕಾಗಿ ಈ ನುಡಿಯನ್ನು ರಚಿಸಿದ್ದಾರೆಂದು ಹೇಳಬೇಕಾಗುತ್ತದೆ. ಬಹುಶಃ ಈ ಒಂದು ನುಡಿ ಮುಂದಿನ ಕೆಲ ಇತಿಹಾಸಕಾರರಿಗೂ ದಾಸಸಾಹಿತ್ಯದ ಅಧ್ಯಯನಕಾರರಿಗೂ ಕುಹುಯೋಗದ ಕಲ್ಪನೆಗೆ ಪ್ರೇರಣೆ ನೀಡಿರಬಹುದೆಂದು ತರ್ಕಿಸಬಹುದಾಗಿದೆ.

**ಕುಹುಯೋಗದ ಚಿತ್ರ**

ಭಾರ್ಗವಿ ಶಿವಯ್ಯನವರು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ೧೯೭೨ರಲ್ಲಿ ಸಲ್ಲಿಸಿದ ತಮ್ಮ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಒಂದು ಕುತೂಹಲಕಾರಿ ಛಾಯಾಚಿತ್ರವನ್ನು ಪ್ರಸ್ತುತಪಡಿಸಿ, ಈ ಫೋಟೋದ ಅಡಿಯಲ್ಲಿ "Sri Vysaraya on the throne on the occasion of a Kuhuyoga" ಎಂದು ಬರೆದಿದ್ದಾರೆ. ಆದರೆ ತಮ್ಮ ಮಹಾಪ್ರಬಂಧದಲ್ಲಿ ಎಲ್ಲಿಯೂ ಈ ಬಗ್ಗೆ ಒಂದು ವಾಕ್ಯವನ್ನಾದರೂ ಬರೆದಿಲ್ಲ; ಚರ್ಚಿಸಿಲ್ಲ. ಇದೊಂದು ವಿರೋಧಾಭಾಸದ ಸಂಗತಿ. ಆದರೂ ಈ ಫೋಟೋವನ್ನು ಸೂಕ್ಷ್ಮವಾಗಿ ಗಮನಿಸಿದ್ದೇನೆ. ಈ ಚಿತ್ರದ ಮಧ್ಯದಲ್ಲಿ ವ್ಯಾಸರಾಯರು ಒಂದು ಪೀಠದ ಮೇಲೆ ಆಸೀನರಾಗಿದ್ದಾರೆ. ಅದೊಂದು ಸಾಮ್ರಾಟನ ಸಿಂಹಾಸನವೆನಿಸುವುದಿಲ್ಲ. ಈ ಪೀಠದ ಅಡಿಯಲ್ಲಿ ೧೦ ಕಿಂಡಿಗಳನ್ನು ಕೊರೆಯಲಾಗಿದೆ. ಇಂಥ ಮೂರನೆಯ ಕಿಂಡಿಯೊಂದರಿಂದ ಐದು ಹೆಡೆಯ ಸರ್ಪವೊಂದು ಹೊರಹೋಗುತ್ತಲಿದೆ. ಅಂದರೆ ಈ ಚಿತ್ರದ ಪ್ರಕಾರ ಕುಹುಯೋಗವೆಂದರೆ ಐದು ಹೆಡೆಗಳ ಸರ್ಪ ಎಂದಂತಾಯಿತು. ನಿಸರ್ಗದಲ್ಲಿ ಸರ್ಪಕ್ಕೆ ಒಂದೇ ಒಂದು ಹೆಡೆ ಇರುತ್ತದೆಯಾದ್ದರಿಂದ ಇದೊಂದು ಅವಾಸ್ತವ ಸಂಗತಿ ಎಂದಂತಾಯಿತು. ಈ ಚಿತ್ರದ ಕಂಬಗಳು ಇತ್ಯಾದಿ ರಚನೆಗಳೂ ಯಾವುದೋ ಮಠದ ಸಾಧಾರಣ ಕಂಬಗಳಂತಿವೆ. ಸಾಮ್ರಾಟನ ಸಭಾಂಗಣದಂತೆ ಕಾಣುವುದಿಲ್ಲ. ಇನ್ನೊಂದು ಮುಖ್ಯ ದೋಷವೆಂದರೆ ವ್ಯಾಸರಾಯರ ಪೀಠದ (ಎಡಬದಿಯಲ್ಲಿ) ಮೇಲೆಯೇ ಶಾರ್ದೂಲವು ತನ್ನ ಹಿಂಬದಿಯ ಕಾಲುಗಳನ್ನು ಊರಿ, ಮುಂದಿನ ಎರಡು ಕಾಲುಗಳನ್ನು ಆನೆಯ ತಲೆಯಮೇಲೆ

ಊರಿದೆ. ಯಾವುದೇ ಸಾಮ್ರಾಟನ ಸಿಂಹಾಸನದ ಮೇಲೆ ಯಾವುದೇ ಪ್ರಾಣಿಯ ಕಾಲುಗಳನ್ನು ಊರಿದಂತೆ ರಚಿಸುವುದು ಸಾಧ್ಯವೇ ಇಲ್ಲ. ಈ ಚಿತ್ರದಲ್ಲಿ ಚಿತ್ರಿತವಾಗಿರುವ ಸಭಾಂಗಣದಲ್ಲಿ ಸಮಾನಾಂತರತೆ ಇಲ್ಲ. ನಾವು ಈಗ ಹಂಪಿಯಲ್ಲಿ ನೋಡುವ ಪುರಾತತ್ವ ಅವಶೇಷಗಳಲ್ಲಿ ಸಮಾನಾಂತರತೆಯನ್ನು ನೋಡಬಹುದು. ಒಟ್ಟಿನಲ್ಲಿ ಹೇಳುವುದಾದರೆ ಇದು ತೀರ ಇತ್ತೀಚೆಗೆ ರಚಿತವಾದ ಒಂದು ಕಲಾಕೃತಿಯಾಗಿದೆ ಎಂಬುದು ಸ್ಪಷ್ಟ. ಇದೊಂದು ನಂಬಲನರ್ಹವಾದ ಅನೈತಿಹಾಸಿಕ ಕಾಲ್ಪನಿಕ ಕೃತಿ. ಇದನ್ನು ಮಹಾಪ್ರಬಂಧದಲ್ಲಿ ಸೇರಿಸಿರುವುದು ಆಭಾಸಕಾರಿಯಾದ ಸಂಗತಿ. ಬಹುಶಃ ಈ ಕಾರಣಕ್ಕಾಗಿ ದಿವಂಗತ ಜಿ. ಎಸ್. ದೀಕ್ಷಿತರು (ಈ ಮಹಾಪ್ರಬಂಧದ ಮಾರ್ಗದರ್ಶಿಗಳಾಗಿದ್ದರೂ) ತಮ್ಮ 'ಕೃಷ್ಣದೇವರಾಯನ ಜೀವನ, ಸಾಧನೆಗಳು' ಎಂಬ ಕೃತಿಯಲ್ಲಿ ಈ ಕುಹುಯೋಗದ ಬಗ್ಗೆಯಾಗಲೀ, ಸದರಿ ಚಿತ್ರದ ಬಗ್ಗೆಯಾಗಲೀ ಚರ್ಚಿಸಿಲ್ಲ. ಇದು ಗಮನಿಸಬೇಕಾದ ಸಂಗತಿ.

**ತೀರ್ಮಾನಗಳು**

ಮೇಲೆ ವಿವರವಾಗಿ ಚರ್ಚಿಸಲಾದ ಅಂಶಗಳನ್ನು ಗಮನದಲ್ಲಿರಿಸಿ ಕೊಂಡು ಈ ಕೆಳಗಿನಂತೆ ತೀರ್ಮಾನಿಸಬಹುದು :

(೧) ಕುಹುಯೋಗವೆಂಬುದು ಖಗೋಳಶಾಸ್ತ್ರದ ಪರಿಕಲ್ಪನೆ ಅಲ್ಲ. ಅದಕ್ಕೆ ವೈಜ್ಞಾನಿಕ ಆಧಾರಗಳಿಲ್ಲ. ಇದು ಫಲಜ್ಯೋತಿಷಿಗಳ ಕಲ್ಪನೆ.

(೨) ಕುಹುಯೋಗ ಮತ್ತು ಶ್ರೀ ವ್ಯಾಸರಾಯರ ತಾತ್ಕಾಲಿಕ ಸಿಂಹಾಸನಾರೋಹಣದ ಬಗ್ಗೆ ಯಾವ ಸಮಕಾಲೀನ ಇತಿಹಾಸಕಾರನಾಗಲೀ, ಪ್ರವಾಸಿಯಾಗಲೀ, ಲೇಖಕನಾಗಲೀ, ಕವಿಯಾಗಲೀ ಬರೆದಿಲ್ಲ.

(೩) ಕೃಷ್ಣದೇವರಾಯನೇ ಬರೆದ ಚಂಪೂಕಾವ್ಯ 'ಅಮುಕ್ತ ಮಾಲ್ಯದ'ದಲ್ಲಿ ಕುಹುಯೋಗದ ಪ್ರಸ್ತಾಪವೇ ಇಲ್ಲ.

(೪) ಒಟ್ಟು ಏಳು ಕುಹುಯೋಗಗಳ ಕಲ್ಪನೆ (ಕ್ರಿ.ಶ. ೧೫೧೯ರಿಂದ ಕ್ರಿ.ಶ. ೧೫೨೪ರವರೆಗೆ) ಫಲಜ್ಯೋತಿಷದಲ್ಲಿದ್ದರೂ, ೪-೨-೧೫೨೪ರ ಕುಹುಯೋಗದ ಬಗ್ಗೆ ಕೆಲ ಲೇಖಕರು ಚರ್ಚಿಸಿದ್ದಾರೆ; ಆದರೆ ಕಾರಣ ಗೊತ್ತಿಲ್ಲ.

(೫) 'ವ್ಯಾಸಯೋಗಿಚರಿತಂ' ಮತ್ತು 'ರಾಯವಾಚಕ' ಕೃತಿಗಳು ಕೃಷ್ಣದೇವರಾಯನ ಕಾಲದಲ್ಲಿ ರಚಿತವಾದ ಸಂಸ್ಕೃತ ಮತ್ತು ತೆಲುಗು ಕೃತಿಗಳಾದರೂ ಇವುಗಳಲ್ಲಿ ಸದರಿ ಕುಹುಹೋಗ ಮತ್ತು ತಾತ್ಕಾಲಿಕವಾಗಿ ವ್ಯಾಸರಾಯರಿಂದ ಸಿಂಹಾಸನಾರೋಹಣ ಮಾಡಿದ ಬಗ್ಗೆ ಉಲ್ಲೇಖವಿಲ್ಲವಾದ್ದರಿಂದ ಕುಹುಹೋಗ ಮತ್ತು ವ್ಯಾಸರಾಯರ ಸಿಂಹಾಸನಾರೋಹಣ ಐತಿಹಾಸಿಕ ಘಟನೆಗಳಲ್ಲ.

(೬) ಕುಹುಯೋಗದ ಕಲ್ಪನೆ ಮತ್ತು ಶ್ರೀ ವ್ಯಾಸರಾಯರು ಪವಾಡಪುರುಷರೆಂದು ಬಿಂಬಿಸಲು, ಯಾರೋ ಕಟ್ಟಿದ ಈ ಕಟ್ಟುಕತೆ ಕೆಲವರಲ್ಲಿ ನಂಬಿಕೆ ಹುಟ್ಟಿಸಿದೆ. ಬಹುಶಃ ವಿಜಯದಾಸರ ಕಾಲದಲ್ಲಿ ಅಥವಾ ಅವರಿಗಿಂತ ಕೊಂಚ ಪೂರ್ವದಲ್ಲಿ ಯಾರೋ ಈ ಕಟ್ಟುಕತೆಯನ್ನು ಪ್ರಚಾರದಲ್ಲಿ ತಂದಿರಬೇಕು.

(೭) ಇದೊಂದು ಕಟ್ಟುಕತೆ ಎಂಬುದನ್ನು ವೈಜ್ಞಾನಿಕವಾಗಿ ಮತ್ತು ಐತಿಹಾಸಿಕವಾಗಿ ಮೇಲೆ ವಿವರಿಸಿ, ಚರ್ಚಿಸಿ, ಸಾಧಿಸಲಾಗಿದೆ.

(ಖಗೋಳಶಾಸ್ತ್ರಜ್ಞರಾದ ಡಾ|| ಬಿ. ಎಸ್. ಶೈಲಜಾ ಮತ್ತು ಡಾ|| ಎಸ್. ಬಾಲಚಂದ್ರರಾವ್ ಅವರೊಂದಿಗೆ ಚರ್ಚಿಸಿ ನನ್ನ ಸಂದೇಹಗಳನ್ನು ಪರಿಹರಿಸಿಕೊಂಡಿದ್ದೇನೆ. ನನಗೆ ಬೇಕಾದ ಒಂದೊಂದು ಆಕರ ಸಾಹಿತ್ಯವನ್ನು ಒದಗಿಸಿದ ಡಾ|| ಎಚ್. ಎಸ್. ಗೋಪಾಲ ರಾವ್, ಡಾ|| ಕೆ. ಜಿ. ಗೋಪಾಲಕೃಷ್ಣ ರಾವ್ ಮತ್ತು ಡಾ|| ಜಯಲಕ್ಷ್ಮೀ ಮೂರ್ತಿ ಅವರಿಗೆ ಮತ್ತು ಖಗೋಳಶಾಸ್ತ್ರಜ್ಞರಿಗೆ ಲೇಖಕ ಕೃತಜ್ಞನಾಗಿದ್ದಾನೆ.)

**ಡಾ|| ಹೆಚ್. ಚಂದ್ರಶೇಖರ**
'ಸಂಗಮ', ಎಮ್.ಐ.ಜಿ.-೭೭, ೬ನೇ ಕ್ರಾಸ್, ೬ನೇ ಮುಖ್ಯರಸ್ತೆ, ಕೆ.ಹೆಚ್.ಬಿ. ಕಾಲೋನಿ,
೨ನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

(ಈ ಸಂಪ್ರಬಂಧವನ್ನು ಹಂಪಿಯಲ್ಲಿ ೨೭-೧-೨೦೧೧ರಂದು ನಡೆದ 'ವಿಜಯನಗರ ಅಧ್ಯಯನ' ವಿಚಾರ ಸಂಕಿರಣದಲ್ಲಿ ಪ್ರಸ್ತುತಪಡಿಸಿದ್ದು.)

ತಾರೀಖು ೨೭-೨-೨೦೧೧ರಂದು, ಮೈಸೂರು ರೋಟರಿ ಭವನದಲ್ಲಿ, ನವಕರ್ನಾಟಕ ಪ್ರಕಟಿಸಿರುವ ಜ್ಞಾನ-ವಿಜ್ಞಾನ ಮಾಲೆಯ ಏಳು ಕೃತಿಗಳ ಲೋಕಾರ್ಪಣೆ ಸಮಾರಂಭ ನಡೆಯಿತು. ಪ್ರೊ|| ಜೆ. ಆರ್. ಲಕ್ಷ್ಮಣರಾವ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಮಾಲೆಯ ಸಂಪಾದಕರಾದ ಪ್ರೊ|| ಅಡ್ಯನಡ್ಕ ಕೃಷ್ಣ ಭಟ್ ಕೃತಿಗಳ ಪರಿಚಯ ಮಾಡಿಕೊಟ್ಟರು. ಮಾಲೆಯ ಲೇಖಕರು ಭಾಗವಹಿಸಿದ್ದರು. ವನಿತಾ ಸದನದ ವಿದ್ಯಾರ್ಥಿನಿಯರಾದ ಸುಪ್ರೀತ, ಶೋಭಾ, ಪ್ರಿಯಾ ಇವರುಗಳ ಪ್ರಾರಂಭಗೀತೆ ಸಮಾರಂಭದ ಆಶಯವನ್ನು ಪ್ರತಿಬಿಂಬಿಸುವಂತಿತ್ತು. ಶ್ರೀಮತಿ ಹರಿಪ್ರಸಾದ್ ಕಾರ್ಯಕ್ರಮ ನಿರ್ವಹಿಸಿದರು. ಮೈಸೂರಿನ ಸಾಹಿತ್ಯಾಸಕ್ತರು, ಲೇಖಕರು, ಪ್ರಕಾಶಕರು ಭಾಗವಹಿಸಿದ್ದರು. ನವಕರ್ನಾಟಕ ಮೈಸೂರು ಶಾಖೆಯ ಸತ್ಯನಾರಾಯಣ ವಂದನಾರ್ಪಣೆ ಮಾಡಿದರು.

**ಸುದ್ದಿ ಚಿತ್ರ**






*ಚಿತ್ರದಲ್ಲಿ: (ಎಡದಿಂದ ಬಲಕ್ಕೆ) ಶ್ರೀ ಆರ್. ಎಸ್. ರಾಜಾರಾಮ್, ಡಾ|| ಪಿ. ಕೆ. ರಾಜಗೋಪಾಲ್ ಡಾ|| ಸರ್ವೋತ್ತಮ ವೈ. ಅಂಬೇಕರ, ಪ್ರೊ|| ಅಡ್ಯನಡ್ಕ ಕೃಷ್ಣ ಭಟ್, ಪ್ರೊ|| ಜೆ. ಆರ್. ಲಕ್ಷ್ಮಣರಾವ್ ಡಾ|| ಸಿ. ಆರ್. ಚಂದ್ರಶೇಖರ್, ಡಾ|| ನಾ. ಸೋಮೇಶ್ವರ, ಶ್ರೀ ಸಿ. ಆರ್. ಕೃಷ್ಣರಾವ್ ಶ್ರೀ ಕೆ. ಎಲ್. ಗೋಪಾಲಕೃಷ್ಣರಾವ್.*

ಎಚ್. ಎಸ್. ದೊರೆಸ್ವಾಮಿ

# ಜೈಲಿನಲ್ಲಿರುವ ಎ. ರಾಜ : ೨-ಜಿ ಸ್ಪೆಕ್ಟ್ರಂ ಹಗರಣ

**ಟೆ**ಲಿಕೋಂ ಸಚಿವರಾಗಿದ್ದ ಆಂಡಿ ಮುತ್ತುರಾಜನ್ ರಾಜಕೀಯದಲ್ಲಿ ವ್ಯಾಪಾರ ಮಾಡುವವರು. ವ್ಯಾಪಾರದಲ್ಲಿ ರಾಜಕೀಯ ಮಾಡುವವರು. ಅಂದರೆ ಸಚಿವರಾಗಿ ರಾಜಾ ವ್ಯಾಪಾರದ ರಾಜಕೀಯ ಮಾಡಿದವರು.

ಡಿಎಂಕೆ ಅಧಿದೇವತೆಯಾದ ಕರುಣಾನಿಧಿ ಅವರ ಆಶೀರ್ವಾದದಿಂದ ರಾಜಾ ೨ ಅವಧಿಗೆ ಕೇಂದ್ರ ಸರ್ಕಾರದ ಮಂತ್ರಿಗಳಾದರು. ದಲಿತರಾದ ರಾಜಾ ಅವರು, ದಲಿತರ ಉದ್ಧಾರವನ್ನು ಕೈಬಿಟ್ಟು ದಲಿತರಾದ ತಮ್ಮ ಉದ್ಧಾರಕ್ಕೇ ನಿಂತರು. ೨ಜಿ ಸ್ಪೆಕ್ಟ್ರಂ ಹಗರಣದಲ್ಲಿ ಅವರು ಸರ್ಕಾರಕ್ಕೆ ೨೧೦೦೦ ಕೋಟಿ ರೂಪಾಯಿಗಳ ನಷ್ಟ ಉಂಟುಮಾಡಿದ್ದಾರೆ ಎಂದು ಹೇಳಲಾಗಿದೆ. ಇದಲ್ಲದೆ ಅವರ, ಅವರ ಕುಟುಂಬದವರ ಜೇಬಿಗೆ ಬಿದ್ದ ಹಣ ಎಷ್ಟು? ರಾಜಾ ಅವರಿಗೆ ಹೆಂಡತಿ, ಮೂರು ಜನ ಸಹೋದರರು ನಾಲ್ಕು ಸಹೋದರಿಯರು ಇದ್ದಾರೆ. ರಾಜಾ ಅವರು ಮಂತ್ರಿಯಾಗಿದ್ದ ಅವಧಿಯಲ್ಲಿ ಅನೇಕ ಕಂಪೆನಿಗಳನ್ನು ಸ್ಥಾಪಿಸಿದರು. ಅವರು ಆರಂಭ ಮಾಡಿದ ಕಂಪೆನಿಗಳಿಗೆ ತಮ್ಮ ಕುಟುಂಬದ ಒಬ್ಬೊಬ್ಬರನ್ನೂ ನೇಮಿಸಿಕೊಂಡರು. ಕಂಪೆನಿಗಳನ್ನು ಸ್ಥಾಪಿಸಿವುದು, ಆ ಒಂದೊಂದು ಕಂಪೆನಿಗೂ ಹಣ ಹರಿದು ಬರುವಂತೆ ಮಾಡುವುದು ಇವರ ಕಾರ್ಯತಂತ್ರ. ಸ್ಪೆಕ್ಟ್ರಂ ಹಂಚಿಕೆಗೆ ಮೊದಲೇ ಈ ಕಂಪೆನಿಗಳನ್ನು ಸ್ಥಾಪಿಸಿ, ಈ ಹಂಚಿಕೆಯ ಸಂದರ್ಭದಲ್ಲಿ ಹರಿದುಬಂದ ಹಣವನ್ನೆಲ್ಲ ಅವರು ಮಲೇಷಿಯಾದಲ್ಲಿ ಸ್ಥಾಪಿಸಿದ ಒಂದು ಆಡಿಟ್ ಕಂಪೆನಿಗೆ, ಮದ್ರಾಸ್‌ನಲ್ಲಿ ಪ್ರಾರಂಭಿಸಿದ ಕಂಪೆನಿಗಳಿಗೆ, ಪೆರಂಬೂರ್, ಟ್ರಿಚಿ, ಕೊಯಮತ್ತೂರುಗಳಲ್ಲಿ ಸ್ಥಾಪಿಸಿದ ಕಂಪೆನಿಗಳಿಗೆ ರವಾನಿಸಿದರು. ಅವುಗಳ ಆಡಳಿತ ನಡೆಸುತ್ತಿದ್ದವರು ಥಟ್ಟನೆ ಕೋಟ್ಯಧಿಪತಿಗಳಾದರು. ಈ ಪೈಕಿ ಕೋಟ್ಯಧಿಪತಿಯಾದ ಒಬ್ಬರೆಂದರೆ ಸಾದಿಕ್ ಬಾಷಾ ಎನ್ನುವವರು. ಇವರ ಹೆಸರಿನಲ್ಲಿ ಚೆನ್ನೈನಲ್ಲಿ ಅನೇಕ ರಿಯಲ್ ಎಸ್ಟೇಟ್ ಏಜೆನ್ಸಿಗಳು ನಡೆಯುತ್ತಿವೆ. ೨೦ ವರ್ಷದ ಹಿಂದೆ ಇವರು ಸೇಲಂನಲ್ಲಿ ಸೀರೆಗಳನ್ನು ಮನೆಮನೆಗೂ ತೆಗೆದುಕೊಂಡು ಹೋಗಿ ಮಾರಾಟ ಮಾಡುತ್ತಿದ್ದರು. ಆ ನಂತರ ಕೆಲವು ದಿನಗಳ ಕಾಲ ರೇಡಿಯೊ, ಟೇಪ್‌ರೆಕಾರ್ಡ್‌ಗಳ ಮಾರಾಟ ಮಾಡುತ್ತಿದ್ದರು. ಇದ್ಯಾವುದರಿಂದಲೂ ಹೊಟ್ಟೆ ಹೊರೆದುಕೊಳ್ಳಲು ಸಾಧ್ಯವಾಗದೆ ಮುಂದೆ ಅವರು ಪೆರಂಬದೂರಿಗೆ ಬಂದರು. ಅಲ್ಲಿ ಅವರಿಗೆ ಡಿಎಂಕೆಯ ವರತ್ತೂರ್ ಅರುಣಾಚಲಂ ಎಂಬುವವರ ಪರಿಚಯವಾಯಿತು. ಆಗ ಬಾಷಾ ಅವರ ಅದೃಷ್ಟ ಕುಲಾಯಿಸಿತು. ಅವರಿಗೆ ಕೀರ್ತಿ ಮತ್ತು ಹಣ ಎರಡೂ ಲಭಿಸಿತು. ಅರುಣಾಚಲಂ, ಭಾಷಾರನ್ನು ಡಿಎಂಕೆಯ ಕಿರಿಯ ರಾಜಕಾರಣಿ ರಾಜಾ ಅವರಿಗೆ ಪರಿಚಯ ಮಾಡಿಕೊಟ್ಟರು.

ಬಾಷಾ ಮತ್ತು ರಾಜಾ ಇಬ್ಬರೂ ಮಹತ್ವಾಂಕಾಂಕ್ಷಿಗಳಾಗಿದ್ದರು. ಅವರಿಬ್ಬರೂ ರಿಸ್ಕ್ ತೆಗೆದುಕೊಳ್ಳುವುದಕ್ಕೆ ತಯಾರಾಗಿದ್ದವರು. ರಾಜಾ ಬಾಷಾ ಅವರನ್ನು ರಿಯಲ್ ಎಸ್ಟೇಟ್ ಏಜೆನ್ಸಿಗಳನ್ನು ತೆರೆಯಲು ಪ್ರೋತ್ಸಾಹಿಸಿದರು. ಅವರಿಬ್ಬರೂ ಸಣ್ಣ ಪ್ರಮಾಣದ ಬಂಡವಾಳ ತೊಡಗಿಸಿ, ಕಾರ್ಯಪ್ರವೃತ್ತರಾದರು. ಇಂದು ಬಾಷಾರವರ ಬಂಡವಾಳ ೨೦೦೦ ಕೋಟಿ ರೂಪಾಯಿ. ಬಾಷಾ, ರಾಜಾರವರ ಬಂಧುಗಳನ್ನು ಕಂಪೆನಿಯ ನಿರ್ದೇಶಕರನ್ನಾಗಿ ಮಾಡಿಕೊಂಡು ಒಂದಾದ ಮೇಲೊಂದು ಕಂಪೆನಿಯನ್ನು ಆರಂಭಿಸಿದರು. ಗ್ರೀನ್ ಹೌಸ್ ಪ್ರಮೋಟರ್ಸ್ ಎಂಬುದು ಅವುಗಳಲ್ಲಿ ಒಂದು. ಈ ಕಂಪೆನಿಯನ್ನು ೨೦೦೪ರಲ್ಲಿ ಒಂದು ಲಕ್ಷ ರೂ.ಗಳ ಬಂಡವಾಳದೊಂದಿಗೆ ಆರಂಭಿಸಿದರು ಬಾಷಾ. ಈ ಕಂಪೆನಿ ನಾಲ್ಕಾರು ವರ್ಷಗಳಲ್ಲಿ ನೂರಾರು ಕೋಟಿ ರೂ.ಗಳ ಬಂಡವಾಳದ ಕಂಪೆನಿಯಾಗಿ ಬೆಳೆಯಿತು.

(ಬಾಷಾ ಮಾರ್ಚ್ ತಿಂಗಳು ಚೆನ್ನೈನಲ್ಲಿ ಆತ್ಮಹತ್ಯೆ ಮಾಡಿಕೊಂಡರು.)

ಈ ಕಂಪೆನಿ ೨೦೦೬ರಲ್ಲಿ ಸಿಂಗಪುರದಲ್ಲಿ ಅದರ ಶಾಖೆಯನ್ನು ಆರಂಭಿಸಿತು. ೨೦೦೭ರಲ್ಲಿ ರಾಜಾ ಅವರ ಪತ್ನಿ ಪರಮೇಶ್ವರಿ ಈ ಕಂಪೆನಿಗೆ ನಿರ್ದೇಶಕರಾಗಿ ಸೇರಿಕೊಂಡರು. ವಿದೇಶಿ ವಿನಿಮಯ ಮ್ಯಾನೇಜ್‌ಮೆಂಟ್ ಆಕ್ಟ್ ಉಲ್ಲಂಘನೆಗಾಗಿ Enforcement Directorate ಈ ಕಂಪೆನಿಗೆ ನೋಟಿಸ್ ಜಾರಿ ಮಾಡಿತು. ಇದರಿಂದಾಗಿ ೨೦೦೯ರಲ್ಲಿ ಸಿಂಗಪುರದ ಕಚೇರಿಯನ್ನು ಮುಚ್ಚಲಾಯಿತು. ಸಿಂಗಪುರದಲ್ಲಿ ಈ ಕಚೇರಿಯನ್ನು ಆರಂಭಿಸುವ ಉದ್ದೇಶ, ಈ ಕಂಪೆನಿಯಲ್ಲಿ ರಾಜ ಜಮಾ ಮಾಡುವ ಹಣವನ್ನು ಚೆನ್ನೈಗೆ ರವಾನಿಸುವುದೇ ಆಗಿತ್ತು. ಈ ಕೆಲಸಕ್ಕಾಗಿ ಮಲೇಷಿಯಾ ಮತ್ತು ದುಬೈ ಸಂಬಂಧಗಳನ್ನು ರಾಜಾ ಬಳಸಿಕೊಂಡರು. ಅದಾದನಂತರ ಮಲೇಷಿಯಾದಲ್ಲಿ ವೆಲ್ಕಂ ಕಂಪೆನಿ ಟೆಲಿಕೋಂ ಕಂಪೆನಿಯನ್ನು ರಾಜಾ ಆರಂಭಿಸಿದರು. ಮಲೇಷಿಯಾದ ತನ್ನ ಭಾರತೀಯ ಕಂಪೆನಿಗೆ ೨ಜಿ ಸ್ಪೆಕ್ಟ್ರಂ ವ್ಯವಹಾರದಲ್ಲಿ ದಕ್ಕುವ ಹಣವನ್ನು Well Come ಕಂಪೆನಿಯ ಮುಖಾಂತರ ಚೆನ್ನೈಗೆ ರವಾನಿಸಲಾಯಿತು. ೨೦೦೯ರಲ್ಲಿ ಈ ಪ್ರಕರಣ ಸುದ್ದಿ ಮಾಡಿತ್ತು.

ರಾಜಾರವರ ಸೋದರಿ ವಿಜಯಮ್ಮಾಳ್ ಅವರ ಮಗ ಪರಮೇಶ್ ಕುಮಾರ್ ಅವರನ್ನು ಸಿಬಿಐ ತನಿಖೆಗೊಳಪಡಿಸಿತು. ಪರಮೇಶ್ ಕುಮಾರ್ ಗ್ರೀನ್ ಹೌಸ್ ಪ್ರಮೋಟರ್ಸ್ ಕಂಪೆನಿಯ ವ್ಯವಸ್ಥಾಪಕ ನಿರ್ದೇಶಕರು. ಅವರ ವಿಚಾರಣೆಯ ಸಂದರ್ಭದಲ್ಲಿ ಅವರ ಕಂಪೆನಿಗೆ ತುಂಬ ಹಣ ಪಾವತಿ ಆಗಿ ಬಂದಿರುವುದು ಸಿಬಿಐ ಗಮನಕ್ಕೆ ಬಂತು. ಚೆನ್ನೈ, ತಿರುಪೂರ್, ಕೊಯಮತ್ತೂರುಗಳ ಬಟ್ಟೆ ಮತ್ತು ತರ್ಕಾರಿ ರಫ್ತುದಾರರು ಹವಾಲ ವ್ಯವಹಾರದ ಮುಖಾಂತರ ಬಹುದೊಡ್ಡ ಮೊತ್ತದ ಹಣವನ್ನು ಲಪಟಾಯಿಸಿರುವುದು ಪತ್ತೆಯಾಗಿದೆ.

ರಾಜಾ ಕಂಪೆನಿಗಳೆಲ್ಲದರಲ್ಲಿ ಪರಮೇಶ್‌ಕುಮಾರ್ ಹೆಸರು ಕೇಳಿಬರುತ್ತದೆ. ಅವರ ಸ್ವಂತ ಹೆಸರಿಗೂ, ಕಂಪೆನಿಯ ಹೆಸರಿಗೂ ತುಂಬ ಹಣ ಹರಿದುಬಂದಿದೆ. ಈ ಕಂಪೆನಿ ಲೆಕ್ಕಕ್ಕೆ ಅಪಾರವಾದ ಹಣ ೨೦೦೮ರಿಂದ ಜಮಾ ಆಗಿರುವುದು ಕಂಡುಬರುತ್ತದೆ. ವಿಶ್ವದ ಎಲ್ಲೆಡೆ ಆರ್ಥಿಕ ಕುಸಿತ ಕಾಣಿಸಿಕೊಂಡ ಈ ವರ್ಷದಲ್ಲಿ ಈ ಕಂಪೆನಿಗೆ ಶುಕ್ರದೆಶೆ ಕುಲಾಯಿಸಿತ್ತು.

ಸ್ಪೆಕ್ಟ್ರಂ ಅಲೋಕೇಷನ್ ಕ್ರಿಯೆ ಆರಂಭವಾದಂತೆ ಅದರ ಮಾರಾಟ ಆರಂಭವಾಗಿ, ಆ ಹಣ ಹವಾಲಾ ಮಾರ್ಗವಾಗಿ ರಾಜಾ ಕಂಪೆನಿಗೆ ಜಮಾ ಆಗುತ್ತಾ ಹೋಯ್ತು. ಕಂಪೆನಿ ತುಂಬ ಲಾಭ ಮಾಡಿರುವುದಾಗಿ ಘೋಷಣೆ ಮಾಡಲಾಯ್ತು.

೨೦೦೯ರಲ್ಲಿ ಮಲೇಷಿಯಾ ಕಂಪೆನಿ ಮತ್ತೊಂದು ಸುದ್ದಿ ಮಾಡಿತ್ತು. ರಾಜಾ ಅವರ ಮಿತ್ರ ಸೆಲ್ವರಾಜೂ ಬಿಎಸ್‌ಎನ್‌ಎಲ್‌ನ ಎಮಾಕ್ಸ್ ಫ್ರಾಂಚೈಸ್ ಅಲಾಟ್‌ಮೆಂಟ್‌ನಲ್ಲಿ ಭಾಗವಹಿಸಿದ್ದರು. ತದನಂತರ ಬಿಎಸ್‌ಎನ್‌ಎಲ್, ವೆಲ್ಕಂ, ವಿಪ್ರೋ ಮತ್ತು ಸಿಸ್ಕೊ ಕಂಪೆನಿಗಳನ್ನು ಆಯ್ಕೆ ಮಾಡುವುದನ್ನು ಕೈಬಿಟ್ಟಿತು.

ಸ್ಪೆಕ್ಟ್ರಂ ಅಲೋಕೇಷನ್‌ನಲ್ಲಿ ಲಾಭ ಪಡೆದ ಕಂಪೆನಿಗಳು, ಅದನ್ನು ಕೋಟ್ಯಂತರ ರೂ.ಗಳ ಲಾಭಕ್ಕೆ ಮಾರಿಕೊಂಡ ಸಂದರ್ಭದಲ್ಲಿ, ಅಪಾರವಾದ ಹಣವನ್ನು ವಿದೇಶಗಳಿಗೆ ರವಾನಿಸಿದವು. ಆ ಹಣವೆಲ್ಲ ರಾಜಾ ಅವರ ಕಂಪೆನಿಗಳಿಗೆ ಹರಿದುಬಂತು. ಈ ಹಣವನ್ನು ತನ್ನ ಕಂಪೆನಿ ಮಾಡಿದ ಲಾಭ ಎಂದು ರಾಜಾ ತಮ್ಮ ಲೆಕ್ಕದಲ್ಲಿ ತೋರಿಸಿದರು. ರಾಜಾ ತನ್ನ ಅನ್ಯಾಯ ಮಾರ್ಗದಿಂದ ಬಂದ ಹಣವನ್ನು ತನ್ನ ಬಳಗಕ್ಕೆ ಸೇರಿದವರು, ಸ್ನೇಹಿತರು ಮತ್ತು ಇತರ ಪಾಲುದಾರರ ಹೆಸರಿನಲ್ಲಿ ತಂದಿರಿಸಿದರು. ಇತರರು ತಮ್ಮ ಕಳ್ಳ ಹಣವನ್ನು ದುಬೈ, ಸಿಂಗಪುರ, ಮಲೇಷಿಯ, ಶ್ರೀಲಂಕಾದಲ್ಲಿ ಷೇರುಗಳಲ್ಲಿ ತೊಡಗಿಸಿದರು.

ಈ ಲಾಭ ಅಪಾರವಾಗಿದ್ದರಿಂದ, ಇದನ್ನು ಬೇನಾಮಿ ಆಸ್ತಿಪಾಸ್ತಿಗಳಲ್ಲಿ ತೊಡಗಿಸುವುದು ಕಷ್ಟವಾಯಿತು. ಆದರೆ ಈ ವ್ಯವಸ್ಥೆಗೆ ಭಾರತದಲ್ಲಿ ಅಪಾರವಾದ ಅವಕಾಶಗಳಿವೆ. ಸ್ವಿಸ್ ಬ್ಯಾಂಕಿನಲ್ಲಿ ಈ ಹಣ ಇಡುವುದು ಈಗಲೀಗ ಕಷ್ಟವಾಗುತ್ತಲಿದೆ.

ಕ್ಯಾಥೋಲಿಕ್ ಪಾದ್ರಿ ಜನತ್ ಗ್ಯಾಸ್ಪರ್ ರಾಜ್ ನಡೆಸುತ್ತಿದ್ದ ತಮಿಳು ಮೈಯಮ್ ಚಾರಿಟಿ ಸಂಸ್ಥೆಯನ್ನು ಸಿಬಿಐ ದಾಳಿ ಮಾಡಿತು. (೨೫ನೇ ಡಿಸೆಂಬರ್ ತೆಹಲ್ಕಾ ಪ್ರಚುರಪಡಿಸಿದಂತೆ). ರಾಜಾ ಎಂಬ ಮೈದಾಸ್‌ನ ಸ್ಪರ್ಶದಿಂದ ಬಾಷಾಗೆ ಮಾತ್ರವಲ್ಲದೆ ರಾಯಲ್ ಎಂಟರ್‌ಪ್ರೈಸಸ್‌ನಲ್ಲಿ ಸೇವಕನಾಗಿ ತನ್ನ ಜೀವನ ಆರಂಭಿಸಿದ ಎಸ್. ಸರವಣನ್ ಎಂಬುವವನಿಗೂ ಅದೃಷ್ಟ ಕುಲಾಯಿಸಿತು. ರಾಯಲ್ ಎಂಟರ್‌ಪ್ರೈಸಸ್ ಎಂಬ ಪೀಠೋಪಕರಣಗಳ ಅಂಗಡಿಯನ್ನು ರಾಜಾತಮ್ಮಾಳ್ ನಡೆಸುತ್ತಿದ್ದಳು.

ಇಂದು ಸರವಣನ್ ಚೆನ್ನೈನ ಒಬ್ಬ ಕೋಟ್ಯಧಿಪತಿ. ಅವನು ಕೋಟ್ಯಧಿಪತಿಯಾಗಲು ದಾರಿಮಾಡಿದ್ದು ಚೆನ್ನೈನ ವೋಲ್ಟಾಸ್ ಭೂ ಹಗರಣ. ಇದು ರಾಡಿಯಾ ಟೇಪ್‌ನಲ್ಲಿದೆ. ವೋಲ್ಟಾಸ್ ಎನ್ನುವುದು ಟಾಟಾರವರ ಒಂದು ಉದ್ಯಮ ಸಂಸ್ಥೆ.

೧೭ನೇ ಡಿಸೆಂಬರ್‌ನಲ್ಲಿ ರಾಜಾತಿಯಮ್ಮಾಳ್ ಒಂದು ಪತ್ರಿಕಾ ಹೇಳಿಕೆ ನೀಡಿ, ತಾನು ಈ ವ್ಯವಹಾರದಲ್ಲಿ ಭಾಗಿಯಲ್ಲವೆಂದೂ, ಈ ವ್ಯವಹಾರದಲ್ಲಿ ದಳ್ಳಾಳಿ ಯಾಗಿದ್ದವನು ತನ್ನ ನೌಕರ ಸರವಣಮ್ ಎಂದೂ ಒಪ್ಪಿಕೊಂಡಿದ್ದಾರೆ. ಸರವಣಮ್ ಈ ವಿವಾದಗ್ರಸ್ತ ಜಮೀನಿನ ಒಡೆಯರು ಮತ್ತು ಪಿ. ಎನ್. ಷಣ್ಮುಗಂ, ಪಿ.ಎನ್. ಆರ್ಮುಗಂ ಮತ್ತು ೧೬ ಮಂದಿ ಇತರರು ಈ ಜಮೀನುಗಳ ಮಾಲೀಕರು ಎಂದೂ ಹೇಳಲಾಗಿದೆ.

ವೋಲ್ಟಾಸ್ ಕಂಪೆನಿ ೧೯೭೫ರಿಂದ ೨೦೦೫ರವರೆಗೆ ೩೦ ವರ್ಷದ ಅವಧಿಗೆ ೫೩,೦೦೦ ಚದರ ಅಡಿ ನಿವೇಶನ ಒಂದನ್ನು ಗುತ್ತಿಗೆ ಆಧಾರದ ಮೇಲೆ ತೆಗೆದು ಕೊಂಡಿತ್ತು. ೨೦೦೫ರಲ್ಲಿ ಕಂಪೆನಿ ಲೀಸ್ ಅವಧಿಯನ್ನು ಮತ್ತೆ ನವೀಕರಿಸಲು ಕೋರಿದಾಗ ಈ ಭೂಮಾಲೀಕರು ಅದಕ್ಕೆ ಒಪ್ಪಿಗೆ ನೀಡಲಿಲ್ಲ. ಅಲ್ಲದೆ ಮದ್ರಾಸ್ ಹೈಕೋರ್ಟಿನಲ್ಲಿ ಒಂದು ಕೇಸನ್ನೂ ದಾಖಲಿಸಿದರು. ಅದು ಇನ್ನೂ ಇತ್ಯರ್ಥವಾಗಿಲ್ಲ.

ವೋಲ್ಟಾಸ್ ಕಂಪೆನಿ ಅಲ್ಲೇ ಮುಂದುವರಿಯಿತಲ್ಲದೆ, ತಾನು ಕೊಡಬೇಕಾಗಿದ್ದ ಬಾಡಿಗೆಯನ್ನು ನ್ಯಾಯಾಲಯಕ್ಕೆ ಪಾವತಿಸುತ್ತಾ ಬಂದಿತು. ಪವರ್ ಆಫ್ ಅಟಾರ್ನಿ ಪಡೆದಿದ್ದ ಸರವಣನ್. ಆ ಪ್ಲಾಟನ್ನು ಕೂನೂರಿನ ಸಂಕಲ್ಪಂ ಇಂಡಸ್ಟ್ರೀಸ್‌ಗೆ ೨೫ ಕೋಟಿ ರೂ.ಗಳಿಗಿಂತ ಕಡಿಮೆ ಬೆಲೆಗೆ ಮಾರಿಬಿಟ್ಟ. ಮಾರುಕಟ್ಟೆ ಬೆಲೆ ೨೦೦ ಕೋಟಿ ಎಂದು ಹೇಳಲಾಗಿದೆ. ೨೦೦೯ರ ಲೋಕಸಭಾ ಚುನಾವಣೆಗಳಿಗೆ ಮೊದಲು ಈ ವ್ಯವಹಾರವನ್ನು ಮಾಡಲಾಯಿತು. ವೋಲ್ಟಾಸ್ ಕಂಪೆನಿಯವರು ತಾವು ಹೂಡಿದ್ದ ದಾವೆಯನ್ನು ಮುಂದುವರಿಸಲಿಲ್ಲ. ನ್ಯಾಯಾಲಯ ಪ್ರತಿವಾದಿಗೆ ಯಾವುದೇ ನೋಟೀಸ್ ಕಳಿಸಲಿಲ್ಲ. ಕಾನೂನು ರೀತಿ ಕ್ರಮ ಕೈಗೊಳ್ಳಲು ಈ ಮಧ್ಯಸ್ತಿಕೆ ಅಡ್ಡವಾಯಿತು ಎಂಬುದು ಸುಸ್ಪಷ್ಟ.

ಸರವಣನ್‌ಗೆ ಈ ೧೫ ಮಂದಿಯೂ ಪವರ್ ಆಫ್ ಅಟಾರ್ನಿ ನೀಡಿದ್ದರೆ ಎಂಬುದನ್ನು ಸಿಬಿಐ ಪತ್ತೆ ಮಾಡಬೇಕು.

ಈ ಆಸ್ತಿಯ ಸಂಕಲ್ಪಂ ಇಂಡಸ್ಟ್ರೀಸ್‌ಅನ್ನು ಈಗಿನ ಮಾಲೀಕರಾದ ಮಲೇಷಿಯಾದ ಆಡಿಟರ್ ೪೫ ವಯಸ್ಸಿನ ಡಾ॥ ಷಣ್ಮುಗನಾದನ್ ವೆಲ್ಲಂದುರೈ ಅವರು ನಡೆಸುತ್ತಾರೆ. ಇವರು ಆಡಿಟ್ ಫರ್ಮ್ ಷಾನ್ ಅಂಡ್ ಕಂಪೆನಿಯ ನಿರ್ದೇಶಕರಲ್ಲೊಬ್ಬರು. ರಾಜಾತಿಯಮ್ಮಾಳ್‌ರ ಈ ಕಂಪೆನಿಯ ಲೆಕ್ಕ ಪರಿಶೋಧಕರು ಇವರೇ ಆಗಿದ್ದಾರೆ.

ಇವರಿಗೆ ರಾಜಾ ಅವರೊಂದಿಗೆ ನಿಕಟಸಂಪರ್ಕವಿದೆ. ಷಣ್ಮುಗಂ ಲೆಕ್ಕ ಪರಿಶೋಧನೆಯಲ್ಲಿ ಪರಿಣತರು. ಹಿಂದೆ ಅವರು ಅರ್ನೆಸ್ಟ್ ಅಂಡ್ ಯಂಗ್ ಲೆಕ್ಕಪರಿಶೋಧನಾ ಕಂಪೆನಿಯಲ್ಲಿ ಕೆಲಸಮಾಡುತ್ತಿದ್ದವರು. ಚೆನ್ನೈನಲ್ಲಿರುವ ಈ ವಿವಾದಗ್ರಸ್ತವೂ ಪ್ರಶಸ್ತವೂ ಆದ ಜಮೀನಿನ ವಿಚಾರಕ್ಕೆ ಏಕೆ ತನಿಖೆ ನಡೆಸಲಿಲ್ಲ ಎಂಬುದು ವಿಸ್ಮಯ ಉಂಟುಮಾಡುತ್ತದೆ. ದೊಡ್ಡ ದೊಡ್ಡ ಜಮೀನು ವ್ಯವಹಾರಗಳನ್ನು ಕುರಿತು ತನಿಖೆ ಮಾಡುವ ಗುಪ್ತ ಮಾಹಿತಿ ವಿಭಾಗದ ತಟಸ್ಥ ವೃತ್ತಿ ಕುತೂಹಲಕ್ಕೆಡೆಮಾಡಿದೆ. ರಾಡಿಯಾ ಟೇಪುಗಳು ಬಹಿರಂಗಗೊಂಡನಂತರವೇ ಸಿಬಿಐ ರತ್ನಂ ಅವರನ್ನು ವಿಚಾರಣೆಗೊಳಪಡಿಸಿತು, ಮತ್ತೆ ಅವರ ನಿವಾಸದ ಮೇಲೆ ದಾಳಿ ಆಯಿತು.

ಆ ಜಮೀನಿನ ವ್ಯವಹಾರದ ಹಣವನ್ನೇನಾದರೂ ಸ್ಪೆಕ್ಟ್ರಂ ವ್ಯವಹಾರದಿಂದ ಪಡೆದದ್ದೇ ಎಂಬುದನ್ನು ಸಿಬಿಐ ತನಿಖೆ ಮಾಡುತ್ತಿದೆ. ಒಬ್ಬ ವಾಣಿಜ್ಯೋದ್ಯಮಿಯ ಪ್ರಕಾರ ಡಾ॥ ಷಣ್ಮುಗನಾದನ್‌ಗೆ ರಾಜಾರವರ ನಿಕಟ ಸಂಪರ್ಕವಿದೆ. ಅವರು ಮಲೇಷಿಯಾದ ಒಬ್ಬ ಪ್ರಮುಖ ಉದ್ಯಮಿ. ಅವರು ಬರಾದ್‌ನ ಕಮ್ದಾರ್ ಗ್ರೂಪಿನ ಬೋರ್ಡ್ ಸದಸ್ಯರು. ಇದು ಒಂದು ಹಣ ಹೂಡಿಕೆಯ ಮಾಲೀಕತ್ವದ ಕಂಪೆನಿ. ಜವಳಿ ಮತ್ತು ಜವಳಿ ಆಧಾರಿತ ಪದಾರ್ಥಗಳ ಆಮದು, ರಫ್ತು ವ್ಯವಹಾರದಲ್ಲಿ ತೊಡಗಿರುವ ಕಂಪೆನಿ.

ರಾಜಾ ಮಂತ್ರಿಯಾದ ಒಡನೆ ಅವರ ಹತ್ತಿರದ ನೆಂಟರು ಗ್ರೀನ್ ಹೌಸ್ ಮತ್ತು ಯಕ್ವಾಸ್ ಎಸ್ಟೇಟ್ ಕಂಪೆನಿಗಳನ್ನು ಆರಂಭಿಸಿದರು. ಅವರ ಸೋದರಳಿಯ ಪರಮೇಶಕುಮಾರ್, ಈ ಕಂಪೆನಿಗಳ ಜಂಟಿ ಮ್ಯಾನೇಜಿಂಗ್ ನಿರ್ದೇಶಕರಾಗಿದ್ದರು. ರಮೇಶ್‌ಕುಮಾರ್ ಸೋದರ ಎ. ತಲ್ಲೈಪೆರುಮಾಳ್ ಮತ್ತು ಆತನ ಸೋದರಳಿಯ ರಾಮ್ ಗಣೇಶ್ ಈ ಕಂಪೆನಿಗಳ ನಿರ್ದೇಶಕರು. ಒಂದು ವರ್ಷ ಕೆಲಸ ಮಾಡುವುದರಲ್ಲಿ ಈ ಕಂಪೆನಿ ೭೫೫ ಕೋಟಿ ರೂ.ಗಳ ವಹಿವಾಟು ಮಾಡಿತು.

ಕೋವೈ ಷೆಲ್ಟರ್ಸ್ ಅಂಡ್ ಪ್ರಮೋಟರ್ಸ್ ಎಂಬ ಸಂಸ್ಥೆ ಚೆನ್ನೈನಲ್ಲಿದೆ. ಇದರ ಕಾರ್ಯ ನಿರ್ವಾಹಕ ನಿರ್ದೇಶಕರು ಡಾ॥ ಕೃಷ್ಣಮೂರ್ತಿ. ರಾಜಾ ವಕೀಲರಾಗಿದ್ದಾಗಿನಿಂದ ಕೃಷ್ಣಮೂರ್ತಿ ಇವರಿಗೆ ಪರಿಚಿತರು. ಪೆರಂಬಲೂರಿನಲ್ಲಿ ವಕೀಲರಾಗಿದ್ದಾಗ ಕೃಷ್ಣಮೂರ್ತಿಯವರ ಕಟ್ಟಡದಲ್ಲೇ ರಾಜಾ ಅವರ ಕಚೇರಿ ಇದ್ದದ್ದು. ಪರಿಸರ ಮತ್ತು ಅರಣ್ಯ ಸಚಿವಾಲಯದ ಡೆಪ್ಯುಟಿ ಡೈರೆಕ್ಟರ್, ರಾಜಾ ಅವರ ಸೋದರಳಿಯ ಕೋವೈ ಷೆಲ್ಟರ್ಸ್‌ನಲ್ಲಿ ಶೇ. ೧೫ರಷ್ಟು ಷೇರು ಹೊಂದಿದ್ದಾರೆ. ರಾಜಾ ಅವರ ಸೋದರ ಸೊಸೆ ಆರ್. ಆನಂದ ಭುವನೇಶ್ವರಿ ಹಾಗೂ ಇನ್ನೊಬ್ಬ ಸೋದರ ಸೊಸೆ ಸಂತಾನಲಕ್ಷ್ಮಿ ತಲಾ ಶೇ. ೧೫ರ ಷೇರನ್ನು ಹೊಂದಿದ್ದಾರೆ.

ರಾಜಾ ಮಂತ್ರಿಯಾದೊಡನೆ ಕೊಯಮತ್ತೂರಿನಲ್ಲಿರುವ AGM Investments and Finance Private Limited ಕಂಪೆನಿಯನ್ನು ಪ್ರವರ್ತಕ ಡಾ॥ ಕೃಷ್ಣಮೂರ್ತಿ ಮತ್ತು ಅವರ ಸಹೋದರ ಸಿ. ಸತ್ಯನಾರಾಯಣನ್, ಆರಂಭಿಸಿದರು.

ಈ ಕಂಪೆನಿಗಳು ಸಂಪದ್ಭರಿತವಾಗಿವೆ. ಪೆರಂಬಲೂರ್ ಗ್ರಾಮದಲ್ಲಿ ಗ್ರೀನ್ ಹೌಸ್ ಕಂಪೆನಿ ಎಕರೆಗೆ ೩೫ ಸಾವಿರದಿಂದ ೩ ಲಕ್ಷದವರೆಗೆ ಹಣನೀಡಿ ಬೇಸಾಯ ಭೂಮಿಯನ್ನು ಕೊಂಡುಕೊಂಡಿತು. ಅವರು ಅದನ್ನು ಕೊಂಡದ್ದನ್ನು ಜಾಹೀರ ಮಾಡಿದ ಒಡನೆ ಜಮೀನಿನ ಬೆಲೆ ಎಕರೆಗೆ ೫೦ ಲಕ್ಷಕ್ಕೆ ಪುಟಿಯಿತು. ಗ್ರೀನ್ ಹೌಸ್ ಪ್ರಾಜೆಕ್ಟ್ ಅಲ್ಲಿ ಗೃಹಗಳು ಮತ್ತು ಸಂಕೀರ್ಣಗಳನ್ನು ನಿರ್ಮಿಸು ವುದಾಗಿ ಘೋಷಣೆ ಮಾಡಿತು. ಅದರ ಫಲವಾಗಿ ಈ ಕಂಪೆನಿಗೆ ಅಪಾರವಾಗಿ ಲಾಭ ಗಳಿಕೆ ಆಯಿತು.

ಕಾಂಗ್ರೆಸ್ ಒಡನೆ ಸೆಣಸಾಡಿ ಕರುಣಾನಿಧಿ ರಾಜಾಗೆ ಎರಡನೇ ಸಾರಿಗೆ ನೀಲಗಿರಿಯಿಂದ ಪಾರ್ಲಿಮೆಂಟಿಗೆ ಸೀಟು ಕೊಡಿಸಿದರು. ರಾಜಾ ಅವರು ಪೆರಂಬಲೂರ್ ಚುನಾವಣಾ ಕ್ಷೇತ್ರ ಜನರಲ್ ಸೀಟ್ ಆದದ್ದರಿಂದ ಅವರು ನೀಲಗಿರಿ ಮೀಸಲು ಕ್ಷೇತ್ರದಿಂದ ಸ್ಪರ್ಧಿಸುವುದು ಅನಿವಾರ್ಯವಾಯಿತು.

ರಾಜಾ ಅವರ ವಾಣಿಜ್ಯ ವಹಿವಾಟಿನಲ್ಲಿ ಕರುಣಾನಿಧಿಯವರ ೩ನೇ ಹೆಂಡತಿ ರಾಜಾತಿಯಮ್ಮಾಳ್ ಹಾಗೂ ಮಗಳು ಕನಿಮೊಳಿ ತೊಡಗಿಕೊಂಡಿದ್ದಾರೆ. ಇವರನ್ನು ಹೆಸರಿಸಿ ತಮ್ಮ ವ್ಯವಹಾರದಲ್ಲಿ ಅವರುಗಳ ಪಾತ್ರ ಏನೆಂಬುದನ್ನು ಎಲ್ಲಿ ಬಹಿರಂಗಗೊಳಿಸುವರೋ ಎಂಬ ಭಯ ಕರುಣಾನಿಧಿಯವರಿಗಿದೆ. ಅಲ್ಲದೆ ಇದರಿಂದ ಡಿಎಂಕೆಯ ಭವಿಷ್ಯದ ಮೇಲೂ ತನ್ನ ಕರಿಛಾಯೆಯನ್ನು ಅದು ಪಸರಿಸಬಹುದು ಎಂಬ ಭಯವೂ ಕರುಣಾನಿಧಿಯವರಿಗಿರಲಿಕ್ಕೆ ಸಾಕು.

ಕಾಮ್‌ದಾರ್ ಗ್ರೂಪ್, ದಕ್ಷಿಣ ಆಫ್ರಿಕಾದಲ್ಲೂ ಕಾರ್ಯಪ್ರವೃತ್ತವಾಗಿದೆ.

ಡಾ॥ ಷಣ್ಮುಗನಾದನ್ ಅವರ ಹತ್ತಿರದ ಬಂಧುಗಳು ಭಾರತದಲ್ಲಿ ಸಂಕಲ್ಪಂ ಇಂಡಸ್ಟ್ರೀಸ್‌ಅನ್ನು ನೋಡಿ ಕೊಳ್ಳುತ್ತಿದ್ದಾರೆ. ನೀಲಗಿರಿಯ ಕೊಲಕುಂಬಿ ಟೀ ತೋಟಗಳ ಮುಖ್ಯಸ್ಥರಾದ ಡಾ॥ ಕುಮಾರಸ್ವಾಮಿ ಷಣ್ಮುಗನಾದನ್‌ರವರು ಡಾ॥ ಷಣ್ಮುಗನಾದನ್ ಅವರನ್ನು ರಾಜಾಗೆ ಪರಿಚಯ ಮಾಡಿಸಿದವರು. ಇವರು ರಾಜಾಗೆ ಸಂಬಂಧಿ.

ಸಂಕಲ್ಪಂ ಲಿಮಿಟೆಡ್ ಲಂಡನ್ನಿನಲ್ಲಿ ಒಂದು ಕಚೇರಿ ತೆರೆದಿದೆ. ಈ ಕಂಪೆನಿ ೧೯೯೩ರಲ್ಲಿ ನೋಂದಾಯಿಸಿ ಕೊಂಡದ್ದು. ಈ ಕಂಪೆನಿಯ ವ್ಯವಹಾರಗಳು ಸಿಂಗಪುರ, ಮಲೇಷಿಯಾ, ಆಸ್ಟ್ರೇಲಿಯ, ದುಬೈಗಳಿಗೆ ತಮ್ಮ ವಹಿವಾಟನ್ನು ವಿಸ್ತರಿಸಿಕೊಂಡಿದೆ. ಈ ಸ್ಥಳಗಳಿಗೆಲ್ಲ ರಾಜಾ ಅವರೂ ಅವರ ಒಡನಾಡಿಗಳೂ ಆಗಾಗ ಭೇಟಿ ನೀಡುತ್ತಿರುತ್ತಾರೆ.

ಪೆರಂಬಲೂರಿನ ದಲಿತರನ್ನು ಒಕ್ಕಲೆಬ್ಬಿಸಿ, ದಲಿತರಾದ ರಾಜಾ ೪೦೦ ಎಕರೆ ಜಮೀನನ್ನು ಎಂಆರ್‌ಎಫ್ ಕಂಪೆನಿಗೆ ನೀಡಿ, ಅಲ್ಲಿ ಟೈರುಗಳನ್ನು ಉತ್ಪಾದಿಸುವ ಘಟಕ ಆರಂಭ ಮಾಡಲು ಸಹಕಾರ ನೀಡಿತು. ಬಾಷಾ ೨೦೦೭ರಲ್ಲಿ ಎಂಆರ್‌ಎಫ್ ಜೊತೆಗೆ ಈ ಒಡಂಬಡಿಕೆ ಪತ್ರಕ್ಕೆ ಸಹಿ ಹಾಕಿದರು. ಇದಾದ ಒಂದು ವರ್ಷಕ್ಕೆ ಪೆರಂಬಲೂರಿನಲ್ಲಿ ಪೊಲೀಸ್ ಠಾಣೆಯ ಆರಂಭೋತ್ಸವ ನಡೆಯಿತು. ಆ ಸಮಯದಲ್ಲಿ ರಾಜಾ ೯೦೦ ಕೋಟಿ ರೂ.ಗಳ ಎಂಆರ್‌ಎಫ್ ಯೋಜನೆಯ ಬಗೆಗೆ ಘೋಷಣೆ ಮಾಡಿದರು.

**ಎಚ್. ಎಸ್. ದೊರೆಸ್ವಾಮಿ**
ನಂ. ೭೬೧, ೩೭ನೇ ಅಡ್ಡರಸ್ತೆ, ೧೮ನೇ ಮುಖ್ಯರಸ್ತೆ, ಜಯನಗರ
'ಟಿ' ಬ್ಲಾಕ್, ಬೆಂಗಳೂರು - ೫೬೦ ೦೪೧

ಮುರಳಿಧರ್

# ವಿಕೃತಿ ಸಂವತ್ಸರದ ವಿಕೃತಗಳು

''ಯುಗ ಯುಗಾದಿ ಕಳೆದರೂ
ಯುಗಾದಿ ಮರಳಿ ಬರುತಿದೆ.
ವಿಕೃತಿ ಸಂವತ್ಸರದ ವಿಕೃತಗಳನು
ಉಡುಗೆ ಕೊಟ್ಟು ತೆರೆಯ ಮರೆಗೆ ಸೇರಲಿದೆ.''

**ನಶಿಸುತ್ತಿರುವ ಮೌಲ್ಯಗಳು**

ಪ್ರಪಂಚದ ಹಾಗೂ ಭಾರತದ ಇತಿಹಾಸದಲ್ಲಿ ಲಂಚ, ಸ್ವಜನ ಪಕ್ಷಪಾತ, ಅಧಿಕಾರ ದಾಹ ಇತ್ಯಾದಿ ಘಟನೆಗಳು ಹೇರಳವಾಗಿವೆ. ಅಂತಹ ಪ್ರಕರಣಗಳು ಬಹಿರಂಗಗೊಂಡಾಗ ಸಮಾಜದಲ್ಲಿ ಆ ಬಗ್ಗೆ ಆಶ್ಚರ್ಯ, ಅಸಮಾಧಾನ ಮತ್ತು ಕೆಲವೊಮ್ಮೆ ಅದಕ್ಕನು ಗುಣವಾಗಿಲ್ಲದಿದ್ದರೂ ಆಕ್ರೋಶ ಪ್ರಕಟವಾಗುತ್ತಿತ್ತು. ಅಂತಹ ಪ್ರತಿಕ್ರಿಯೆಗಳು ಆಯಾ ಸಮಾಜದಲ್ಲಿದ್ದ ಪ್ರಚಲಿತ ಮೌಲ್ಯಗಳಿಗೆ ಅನುಗುಣವಾಗಿರುತ್ತಿತ್ತು ಎಂಬುದನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದಾಗ ನಮ್ಮ ಗಮನ ಸೆಳೆಯಬಹುದು. ಬಂಡವಾಳಶಾಹಿ ವ್ಯವಸ್ಥೆಯು ಮುಕ್ತ ಮಾರುಕಟ್ಟೆ ಮತ್ತು ಅದಕ್ಕೆ ಪೂರಕವಾದ ಉದಾರೀಕರಣ ವ್ಯವಸ್ಥೆಯನ್ನು ದೇಶ-ವಿದೇಶಗಳಲ್ಲಿ ಸ್ಥಾಪಿಸಿ ತನ್ನ ಚಲನಶೀಲತೆಯನ್ನು ಸಾದರಪಡಿಸಿದ್ದರೂ ಮತ್ತು ತನ್ನ ಹಿಂದಿನ ಸಮಾಜ ವ್ಯವಸ್ಥೆಗಳಿಗೆ ಹೋಲಿಸಿದಲ್ಲಿ ಈ ವ್ಯವಸ್ಥೆ ಪ್ರಗತಿಶೀಲವೆಂದು ಕಂಡುಬಂದರೂ, ಅದು ಹಂತ ಹಂತವಾಗಿ ಸಮಾಜದ ಅನೇಕ ಮೌಲ್ಯಗಳನ್ನು ನಾಶಗೊಳಿಸುತ್ತಿರುವುದನ್ನು ಇಲ್ಲವೆ ಅಪಮೌಲ್ಯಗೊಳಿಸುತ್ತಿರುವುದನ್ನು ನಾವು ನೋಡಬಹುದು. ಬಂಡವಾಳಶಾಹಿ ವ್ಯವಸ್ಥೆಯ ಪರಮೋಚ್ಚ ಗುರಿ ಲಾಭ, ಅಧಿಕ ಲಾಭ ಮತ್ತು ಅತ್ಯಧಿಕ ಲಾಭ ಗಳಿಕೆಯೆಂದು ಈ ವ್ಯವಸ್ಥೆಯ ವಕ್ತಾರರೇ ಈಗಾಗಲೆ ಸಾರಿದ್ದಾರೆ. ಶ್ರೀಮಂತ ರಾಷ್ಟ್ರಗಳ ಮತ್ತು ಶ್ರೀಮಂತರ ಈ ಲಾಭ ದಾಹವೇ ಸಮಾಜದ ಮೌಲ್ಯಗಳ ನಾಶಕ್ಕೆ ಇಲ್ಲವೇ ಅಪಮೌಲ್ಯಕ್ಕೆ ಕಾರಣ. ದೇಶ-ವಿದೇಶಗಳ ಮಾರುಕಟ್ಟೆಗಳನ್ನು ತಮ್ಮ ಕೈವಶ ಮಾಡಿಕೊಳ್ಳಲೋಸುಗ ಈ ಶ್ರೀಮಂತರು ಅನುಸರಿಸದ ಮಾರ್ಗೋಪಾಯಗಳಿಲ್ಲ. ಇದಕ್ಕಾಗಿಯೆ ಆರ್ಥಿಕ ವಿಧ್ವಂಸಕರ ದೊಡ್ಡ ಪಡೆಯನ್ನು ಕಾರ್ಪೊರೇಟ್ ಧಣಿಗಳು ಹುಟ್ಟುಹಾಕಿ ದೇಶ-ವಿದೇಶಗಳಿಗೆ ರವಾನಿಸುವ ಬಗ್ಗೆ ಜಾನ್ ಪರ್ಕಿನ್ ಎಂಬ ಮಾಜಿ ಸಿ.ಐ.ಎ. ಏಜೆಂಟ್ ''ಪಾಪ ನಿವೇದನೆ'' ಎಂಬ ಪುಸ್ತಕದಲ್ಲಿ ವಿಸ್ತಾರವಾಗಿ ಬರೆದಿದ್ದಾನೆ. ಈತನೂ ಕೂಡ ಮೊನ್ನೆಯವರೆಗೂ ಒಬ್ಬ ಆರ್ಥಿಕ ವಿಧ್ವಂಸಕನೆ ಆಗಿದ್ದ. ದೇಶದ ಪ್ರಗತಿಗೆ ವಿದ್ಯುಚ್ಛಕ್ತಿ, ರಸ್ತೆಗಳು, ಸಂಪರ್ಕ ವ್ಯವಸ್ಥೆ ಒದಗಿಸುವ ನೆಪದಿಂದ ನುಸುಳಿ ಆ ದೇಶವನ್ನು ಬಹುರಾಷ್ಟ್ರೀಯ ಕಾರ್ಪೊರೇಟ್‌ಗಳಿಗೆ, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗೆ, ವಿಶ್ವ ಬ್ಯಾಂಕ್‌ಗೆ, ವಿದೇಶಿ ಬ್ಯಾಂಕ್‌ಗಳಿಗೆ ಅಡಿಯಾಳಾಗಿಸುವುದೇ ಈ ಆರ್ಥಿಕ ವಿಧ್ವಂಸಕರ ನಿತ್ಯಕಾಯಕ. ಇದನ್ನು ಸಾಧಿಸಲು ಹಣ, ಹೆಣ್ಣು ಮತ್ತು ಹೆಂಡದ ಸರಬರಾಜು. ಇವನ್ನೆಲ್ಲ ಒಲ್ಲೆಯೆಂದ ದೇಶಭಕ್ತರು ಸಿ.ಐ.ಎ. ತೋಳಗಳಿಗೆ ಬಲಿ. ನಂತರ ಇವರ ಕೈಗೊಂಬೆಯೊಬ್ಬನನ್ನು ಗದ್ದುಗೆಗೆ ಏರಿಸಿದೊಡನೆ ದಾರಿ ಸುಗಮ. ಪ್ರಪಂಚದ ತುಂಬ ಈ ದಳ್ಳಾಳಿಗಳೇ. ಭಾರತದಲ್ಲಂತೂ ಇವರ ಸಂಖ್ಯೆ ಹೇರಳ.



ಭಾರತದ ಅಭಿವೃದ್ಧಿಯನ್ನು ಹಾಡಿಹೊಗಳುತ್ತಾ, ಈ ದೇಶದ ಉತ್ಪಾದನಾ ಶಕ್ತಿಯನ್ನು ಪ್ರಶಂಸಿಸುತ್ತಾ, ದೇಶದಲ್ಲಿನ ವಿದ್ಯುಚ್ಛಕ್ತಿಯ ಕೊರತೆ ಮತ್ತು ಅದರ ಪರಿಣಾಮಗಳ ಬಗ್ಗೆ ಭಯ ಹುಟ್ಟಿಸುತ್ತಾ, ಈಗಿರುವ ಅಂಧಕಾರವನ್ನು ಹೋಗಲಾಡಿಸಲು ಅಣು ಶಕ್ತಿಯೊಂದೇ ಮಾರ್ಗವೆಂದು ಮಾಯಾಗೀತೆ ಹಾಡುತ್ತಾ, ಅದನ್ನು ತಾವು ಪೂರೈಸುವೆವೆಂದು ಅದಕ್ಕೊಂದು ಒಪ್ಪಂದ ಮಾಡಿಕೊಂಡು ತಮ್ಮ ದೇಶದ ಕಾರ್ಪೊರೇಟ್ ಧಣಿಗಳಿಗೆ ಕಾಂಟ್ರಾಕ್ಟ್‌ಗಳನ್ನು ಕೊಡಿಸಿದ ಅಮೆರಿಕಾ ಸರ್ಕಾರದ ನಾಟಕ ಇದಕ್ಕೆ ಇತ್ತೀಚಿನ ಒಂದು ನಿದರ್ಶನ. ಹಾಗೆಯೇ ಅಮೆರಿಕಾದ ಈ ''ಉಪಕಾರ'' ಪಡೆದು, ಅಂಧಕಾರ ಕಳೆದುಕೊಂಡು ಈ ದೇಶ ಧನ್ಯವಾಯಿತೆಂದು ಹೇಳಿಕೊಂಡು ಕಪ್ಪ-ಕಾಣಿಕೆ ಸಲ್ಲಿಸುತ್ತಿರುವ ಮನಮೋಹನ ಸಿಂಗ್ ಮತ್ತು ಅವರ ಸಂಗಡಿಗರ ಕೃತಾರ್ಥತೆಯೂ ಈ ನಾಟಕದ ಇನ್ನೊಂದು ಭಾಗ.

**ಹಗರಣಗಳ ಮೆರವಣಿಗೆ**

ಭಾರತದಲ್ಲಿ ಬಂಡವಾಳಶಾಹಿ ಜಾಗತೀಕರಣ ಪೂರ್ವದಲ್ಲಿ ಭ್ರಷ್ಟಾಚಾರದ ಪ್ರಕರಣಗಳು ಸಾಕಷ್ಟು ಸಂಖ್ಯೆಯಲ್ಲಿದ್ದರೂ, ಜಾಗತೀಕರಣದ ನಂತರ ಅದು ವಿಸ್ಫೋಟಗೊಂಡಿರುವುದೆಂಬುದು ಸಾರ್ವತ್ರಿಕ ಅಭಿಪ್ರಾಯ. ಭಾರತದ ಮಾಜಿ ಮುಖ್ಯ ವಿಜಿಲೆನ್ಸ್ ಕಮಿಷನರ್ ಎನ್. ವಿಟ್ಠಲ್‌ರವರ ಪ್ರಕಾರ ಉದಾರೀಕರಣ ಆರ್ಥಿಕನೀತಿ ಭಾರಿ ಪ್ರಮಾಣದ ಭ್ರಷ್ಟಾಚಾರಕ್ಕೆ ದಾರಿ ಮಾಡಿಕೊಟ್ಟಿದೆ. ೨-ಜಿ ಸ್ಪೆಕ್ಟ್ರಂ ಹಗರಣವೊಂದರಲ್ಲೇ ದೇಶಕ್ಕೆ ೧.೭೬ ಲಕ್ಷ ಕೋಟಿ ರೂಪಾಯಿಗಳ ನಷ್ಟವಾಗಿದೆಯೆಂದು ಸುದ್ದಿಯಿದೆ. ನೂರಾರು ಭ್ರಷ್ಟಾಚಾರದ ಹಗರಣಗಳು ದಿನೇ ದಿನೇ ಬಹಿರಂಗಗೊಳ್ಳುತ್ತಿವೆ. ಜನತೆಗೆ ಯಾವುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕೆಂಬುದೇ ಸಮಸ್ಯೆಯಾಗಿದೆ. ಇವೆಲ್ಲವನ್ನು ಮರೆತು ವಿಶ್ವಕಪ್ ಕ್ರಿಕೆಟ್ ಪಂದ್ಯಗಳನ್ನು ನೋಡೋಣವೆಂದರೆ ಅಲ್ಲಿಯೂ ಬೆಟ್ಟಿಂಗ್, ಮ್ಯಾಚ್ ಫಿಕ್ಸಿಂಗ್ ಮತ್ತು ಭ್ರಷ್ಟಾಚಾರಗಳ ಕಾಟ. ಇನ್ನು ಕಾಮನ್‌ವೆಲ್ತ್ ಕ್ರೀಡೆಗಳ ಬಗ್ಗೆ ಮಾತನಾಡುವಂತಿಲ್ಲ. ಅಲ್ಲಿ ಸುರೇಶ ಕಲ್ಮಾಡಿ ಎಂಬುವನು ಹೊಳೆಯ ನೀರಿಗೆ ದೊಣೆನಾಯಕ.

ಉತ್ತರ ಪ್ರದೇಶದಲ್ಲಿ ಬಡಜನರಿಗೆ ಎಂದು ಮೀಸಲಾಗಿಟ್ಟಿದ್ದ ಆಹಾರ ಧಾನ್ಯಗಳು ವಿದೇಶಗಳಿಗೆ ಮಾರಾಟ ಮತ್ತು ಸಹಸ್ರಾರು ಕೋಟಿ ರೂಪಾಯಿಗಳ ಅವ್ಯವಹಾರ. ಮಡಿದ ಸೈನಿಕರ ಕುಟುಂಬದ ಹೆಸರಿನಲ್ಲಿ ಕಟ್ಟಿದ ವಾಸಗೃಹಗಳು ಶ್ರೀಮಂತರ ಪಾಲು. ಇದು ಮುಂಬೈನ ಆದರ್ಶ ಹೌಸಿಂಗ್ ಸೊಸೈಟಿಯ ಆದರ್ಶದ ದುರಂತ. ಕರ್ನಾಟಕದ ಮುಖ್ಯಮಂತ್ರಿ ಯಡಿಯೂರಪ್ಪನವರ ಪುತ್ರವಾತ್ಸಲ್ಯದ ಕಥೆ, ರೆಡ್ಡಿ ಸಹೋದರ-ಸಹೋದರಿಯ ಖನಿಜ ಸಂಪತ್ತಿನ ಲೂಟಿಯ ಕಥೆ, ದಿಢೀರನೆ ೪೦೦೦ ಕೋಟಿ ರೂಪಾಯಿಗಳ ಒಡೆಯನಾದ ಜಾರ್ಖಂಡ್ ರಾಜ್ಯದ ಮಧುಕೋಡನ ಕಥೆ, ಇವೆಲ್ಲ ವಿಕೃತಿ ಸಂವತ್ಸರದ ವಿಕೃತಗಳು ಮತ್ತು ಹಗರಣಗಳ ಮೆರವಣಿಗೆಯ ಸಾಲುಗಳು. ದೇಶದ ಜನತೆ ಹೇಗೆ ಇದನ್ನೆಲ್ಲ ಸಹಿಸಿಕೊಂಡಿದೆ ? ಈ ದೇಶಕ್ಕೊಂದು ಕಾನೂನಿಲ್ಲವೆ ? ಸಂವಿಧಾನವಿಲ್ಲವೆ ? ಪ್ರಶ್ನೆಗಳು ಕಾಡುತ್ತಿವೆ.

**ನಶಿಸುತ್ತಿರುವ ನ್ಯಾಯಾಂಗದ ಮೌಲ್ಯಗಳು**

ಇದೇ ನಮ್ಮ ದೇಶಕ್ಕೊಂದು ಲಿಖಿತ ಸಂವಿಧಾನವಿದೆ. ಇದನ್ನು ಅರ್ಥೈಸುವಲ್ಲಿ ತೊಡಕಾಗಬಾರದೆಂಬ ಕಾರಣಕ್ಕಾಗಿ ಇದನ್ನು ಆದಷ್ಟು ದೀರ್ಘವಾಗಿ ಬರೆಯಲಾಗಿದೆ. ಇದಕ್ಕೊಂದು ಪೀಠಿಕೆಯೂ ಇದೆ. ಸಂವಿಧಾನವನ್ನು ಅರ್ಥೈಸುವಲ್ಲಿ ಈ ಪೀಠಿಕೆಯಲ್ಲಿರುವ ಧ್ಯೇಯಗಳನ್ನು ಗಮನದಲ್ಲಿಟ್ಟುಕೊಳ್ಳಬೇಕೆಂದು ಸರ್ವೋಚ್ಚ ನ್ಯಾಯಾಲಯ ಅನೇಕ ತೀರ್ಪುಗಳಲ್ಲಿ ಹೇಳಿದೆ. ಸಮಾಜವಾದಿ ವ್ಯವಸ್ಥೆ ಸಂವಿಧಾನದ ಮೂಲ ಲಕ್ಷಣಗಳಲ್ಲೊಂದೆಂದು ಸರ್ವೋಚ್ಚ ನ್ಯಾಯಾಲಯ ಈ ಹಿಂದೆ ಸಾರಿತ್ತು. ಈಗ ಅದೇ ಸರ್ವೋಚ್ಚ ನ್ಯಾಯಾಲಯ ಬಂಡವಾಳಶಾಹಿ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಆರ್ಥಿಕ ನೀತಿಗಳನ್ನು ಗಮನದಲ್ಲಿಟ್ಟುಕೊಂಡು ತೀರ್ಪುಗಳನ್ನು ಕೊಡಬೇಕೆಂದು ಅನೇಕ ಪ್ರಕರಣಗಳಲ್ಲಿ ನಿರ್ಣಯಿಸಿದೆ. ಅಂದರೆ ಜಾಗತೀಕರಣದ ಪ್ರಭಾವ ನ್ಯಾಯಾಂಗದ ಮೇಲೂ ಹಬ್ಬಿದೆ ಎಂಬುದು ಸ್ಪಷ್ಟವಾಗುತ್ತದೆ. ಸಂವಿಧಾನದ ಮೇಲೆ ಆಣೆ ಇಟ್ಟು ಅಧಿಕಾರ ಗ್ರಹಣ ಮಾಡುವ ನ್ಯಾಯಾಧೀಶರೇ ಸಂವಿಧಾನದ ಆಶಯಗಳಿಂದ ವಿಚ್ಛೇದನ ಹೊಂದುವುದು ನ್ಯಾಯಾಂಗದ ಅವನತಿಯ ಸಂಕೇತ. ಬಂಡವಾಳಶಾಹಿ ಜಾಗತೀಕರಣ ಭಾರತದ ನ್ಯಾಯಾಂಗದ ಮೌಲ್ಯಗಳನ್ನು ನಾಶಗೊಳಿಸುತ್ತಿದೆ ಅಥವಾ ಅಪಮೌಲ್ಯಗೊಳಿಸುತ್ತಿದೆ. ಇದಕ್ಕೆ ಪೂರಕವಾದ ನಿದರ್ಶನಗಳು ದಿನನಿತ್ಯ ಬೆಳಕಿಗೆ ಬರುತ್ತಿವೆ.

**ಸರ್ವೋಚ್ಚ ನ್ಯಾಯಾಲಯ – ತಾರತಮ್ಯದ ನೆಲೆ**

ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಮುಖ್ಯ ನ್ಯಾಯಾಧೀಶರಾಗಿ ನೇಮಕಗೊಂಡ ನ್ಯಾಯಮೂರ್ತಿ ಪಿ. ಡಿ. ದಿನಕರನ್ ಅವರ ಮೇಲೆ ಅನೇಕ ಆರೋಪಗಳಿದ್ದರೂ ಅವರನ್ನು ಯಾವ ತನಿಖೆಗೂ ಒಳಪಡಿಸದೆ ಈಗ ಅವರನ್ನು ಸಿಕ್ಕಿಂ ಉಚ್ಚ ನ್ಯಾಯಾಲಯದಲ್ಲಿ ಯಾವ ಸಂಕೋಚವೂ ಇಲ್ಲದಂತೆ ತಮ್ಮ ಕೆಲಸ ಮುಂದುವರಿಸಿಕೊಂಡು ಹೋಗಲು ಅನುವು ಮಾಡಿಕೊಟ್ಟ ಸರ್ವೋಚ್ಚ ನ್ಯಾಯಾಲಯದ ಬಗ್ಗೆ ಗೌರವ ಹುಟ್ಟಲು ಸಾಧ್ಯವೇ? ಒಂದು ರೂಪಾಯಿಯ ಟಿಕೆಟ್ ಕೊಡದ ಸಾರಿಗೆ ಸಂಸ್ಥೆಯ ನಿರ್ವಾಹಕನನ್ನು ಕೆಲಸದಲ್ಲಿರಲು ಅನರ್ಹನೆಂದು ತೀರ್ಮಾನಿಸಿರುವ ಸರ್ವೋಚ್ಚ ನ್ಯಾಯಾಲಯ ದಿನಕರನ್ ಬಗ್ಗೆಯೂ ಅದೇ ನಿಲುವು ತೆಗೆದುಕೊಳ್ಳಬೇಕಲ್ಲವೆ? ಒಂದು ಕಣ್ಣಿಗೆ ಸುಣ್ಣ ಮತ್ತೊಂದು ಕಣ್ಣಿಗೆ ಬೆಣ್ಣೆಯ ನ್ಯಾಯವಿತರಣೆ ಸಂವಿಧಾನಾತ್ಮಕವಾಗಿದೆಯೆ?

**ಶ್ರೀಮಂತಿಕೆ ಕಳೆದುಕೊಂಡ ಶ್ರೀಮಂತರು**

ನ್ಯಾಯಮೂರ್ತಿ ಪಿ. ಡಿ. ದಿನಕರನ್‌ಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಅನೇಕ ಆಶ್ರಯದಾತರಿದ್ದರೆಂದೂ, ಅದರಲ್ಲಿ ಮಾಜಿ ಮುಖ್ಯ ನ್ಯಾಯಮೂರ್ತಿ ಬಾಲಕೃಷ್ಣನ್ ಒಬ್ಬರೆಂದೂ ದಟ್ಟವಾದ ಸುದ್ದಿ ಕರ್ನಾಟಕದ ಉಚ್ಚ ನ್ಯಾಯಾಲಯದ ಕಾರಿಡಾರ್‌ನಲ್ಲಿ ಪ್ರಚಲಿತವಾಗಿತ್ತು. ಅದೇನೂ ಊಹಾಪೋಹವಲ್ಲವೆಂದು ನಂತರದ ಘಟನೆಗಳು ಸ್ಥಿರಗೊಳಿಸಿವೆ. ಇತ್ತೀಚಿನ ದಶಕಗಳಲ್ಲಿ ಸರ್ವೋಚ್ಚ ನ್ಯಾಯಾಲಯದ ದೀರ್ಘಾವಧಿ ಮುಖ್ಯ ನ್ಯಾಯಾಧೀಶರೆಂದು ಪರಿಗಣಿಸಲ್ಪಡುವ ಮತ್ತು ನಿವೃತ್ತರಾಗುತ್ತಿದ್ದಂತೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರಾದ ನ್ಯಾಯಮೂರ್ತಿ ಬಾಲಕೃಷ್ಣನ್‌ರವರ ಕುಟುಂಬದವರ ಆಸ್ತಿ-ಪಾಸ್ತಿ ಗಳಿಕೆ ಇವರ ಅಧಿಕಾರಾವಧಿಯಲ್ಲಿ, ಅವರುಗಳ ಆದಾಯಕ್ಕೆ ಮೀರಿದೆಯೆಂದು ಆದಾಯ ತೆರಿಗೆ ಇಲಾಖೆಯ ತನಿಖೆಯಿಂದ ಬಹಿರಂಗಗೊಂಡಿದೆ. ಇದು ನ್ಯಾಯಾಂಗದ ಗೌರವಕ್ಕೆ ಚ್ಯುತಿ ತಂದಿದೆ. ಈ ವ್ಯಕ್ತಿ ಪಿ. ಡಿ. ದಿನಕರನ್‌ರವರನ್ನು ರಕ್ಷಿಸಿದ್ದಲ್ಲಿ ಆಶ್ಚರ್ಯವಿಲ್ಲ. ಇದು ನ್ಯಾಯಾಂಗದ ಅವನತಿಯ ಮತ್ತೊಂದು ಸಂಕೇತ. ಈ ಕಾರಣಕ್ಕಾಗಿಯೇ ಬಾಲಕೃಷ್ಣನ್‌ರವರ ಮಾಹಿತಿ ಹಕ್ಕು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಿಗೆ ಅನ್ವಯಿಸುವುದಿಲ್ಲವೆಂಬ ನಿಲುವು ಪ್ರಶ್ನಾರ್ಹ.

೧೯೯೦ರ ದಶಕದ ಆದಿಯಲ್ಲಿ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿದ್ದ ವಿ. ರಾಮಸ್ವಾಮಿಯವರು ಪಂಜಾಬ್ ಮತ್ತು ಹರಿಯಾಣ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದ ಅವಧಿಯಲ್ಲಿ ಮಾಡಿದ ದುರ್ವರ್ತನೆಯ ಆರೋಪಗಳು ಬಹಿರಂಗಗೊಂಡಾಗ ಆ ಅವಧಿಯಲ್ಲಿ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದ ನ್ಯಾಯಮೂರ್ತಿ ಸಬ್ಯಸಾಚಿ ಮುಖರ್ಜಿಯವರು ನ್ಯಾಯಾಲಯದಲ್ಲಿ ಮಾತನಾಡುತ್ತಾ ತಾವು ನ್ಯಾಯಮೂರ್ತಿ ವಿ. ರಾಮಸ್ವಾಮಿಯವರು ಇನ್ನು ಮುಂದೆ ನ್ಯಾಯ ನಿರ್ಣಯದ ಕೆಲಸ ಮಾಡಕೂಡದೆಂದು ಸಲಹೆ ನೀಡಿರುವುದಾಗಿ ತಿಳಿಸಿದ್ದು ಮುಂದಿನ ದಿನಗಳಿಗೆ ಮಾರ್ಗಸೂಚಿಯಾಗಬೇಕಿತ್ತು. ಆದರೆ ದಿನಕರನ್ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ಈ ಉದಾಹರಣೆಗೆ ಗೌರವ ಕೊಡದೆ ವಕೀಲರ ಪ್ರತಿಭಟನೆಯಿಂದಾಗಿ ದಿನಕರನ್ ಅವರನ್ನು ನ್ಯಾಯನಿರ್ಣಯಕ್ಕೆ ಹಚ್ಚದಿದ್ದರೂ, ಆಡಳಿತದ ಉಸ್ತುವಾರಿ ಅವರಲ್ಲಿ ಉಳಿಸಿದ್ದು ಸರ್ವೋಚ್ಚ ನ್ಯಾಯಾಲಯಕ್ಕೆ ಮಸಿ ಬಳಿದಂತಹ ನಿದರ್ಶನ.

**ಸರ್ವೋಚ್ಚ ನ್ಯಾಯಾಲಯ – ಕಟಕಟೆಯಲ್ಲಿ**

ಇತ್ತೀಚೆಗೆ ಹಿರಿಯ ವಕೀಲರು ಹಾಗೂ ಮಾಜಿ ಕೇಂದ್ರ ಕಾನೂನು ಸಚಿವ ಶಾಂತಿಭೂಷಣ್‌ರವರು ಸರ್ವೋಚ್ಚ ನ್ಯಾಯಾಲಯದ ಈವರೆಗಿನ ಹದಿನಾರು ಮುಖ್ಯ ನ್ಯಾಯಾಧೀಶರ ಪೈಕಿ ಎಂಟು ನ್ಯಾಯಾಧೀಶರ ಪ್ರಾಮಾಣಿಕತೆಯನ್ನು ಬಹಿರಂಗವಾಗಿ ಪ್ರಶ್ನಿಸಿ, ತಾನು ಅದನ್ನು ಸಾಬೀತುಪಡಿಸುವುದಾಗಿ ಹೇಳಿರುವುದು ಇಡೀ ದೇಶವನ್ನೇ ಸ್ತಂಭೀಭೂತಗೊಳಿಸಿದೆ. ಇದೊಂದು ಅಭೂತಪೂರ್ವ ಘಟನೆ. ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ನ್ಯಾಯಮೂರ್ತಿ. ವಿ. ಆರ್. ಕೃಷ್ಣ ಅಯ್ಯರ್ ಇತ್ತೀಚಿನ ತಮ್ಮ ಲೇಖನವೊಂದರಲ್ಲಿ ಶಾಂತಿಭೂಷಣ್‌ರವರ ಬಹಿರಂಗ ಹೇಳಿಕೆ ಸರ್ವೋಚ್ಚ ನ್ಯಾಯಾಲಯದ ಚರಿತ್ರೆಯಲ್ಲೆ ಒಂದು ಅಸಾಧಾರಣ ಘಟನೆ ; ನ್ಯಾಯಾಂಗ ಶಾಂತಿಭೂಷಣರ ಮೇಲೆ ನ್ಯಾಯಾಂಗ ನಿಂದನೆ ಆರೋಪ ಹೊರಿಸಿ ಅವರ ಬಾಯನ್ನು ಮುಚ್ಚುವ ಪ್ರಯತ್ನ ಮಾಡದೆ ಅವರು ಮಾಡಿರುವ ಆರೋಪಗಳನ್ನು ಗಂಭೀರವಾಗಿ ಪರಿಗಣಿಸಿ, ಪಾರ್ಲಿಮೆಂಟ್‌ನಲ್ಲಿ ಚರ್ಚಿಸಿ, ಸೂಕ್ತ ತನಿಖೆ ನಡೆಸಿ ಸತ್ಯಾಸತ್ಯೆಗಳನ್ನು ಹೊರತರಬೇಕೆಂದು ಸೂಚಿಸಿದ್ದಾರೆ. ಆರೋಪಗಳು ಸತ್ಯವಾದಲ್ಲಿ ತಪ್ಪಿತಸ್ಥ ನ್ಯಾಯಮೂರ್ತಿಗಳ ಮೇಲೆ ಕ್ರಮ ಜರುಗಿಸಬೇಕೆಂದು, ಇಲ್ಲವಾದಲ್ಲಿ ಶಾಂತಿಭೂಷಣರ ಮೇಲೆ ಸೂಕ್ತಕ್ರಮ ತೆಗೆದುಕೊಳ್ಳಬೇಕೆಂಬ ಕೃಷ್ಣ ಅಯ್ಯರ್ ಅವರ ಸಲಹೆ ಸ್ವಾಗತಾರ್ಹವಾಗಿದೆ. ಆದರೆ ವಸ್ತು ಸತ್ಯವೆಂದರೆ ಶಾಂತಿಭೂಷಣ್ ಮಾಡಿರುವ ಆರೋಪಗಳು ಇಡೀ ನ್ಯಾಯಾಂಗದ ನೈತಿಕತೆಯನ್ನೇ ಪ್ರಶ್ನಿಸುವ ಆಯಾಮವನ್ನು ಹೊಂದಿತ್ತು. ಇದು ನ್ಯಾಯಾಂಗದಲ್ಲಿ ಮಾತ್ರವಲ್ಲ ಇಡೀ ಜನಸಮುದಾಯದಲ್ಲಿ ಭಾರಿ ಅಲ್ಲೋಲಕಲ್ಲೋಲ ಸೃಷ್ಟಿಸಬೇಕಾಗಿತ್ತು. ದೇಶಾದ್ಯಂತ ವ್ಯಾಪಕ ಚರ್ಚೆ ನಡೆಯಬೇಕಾಗಿತ್ತು. ದುರಂತವೆಂದರೆ ಇಂದಿನ ನ್ಯಾಯಾಂಗ ವ್ಯವಸ್ಥೆ ಶಾಂತಿಭೂಷಣ ಮಾಡಿರುವ ಆರೋಪಗಳನ್ನು ಜೀರ್ಣಿಸಿಕೊಂಡಿರುವುದು. ಶಾಂತಿಭೂಷಣರಿಗೂ ಇದೊಂದು ಪಾಠ. ವ್ಯವಸ್ಥೆಯ ಬದಲಾವಣೆ ಸಾಮೂಹಿಕ ಹೋರಾಟದಿಂದ ಮಾತ್ರ ಸಾಧ್ಯ. ವಕೀಲರ ಸಂಘಗಳಾಗಲೀ, ರಾಜಕೀಯ ಪಕ್ಷಗಳಾಗಲೀ ನ್ಯಾಯಾಂಗ ವ್ಯವಸ್ಥೆಯ ಈ ಮಟ್ಟದಲ್ಲಿನ ಭ್ರಷ್ಟಾಚಾರದ ಆರೋಪಗಳ ಬಗ್ಗೆ ಕಾಳಜಿ ವ್ಯಕ್ತಪಡಿಸದೆ ಇರುವುದು ದುರದೃಷ್ಟ ಬೆಳವಣಿಗೆ.

**ಪ್ರಾಮಾಣಿಕ ನ್ಯಾಯಾಧೀಶರ ಪಾಡು**

ನಿರ್ಭೀತ, ಪ್ರಾಮಾಣಿಕ ಹಾಗೂ ನಿಷ್ಪಕ್ಷಪಾತ ನ್ಯಾಯಾಂಗ ಭಾರತ ಸಂವಿಧಾನದ ಆಶಯ. ನ್ಯಾಯಾಂಗ ಈ ಗುಣಗಳನ್ನು ಹೊಂದಿದ್ದಲ್ಲಿ ಸಂವಿಧಾನದ ಇತರೆ ಅಂಗಗಳಾದ ಶಾಸಕಾಂಗ ಮತ್ತು ಕಾರ್ಯಾಂಗಗಳ ಅತಿರೇಕ ಕ್ರಮಗಳನ್ನು ಕಾನೂನುಬಾಹಿರವೆಂದು

(೫೨ನೇ ಪುಟಕ್ಕೆ)

## ಉಪಮೆ

ನನ್ನ ದಿನಗಳನ್ನು
ಕಸದಂತೆ ಗುಡಿಸುತ್ತಿದೆ
ಕಾಲವೆಂಬ ಪೊರಕೆ
ಬೆಲೆಯುಳ್ಳ ಒಂದು ದಿನವೂ
ಸಿಗಲಿಲ್ಲವಂತೆ ಅದಕೆ
ಇಂದುಟ್ಟ ಸೀರೆ
ನಾಳೆ ಉಡಲು ಆಗಸಗಿತ್ತಿ
ಭೂಮಿಗೋ ದಿನವೂ
ಬೆತ್ತಲಾಗುವ ಭಯ ತೂಗುವಗತ್ತಿ

**ಕೆ. ಎ. ಚಂದ್ರ ಜ್ಯೋತಿ**
'ಕಸ್ತೂರಿ', ನಂ. ೨/೯೪೬, ಕೆ. ಆರ್. ಬಡಾವಣೆ
ತುಮಕೂರು - ೫೭೨೧೦೧

# ಮುಕ್ತಪತನದ ಬದುಕು – ಏಕೆ?

೧೯೫೭ನೇ ಅಕ್ಟೋಬರ್ ೪ರಂದು 'ಮನುಷ್ಯ ನಿರ್ಮಿತ ಉಪಗ್ರಹ ಸ್ಪುತ್ನಿಕ್ ಭೂಮಿಯನ್ನು ಸುತ್ತುತ್ತಿದೆ' ಎಂಬ ಸುದ್ದಿ ಅನಿರೀಕ್ಷಿತವಾಗಿತ್ತು. ''ಹೌದೆ? ನೋಡೋಣ'' ಎಂದುಕೊಂಡು ಆಕಾಶವನ್ನು ದಿಟ್ಟಿಸಿದವರಿಗೆ ಹೊಸತೇನೂ ಕಾಣಲಿಲ್ಲ! ಕಾರಣ – ಭೂಮಿಯಿಂದ ಸ್ಪುತ್ನಿಕ್ ಇದ್ದ ದೂರ ಅದರ ಗಾತ್ರಕ್ಕೆ ಹೋಲಿಸಿದಾಗ ಬಹಳ ಹೆಚ್ಚಾಗಿತ್ತು. ಆದರೆ ಸ್ಪುತ್ನಿಕ್ಕಿನಿಂದ ಹೊಮ್ಮಿದ ರೇಡಿಯೋ ಸಂಜ್ಞೆಗಳನ್ನು ಹವ್ಯಾಸಿ ರೇಡಿಯೋ ಕೇಳುಗರು ಕೂಡ ಅಂದು ಕೇಳಿಸಿಕೊಂಡರು.

ಸುಮಾರು ಎರಡು ವರ್ಷಗಳ ತಯಾರಿಯೊಂದಿಗೆ ರಷ್ಯಕ್ಕೆ ಈ ಸಾಧನೆ ಸಾಧ್ಯವಾಗಿತ್ತು. ಸ್ಪುತ್ನಿಕ್ಕಿನದ್ದು ೮೪ ಕಿಲೊಗ್ರಾಮ್ ತೂಕ, ೫೮.೫ ಸೆಂಟಿಮೀಟರ್ ವ್ಯಾಸದ ಗೋಲಾಕಾರ, ಗಂಟೆಗೆ ೨೯ ಸಾವಿರ ಕಿಲೊಮೀಟರ್ ವೇಗ. ಭೂಮಿಯನ್ನು ಅದು ೯೬.೨ ಮಿನಿಟುಗಳಿಗೊಮ್ಮೆ ಸುತ್ತುತ್ತಿತ್ತು. ಹೀಗೆ ಮೂರು ತಿಂಗಳ ಕಾಲ ಸುತ್ತುತ್ತ ಅದು ನಾಶವಾಯಿತು.

ಸ್ಪುತ್ನಿಕ್ ಉಡ್ಡಯನದ ಬಳಿಕ ವ್ಯೋಮಕ್ಕೆ ಸಾಗುವುದರಲ್ಲಿ ದೇಶಗಳೊಳಗೆ ಸ್ಪರ್ಧೆ ಪ್ರಾರಂಭವಾಯಿತು. ಸಮೀಕ್ಷೆ, ಸಂಪರ್ಕ, ಸಂಶೋಧನೆ ಹಾಗೂ ಎಲ್ಲದಕ್ಕಿಂತ ಹೆಚ್ಚಾಗಿ ಮಿಲಿಟರಿ ಉದ್ದೇಶಗಳಿಗಾಗಿ ಬಗೆ ಬಗೆಯ ವ್ಯೋಮ ನೌಕೆಗಳನ್ನು ಉಡ್ಡಯಿಸಿದರು. ಮನುಷ್ಯನ ತಾಂತ್ರೀಯ ಸಾಧನೆಗಳಿಗೆ ಹೊಸ ಕ್ಷೇತ್ರವೊಂದು ತೆರೆದುಕೊಂಡಿತು. ವ್ಯೋಮ ಸ್ಪರ್ಧೆಯೊಂದಿಗೆ ವ್ಯೋಮ ಯುಗವು ಪ್ರಾರಂಭವಾಯಿತು.

ಈ ವರ್ಷ(೨೦೧೧) ಅಂತಿಮ ರೂಪ ಪಡೆಯಲಿರುವ 'ಅಂತರರಾಷ್ಟ್ರೀಯ ವ್ಯೋಮ ನಿಲ್ದಾಣ'ದಿಂದಾಗಿ ವ್ಯೋಮ ಯುಗದಲ್ಲೊಂದು ಹೊಸ ಹೊಲಬು ತೋರುತ್ತಿದೆ. ವ್ಯೋಮ ನಿಲ್ದಾಣದ ರಚನೆ ಮತ್ತು ಚಟುವಟಿಕೆಗಳಲ್ಲಿ ಹಲವು ದೇಶಗಳು ಭಾಗಿಗಳಾಗುತ್ತಿವೆ.

ಸ್ಪುತ್ನಿಕ್‌ಗೆ ಹೋಲಿಸಿದರೆ ವ್ಯೋಮ ನಿಲ್ದಾಣ ಬಹಳ ದೊಡ್ಡ ಉಪಗ್ರಹ : ೧೦೯ ಮೀಟರ್ ಉದ್ದ, ೫೧ ಮೀಟರ್ ಅಗಲ ಹಾಗೂ ೨೦ ಮೀಟರ್ ಎತ್ತರ. ತೂಕವೋ ಸುಮಾರು ೩೭೬ ಸಾವಿರ ಕಿಲೊಗ್ರಾಮ್. ಪ್ರತಿಫಲಿತ ಸೂರ್ಯ ಪ್ರಕಾಶದಿಂದಾಗಿ ಹೊತ್ತಿಳಿದ ನಸು ಕತ್ತಲೆಯಲ್ಲಿ ಪ್ರಕಾಶಮಾನವಾದ ಚುಕ್ಕಿಯಂತಹ ಅದರ ನೋಟ. ಆಕಾಶದ ತಗ್ಗಿನಲ್ಲಿ ಕಾಣಿಸಿ ಭೂಮಿಯ ನೆರಳಿಗಿಳಿದು ಅದು ಮಾಯವಾಗುವ ಮೊದಲು ಸುಮಾರು ಎರಡು ಮಿನಿಟು ಕಾಣಿಸಬಲ್ಲುದು. ಅದರದ್ದು ಭೂಮಿಯಿಂದ ಸುಮಾರು ೩೫೦ ಕಿಲೊಮೀಟರ್ ದೂರದ ಕಕ್ಷೆ ಹಾಗೂ ಆ ಕಕ್ಷೆಯಲ್ಲಿ ೯೧ ಮಿನಿಟಿಗೊಮ್ಮೆ ಭೂಮಿಗೊಂದು ಸುತ್ತು.

ರಷ್ಯ, ಅಮೆರಿಕ, ಕೆನಡ, ಜಪಾನ್ ಮತ್ತು ಯೂರೋಪಿಯನ್ ಯೂನಿಯನ್(ಇದರಲ್ಲಿ ಜರ್ಮನಿ, ಫ್ರಾನ್ಸ್, ಡೆನ್ಮಾರ್ಕ್, ಇಟಲಿ ಮೊದಲಾದ ದೇಶಗಳು ಸೇರಿವೆ)ಗಳ ವ್ಯೋಮ ಮಂಡಲಿಗಳು ಸೇರಿ ಆಕಾಶದಲ್ಲಿ ನಿಲ್ದಾಣವನ್ನು ಕಟ್ಟಲು ೧೯೯೦ರ ದಶಕದಲ್ಲಿ ನಿರ್ಧರಿಸಿದುವು. ಆದ್ದರಿಂದ ಇದು 'ಅಂತರರಾಷ್ಟ್ರೀಯ'ವಾಯಿತು. ರಷ್ಯ ಕಳಿಸಿದ 'ಜಾರ್ಯ' ಎಂಬ ಮಾಡ್ಯೂಲ್ ಅಥವಾ ನಿಲ್ದಾಣ ಭಾಗ ಕಕ್ಷೆಗೆ ಸೇರುವುದರೊಂದಿಗೆ ೧೯೯೮ರಲ್ಲಿ ನಿಲ್ದಾಣದ ಕೆಲಸ ಪ್ರಾರಂಭವಾಯಿತು. 'ಜಾರ್ಯ' ಎಂದರೆ ರಷ್ಯನ್ ಭಾಷೆಯಲ್ಲಿ 'ಸೂರ್ಯೋದಯ' ಎಂದರ್ಥ. ಜಾರ್ಯದಿಂದ ವ್ಯೋಮ ನಿಲ್ದಾಣದ ದಿನಗಳನ್ನೆಣಿಸುವಂತಾಯಿತು. ನಿಲ್ದಾಣವನ್ನು ಕಟ್ಟುವ ಮೊದಲ ದಿನಗಳಲ್ಲಿ ವಿದ್ಯುತ್ ಸರಬರಾಜು, ಉಗ್ರಾಣ, ನೋದನ ಮತ್ತು



ದಿಗ್ದರ್ಶನಗಳನ್ನು ಒದಗಿಸಿದ್ದು ಜಾರ್ಯವೇ. ಅನಂತರ ೧೩ ಮಾಡ್ಯೂಲುಗಳ ಸಾಗಣೆಯಾಗಿದೆ. ಈ ವರ್ಷ ಬಹು ಉದ್ದೇಶಗಳ 'ಲಿಯೊನಾರ್ಡೊ' ಮತ್ತು ಪ್ರಯೋಗಗಳಿಗೆ ಮೀಸಲಾದ 'ನೌಕಾ' ಎಂಬ ಮಾಡ್ಯೂಲುಗಳು ವ್ಯೋಮ ನಿಲ್ದಾಣವನ್ನು ಸೇರಲಿವೆ.

೨೦೦೦ನೇ ವರ್ಷದ ನವಂಬರ್ ೨ರಿಂದ ನಿಲ್ದಾಣದಲ್ಲಿ ಪ್ರಾರಂಭವಾದ ಜನವಸತಿ ಸತತವಾಗಿ ಮುಂದುವರಿದಿದೆ. ಒಮ್ಮೆಗೆ ಆರು ಮಂದಿ ಯಾನಿಗಳು ನಿಲ್ದಾಣದಲ್ಲಿರುತ್ತಾರೆ. ಒಂದೊಂದೇ ಭಾಗವನ್ನು ಸೇರಿಸುತ್ತ ನಿಲ್ದಾಣವನ್ನು ಕಟ್ಟುವುದಕ್ಕೂ ಪ್ರಯೋಗ ನಡೆಸುವುದಕ್ಕೂ ಬೇರೆ ಬೇರೆ ದೇಶಗಳ ವ್ಯೋಮಯಾನಿಗಳನ್ನು ಒಳಗೊಂಡ ೨೫ ತಂಡಗಳು ಅಲ್ಲಿಗೆ ಹೋಗಿಬಂದಿವೆ. ವ್ಯೋಮದಲ್ಲಿ ೧೯೫ ದಿನಗಳ ತನಕ ವಾಸಿಸಿದ ಭಾರತೀಯ ಮೂಲದ ಸುನೀತಾ ವಿಲಿಯಮ್ಸ್ ಹೀಗೆ ಹೋಗಿ ಬಂದವರಲ್ಲಿ ಒಬ್ಬಾಕೆ. ನಿಲ್ದಾಣವನ್ನು ಕಟ್ಟುವ ಕೆಲಸ ನಡೆದದ್ದು ಮಾಡ್ಯೂಲಿನ ಒಳಗಷ್ಟೇ ಅಲ್ಲ. ಮಾಡ್ಯೂಲಿನ ಹೊರಗೆ ಬಂದು – ಅದರೊಂದಿಗೇ ಚಲಿಸುತ್ತ – ವ್ಯೋಮಯಾನಿಗಳು ದುಡಿದಿದ್ದಾರೆ. ಅದಕ್ಕಾಗಿ ರೊಬೊಟ್‌ಗಳನ್ನೂ ಬಳಸಿದ್ದಾರೆ. ಈಗ ೨೬ನೇ ತಂಡ ಅಲ್ಲಿ ಕ್ರಿಯಾನಿರತವಾಗಿದೆ. ಕಟ್ಟಡ ಸಾಮಗ್ರಿ, ಆಹಾರ ಸರಂಜಾಮುಗಳೆಲ್ಲ ಭೂಮಿಯಿಂದಲೇ ವ್ಯೋಮಕ್ಕೆ ವಿವಿಧ ನೌಕೆಗಳಲ್ಲಿ ಸರಬರಾಜಾದುವು. ತಾಜ್ ಮಹಲನ್ನು ಕಟ್ಟಲು ೨೨ ವರ್ಷ ಬೇಕಾಯಿತೆಂದು ಫ್ರೆಂಚ್ ಪ್ರವಾಸಿ ಟ್ರಾವರ್ನಿಯರ್ ಹೇಳಿದ್ದಾನೆ. ಭೂಮಿಯಿಂದ ಸಾಮಗ್ರಿಗಳನ್ನು ಸಾಗಿಸಿ ಆಕಾಶದಲ್ಲೇ ಕಟ್ಟಬೇಕಾಗಿದ್ದರೂ ಅಂತರರಾಷ್ಟ್ರೀಯ ವ್ಯೋಮ ನಿಲ್ದಾಣಕ್ಕೆ ಇಷ್ಟು ಸಮಯ ಬೇಕಾಗಲಿಲ್ಲ. ೨೦೧೧ರಲ್ಲಿ ವ್ಯೋಮ ನಿಲ್ದಾಣದ ಕೆಲಸ ಮುಗಿಯುತ್ತದೆ. ಅಂದರೆ ಈ ವ್ಯೋಮ ವಾಸ್ತುವನ್ನು ಪೂರ್ಣಗೊಳಿಸಲು ಬೇಕಾಗುವ ಅವಧಿ ೧೩ ವರ್ಷ.

ಭೂಮಿಯನ್ನು ಸುತ್ತುವುದೆಂದರೆ ಭೂಮಿಯ ಕಡೆ ಸದಾ ಬೀಳುವುದೇ ಸರಿ. ಸಾಮಾನ್ಯ ವೇಗದಿಂದ ವಸ್ತುವೊಂದನ್ನು ಎಸೆದಾಗ ಅದು ಬೀಳುಬೀಳುತ್ತಾ ಒಂದಷ್ಟು ದೂರದಲ್ಲಿ ನೆಲವನ್ನು ತಲಪುತ್ತದೆ ತಾನೆ? ಭೂಮಿಯ 'ಬಾಗು' ಎಸೆದ ವಸ್ತುವಿನ 'ಬೀಳು'ವನ್ನು ಸರಿತೂಗಿಸದಿರುವುದೇ ಇದಕ್ಕೆ

ಅಡ್ಯನಡ್ಕ ಕೃಷ್ಣ ಭಟ್



ಕಾರಣ. ವೇಗ ಹೆಚ್ಚಾದಷ್ಟೂ ಎಸೆದ ವಸ್ತು ನೆಲವನ್ನು ತಲಪುವ ದೂರ ಹೆಚ್ಚುತ್ತದೆ. ಸೆಕೆಂಡಿಗೆ ಸುಮಾರು ೮ ಕಿಲೊಮೀಟರ್ ವೇಗದಲ್ಲಿ ಸಾಗುವಾಗ ಬೀಳುವ ವಸ್ತುವಿಗೆ ತನ್ನ ಮೈ ಸಿಗದಂತೆ ಭೂಮಿ ಬಾಗುತ್ತದೆ – ಅಂದರೆ ಎಸೆದ ವಸ್ತು ಭೂಮಿಯ ಕಡೆ ಯಾವುದೇ ಅಡೆತಡೆ ಇಲ್ಲದೆ ನಿರಾಧಾರವಾಗಿ ಬೀಳುತ್ತಲೇ ಇರುತ್ತದೆ (ವಾತಾವರಣದ ಘರ್ಷಣೆಯನ್ನು ಇಲ್ಲಿ ಲೆಕ್ಕಕ್ಕೆ ತೆಗೆದುಕೊಂಡಿಲ್ಲ). ಇದನ್ನೇ ಆಲಂಕಾರಿಕವಾಗಿ 'ಮುಕ್ತ ಪತನ' ಎನ್ನಬಹುದು! ಭೂಮಿಯನ್ನು 'ಸುತ್ತುವುದು' ಅಥವಾ 'ಪರಿಭ್ರಮಿಸುವುದು' ಎಂದರೂ ಇದುವೇ. ಇದಕ್ಕೆ ಬೇಕಾದ ವಸ್ತುವಿನ ವೇಗ ಭೂಮಿಯಿಂದಿರುವ ಎತ್ತರದೊಂದಿಗೆ ಬದಲಾಗುತ್ತದೆ. ಚಂದ್ರ ಭೂಮಿಯ ಕಡೆ ಬೀಳುತ್ತದೆ, ಭೂಮಿ ಸೂರ್ಯನ ಕಡೆ ಬೀಳುತ್ತದೆ.ಇದನ್ನೆಲ್ಲ ಗ್ರಹಿಸಿಯೇ ಐಸಾಕ್ ನ್ಯೂಟನ್ ಸಾರ್ವತ್ರಿಕ ಗುರುತ್ವವನ್ನು ಕಲ್ಪಿಸಿದ್ದ. ಭೂಮಿಯನ್ನು ಸುತ್ತುತ್ತ ಅದರ ಉಪಗ್ರಹವಾಗಿರುವ ವ್ಯೋಮ ನಿಲ್ದಾಣದ್ದೂ ಮುಕ್ತ ಪತನವೇ.

ಬೀಳದಿರುವಾಗಲಷ್ಟೇ ವಸ್ತುವಿನ ತೂಕವನ್ನು ಅನುಭವಿಸಬಹುದು ಅಥವಾ ಅಳೆಯಬಹುದು. ಅಂದರೆ ಬೀಳುತ್ತಿರುವ ವಸ್ತುವಿಗೆ ತೂಕವಿಲ್ಲ! ವ್ಯೋಮ ನಿಲ್ದಾಣದೊಂದಿಗೆ ಅದರೊಳಗೆ ವಾಸಿಸುವ ಯಾನಿಗಳೂ ಬೀಳುತ್ತಿರುವುದರಿಂದ ಅವರೂ ತಮ್ಮ ತೂಕವನ್ನು ಅನುಭವಿಸುವುದಿಲ್ಲ, ಅನುಭವಿಸಿದರೂ ಅತ್ಯಲ್ಪ! ಇದನ್ನೇ ತೂಕರಾಹಿತ್ಯ ಅಥವಾ ಸೂಕ್ಷ್ಮ ಗುರುತ್ವ ಎನ್ನುವುದು. ಜೀವನವಿಡೀ ಭೂಮಿಯಲ್ಲೇ ಕಳೆಯುವ ನಮಗೆ ಇದೊಂದು ವಿಚಿತ್ರ ಸ್ಥಿತಿ ಎನಿಸಿದರೆ ಆಶ್ಚರ್ಯವಿಲ್ಲ. ಇದಕ್ಕೆ ಹೊಂದಿಕೊಳ್ಳುತ್ತ ಯಾನಿಗಳು ತಮ್ಮ ನಿಗದಿತ ಕೆಲಸವನ್ನು ನಡೆಸಬೇಕು.

ಭೂದಿನದ ಅವಧಿಯಲ್ಲಿ ಯಾನಿಗಳು ೧೬ ಬಾರಿ ಸೂರ್ಯನ ಉದಯ – ಅಸ್ತಗಳನ್ನು ನೋಡಬಹುದು. ಅದು ಮೈ ಮನಸ್ಸುಗಳಿಗೆ ಒಗ್ಗದ ೪೫ ಮಿನಿಟು ಹಗಲು - ೪೫ ಮಿನಿಟು ರಾತ್ರಿಗಳ ಆವರ್ತ. ಉಷ್ಣದ ಏರುಪೇರಿನಿಂದಾಗಿ ನಿಲ್ದಾಣದ ಅಲ್ಪ ಹಿಗ್ಗು-ಕುಗ್ಗುಗಳಿಂದ ಉಂಟಾಗುವ ಅಪರಿಚಿತ ಧ್ವನಿಗಳು. ಸೂರ್ಯ ಬೆಳಗುತ್ತಿರುವಾಗ ಹೊರಗೆ ಬೆಳಕು-ಉಷ್ಣಗಳ ಝಳ. ಭೂಮಿಯ ನೆರಳಲ್ಲಿ ತಂಪು. ಭೂಮಿಯ ಬದಲಾಗುವ ದೃಶ್ಯ ಮತ್ತು ವ್ಯೋಮ ಕಪ್ಪು. 'ಕೆಳಗೆ-ಮೇಲೆ'ಗಳ ವ್ಯತ್ಯಾಸವಿಲ್ಲ. ನಿದ್ದೆಗೆ ಹೋಗುವುದೆಂದರೆ ನಿಲ್ದಾಣದ ಗೋಡೆಗೆ ಜೋಡಿಸಿದ ಚೀಲದೊಳಕ್ಕೆ ತುರುಕಿಸಿಕೊಳ್ಳುವುದು. ಮೊದಮೊದಲಿಗೆ ಏನೋ ಹೊಟ್ಟೆ ತೊಳಸಿದ ಹಾಗೆ ಸರಿಯಾಗಿಲ್ಲದ ಅನುಭವ. ತೂಕವಿಲ್ಲದ ಕಾರಣ ದೇಹದ ದ್ರವ ಪದಾರ್ಥ ಕಾಲಿನಂತೆ ಮುಖಕ್ಕೂ ಹರಿದು ಮುಖ ಉಬ್ಬಿದಂತಾಗು ತ್ತದೆ. ಸ್ನಾನವೆಂದರೆ ಆರ್ದ್ರ ಕಾಗದದಿಂದ ಒರಸಿಕೊಳ್ಳುವುದಕ್ಕಷ್ಟೆ ಸೀಮಿತ. ಎಲ್ಲಾದರೂ ನೀರಹನಿಗಳುಂಟಾದರೆ ವಿದ್ಯುತ್ ಜೋಡಣೆಗೆ ತೊಂದರೆಯಾಗಬಹುದು, ಉಸಿರಿನಲ್ಲಿ ಒಳಹೋದರೆ ಉಸಿರು ಕಟ್ಟೀತು. ಉಸಿರಾಡುವ ವಾಯುವಿನಲ್ಲಿ ಯಾವ ವಾಸನೆಯೂ ಇಲ್ಲ - ಇದ್ದರೆ ಅದನ್ನು ಸಲಕರಣೆಗಳು ಶೋಧಿಸಿಬಿಡುತ್ತವೆ. ಆಹಾರಕ್ಕೆ ರುಚಿ ಇಲ್ಲ, ಅದನ್ನು ನುಂಗುವುದಕ್ಕೂ ಕಷ್ಟ -ಮಗ್ಗಲು ಮಲಗಿ ಏನಾದರೂ ತಿನ್ನಲು ನೋಡಿದರೆ ಭೂಮಿಯಲ್ಲೂ ಇದು ಸುಲಭವಲ್ಲ ತಾನೆ? ಆದರೂ ನಿಯತವಾಗಿ ಮೂರು ಬಾರಿ ಊಟ-ಆಹಾರಸೇವನೆ – ನಡೆಯಲೇ ಬೇಕು. ನೀರು ಅಮೂಲ್ಯ – ವ್ಯೋಮದಲ್ಲಂತೂ ಇದು ಭೂಮಿಗಿಂತಲೂ ಹೆಚ್ಚು ನಿಜ. ಅದನ್ನು ಮರು ಆವರ್ತನೆಗೊಳಪಡಿಸಿ ಮತ್ತೆ ಮತ್ತೆ ಉಪಯೋಗಿಸಬೇಕು.




ನಿಲ್ದಾಣದಲ್ಲಿ ಒಂದೆಡೆಯಿಂದ ಇನ್ನೊಂದೆಡೆಗೆ ಹೋಗುವುದಕ್ಕೂ ಅಭ್ಯಾಸ ಬೇಕು. ಯಾವುದಕ್ಕಾದರೂ ಅಥವಾ ಯಾರನ್ನಾದರೂ ಡಿಕ್ಕಿಯಾಗದೆ, ವೆಲ್ಕ್ರೋದಿಂದ ಗೋಡೆಗೆ ಜೋಡಿಸಿದ ಕಂಪ್ಯೂಟರ್‌ಗಳಿಗೆ ತಾಗದೆ ಹೋಗಲು ಇಡೀ ನಿಲ್ದಾಣದ ಮೂರು ಆಯಾಮಗಳ ಗ್ರಹಿಕೆ ಮನಸ್ಸಿನಲ್ಲಿ ಆಳವಾಗಿ ಬೇರೂರಬೇಕು.

ನೆಲದ ಮೇಲಿರುವುದಕ್ಕಿಂತ ವ್ಯೋಮದಲ್ಲಿ ವಿಶ್ವಕಿರಣಗಳ ತೀವ್ರತೆ ಹೆಚ್ಚು. ಭೂಮಿಯ ಮೇಲೆ ಒಂದು ವರ್ಷದಲ್ಲಿ ವ್ಯಕ್ತಿಯೊಬ್ಬ ಎಷ್ಟು ವಿಕಿರಣಕ್ಕೆ ಎರವಾಗುತ್ತಾನೋ ಅದಕ್ಕೆ ವ್ಯೋಮ ನಿಲ್ದಾಣದಲ್ಲಿರುವ ವ್ಯಕ್ತಿ ಒಂದೇ ದಿನದಲ್ಲಿ ಎರವಾಗಬಹುದು. ಇವೆಲ್ಲ ನಮ್ಮ ನಿತ್ಯಬದುಕಿನಲ್ಲಿ ಇಲ್ಲದ ತೊಂದರೆಗಳಷ್ಟೆ! ಇಂಥ ತೊಂದರೆಗಳನ್ನು ತಂದುಕೊಳ್ಳುವ ವ್ಯೋಮ ನಿಲ್ದಾಣವಾದರೂ ಏಕೆ?

ಇದಕ್ಕೆ ನೀಡುತ್ತಿರುವ ಸಿದ್ಧ ಉತ್ತರ: ಭೂಮಿಯಲ್ಲಿ ನಡೆಸಲಾಗದ ಹಾಗೂ ಶೂನ್ಯ ಗುರುತ್ವದಲ್ಲಿ ನಡೆಸಬಹುದಾದ ವಿಶಿಷ್ಟ ಪ್ರಯೋಗಗಳು. ಶುದ್ಧವಾದ ಪ್ರೊಟೀನ್ ಸ್ಫಟಿಕಗಳ ತಯಾರಿ, ಟಿಸ್ಯೂ, ಕೃಷಿಕೆ, ಮೂಳೆ ಟಿಸ್ಯೂ ಬೆಳವಣಿಗೆಯ ಅಧ್ಯಯನ, ಭೂಮಿಯಲ್ಲಿ ನಡೆಯುವ ಜ್ವಾಲಾಮುಖಿ-ಉಲ್ಕಾಪಾತ-ಅರಣ್ಯನಾಶ-ಸೈಕ್ಲೋನ್ ಪರಿಣಾಮಗಳ ಅಧ್ಯಯನ, ಸೂಕ್ಷ್ಮ ಗುರುತ್ವದಲ್ಲಿ ದ್ರವ-ಲೋಹ-ಜ್ವಾಲೆಗಳ ವರ್ತನೆ, ಮಾಡ್ಯೂಲ್‌ಗಳ ಹೊರಗೆ ಬಲಗಳ ವರ್ತನೆ – ಇಂಥ ಅನೇಕ ವಿಷಯಗಳಿಗೆ ಸಂಬಂಧಿಸಿದ ಪ್ರಯೋಗಗಳನ್ನು ಶೂನ್ಯ ಗುರುತ್ವದಲ್ಲಿ ದೀರ್ಘಕಾಲ ನಡೆಸಲು ವ್ಯೋಮ ನಿಲ್ದಾಣದಷ್ಟು ಅನುಕೂಲವಾದ ತಾಣ ಬೇರೆ ಇಲ್ಲ.

ಇದಕ್ಕಿಂತಲೂ ಮುಖ್ಯವಾದ ಮತ್ತೊಂದು ಉದ್ದೇಶವಿದೆ. ಅದೆಂದರೆ ಚಂದ್ರ - ಮಂಗಳಗಳಲ್ಲಿ ಸಿಗಬಹುದಾದ ಸಂಪನ್ಮೂಲಗಳು ಹಾಗೂ ಅವನ್ನು ಪಡೆಯುವ ಮೊದಲು ನಡೆಸಬೇಕಾದ ತಯಾರಿ. ಭೂಮಿಗೆ ಸಮೀಪವಿರುವ ಈ ಆಕಾಶಕಾಯಗಳಲ್ಲಿ ದಿನ ಕಳೆಯುವ ಮೊದಲು ಭೂಮಿಗೆ ಸಮೀಪದ ಸೂಕ್ಷ್ಮ ಗುರುತ್ವದಲ್ಲಿ ವಾಸಿಸಿ ಅನುಭವ ಮತ್ತು ತಿಳಿವಳಿಕೆಗಳನ್ನು ಗಳಿಸುವುದು ಇಂಥ ತಯಾರಿಯ ಮೊದಲ ಮುಖ್ಯ ಹಂತ. ಆ ದೃಷ್ಟಿಯಿಂದಲೇ ವ್ಯೋಮ ನಿಲ್ದಾಣದ ಕಟ್ಟಣೆಗೆ ಹೆಚ್ಚಿನ ಮಹತ್ವ ಬರುತ್ತದೆ.

೨೦೧೫ನೇ ವರ್ಷದ ತನಕ ವ್ಯೋಮ ನಿಲ್ದಾಣ ಕಾರ್ಯೋನ್ಮುಖವಾಗುವ ಯೋಜನೆ ಹಿಂದೆ ಇತ್ತು. ಆದರೆ ಅದರ ಕೆಲಸವನ್ನು ೨೦೨೦ರ ತನಕವೂ ಮುಂದುವರಿಸುವ ಬಗ್ಗೆ ಈಗ ಯೋಚಿಸುತ್ತಿದ್ದಾರೆ. ಈ ಮಧ್ಯೆ ಬ್ರೆಜಿಲ್, ಭಾರತ ಮತ್ತು ದಕ್ಷಿಣ ಕೊರಿಯಗಳೂ ಅದರಲ್ಲಿ ಭಾಗವಹಿಸಲು ಆಸಕ್ತಿ ತೋರಿಸಿವೆ. ಒಂದೇ ನಿಲ್ದಾಣವನ್ನು ಹಲವು ದೇಶಗಳು ಕಟ್ಟಿ ಬಳಸುವಾಗ ಭಿನ್ನಾಭಿಪ್ರಾಯ ತಲೆದೋರದಂತೆ ಕಾನೂನು ಸಂಬಂಧವಾದ ಅಂಶಗಳನ್ನು ಪರಿಗಣಿಸಿ ಸರಕಾರಗಳೊಳಗೆ ಯುಕ್ತ ಒಪ್ಪಂದಗಳಿರುವುದು ಮುಖ್ಯ. ಹಾಗೆಯೇ ವ್ಯೋಮ ನಿಲ್ದಾಣದಿಂದ ಲಭಿಸುವ ಅನುಕೂಲಕರ ಅಂಶಗಳೂ ಭೂಮಿಯ ಎಲ್ಲರಿಗೂ ದಕ್ಕುವುದು ಒಟ್ಟು ಕ್ಷೇಮಕ್ಕೆ ಅಗತ್ಯ. ನಿಲ್ದಾಣದ ಕೆಲಸದಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವ ರಷ್ಯ ಮತ್ತು ಅಮೆರಿಕಗಳು ಗಮನ ಕೊಟ್ಟರಷ್ಟೇ ಈ ಮುಖ್ಯ ಅಗತ್ಯಗಳು ಪೂರೈಕೆಯಾದಾವು.

**ಅಡ್ಯನಡ್ಕ ಕೃಷ್ಣ ಭಟ್**
'ಸಾರಸ', ನಂ. ೨೫೦೧, ೨ನೇ ಕ್ರಾಸ್, ವಿಜಯನಗರ ೨ನೇ ಹಂತ
ಮೈಸೂರು - ೫೭೦ ೦೧೭

# ಡಾ|| ಎಸ್. ಎಲ್. ಭೈರಪ್ಪನವರ ಕಾದಂಬರಿಗಳೊಡನೆ

# ಧರ್ಮ-ಕರ್ಮ ಜಿಜ್ಞಾಸೆ

**ಪ್ರೊ || ಸಿ. ಎನ್. ರಾಮಚಂದ್ರನ್**




ಲೇಖಕರು : **ಕೆ. ಎಲ್. ಗೋಪಾಲಕೃಷ್ಣಯ್ಯ**
ಪ್ರಕಾಶಕರು : ನವಕರ್ನಾಟಕ ಪ್ರಕಾಶನ, ಬೆಂಗಳೂರು
ಪುಟಗಳು : ೨೧೬ ಬೆಲೆ ₹: ೧೨೫

**ಡಾ||** ಎಸ್. ಎಲ್. ಭೈರಪ್ಪನವರು ಇಂದೂ ಕ್ರಿಯಾಶೀಲರಾಗಿರುವ ಕನ್ನಡದ ಹಿರಿಯ ಕಾದಂಬರಿಕಾರರಲ್ಲಿ ಒಬ್ಬರು; ಕರ್ನಾಟಕದಲ್ಲಿಯೇ ಅಲ್ಲದೆ ಅನುವಾದಗಳ ಮೂಲಕ ಭಾರತಾದ್ಯಂತ ಅತಿ ಹೆಚ್ಚು ಓದುಗರನ್ನು ಪಡೆದಿರುವ ಕಾದಂಬರಿಕಾರರು; ೯೬೦ ಪುಟಗಳಷ್ಟು ದೀರ್ಘವಾಗಿರುವ **ತಂತುವೂ** ಸೇರಿದಂತೆ ಇದುವರೆಗೆ ೨೨ ಕಾದಂಬರಿಗಳನ್ನು ಬರೆದಿರುವವರು; ಮತ್ತು, ಪರಸ್ಪರ ಎರಡು ತುದಿಗಳಲ್ಲಿರುವ – ಮೆಚ್ಚಿ ಆರಾಧಿಸುವವರು ಮತ್ತು ಸಂಪೂರ್ಣವಾಗಿ ಅಲಕ್ಷಿಸುವವರು – ಎರಡು ಭಿನ್ನ ಓದುಗ ವರ್ಗಗಳನ್ನು ಸಂಪಾದಿಸಿರುವವರು.

ಇವರ ಎಲ್ಲಾ ಕಾದಂಬರಿಗಳನ್ನು ಸ್ಥೂಲವಾಗಿ ಎರಡು ವರ್ಗಗಳಲ್ಲಿ ಗುರುತಿಸಬಹುದು : (ಅ) ***ಗೃಹಭಂಗ, ಪರ್ವ, ನೆಲೆ, ಅಂಚು, ಸಾಕ್ಷಿ , ನಿರಾಕರಣೆ,*** ಇತ್ಯಾದಿ ಕಾದಂಬರಿಗಳು. ಇವುಗಳ ವೈಶಿಷ್ಟ್ಯವೆಂದರೆ ಇವುಗಳಲ್ಲಿ ಸಿದ್ಧ ವೈಚಾರಿಕತೆ ಇಲ್ಲ; ಅದರ ಬದಲಿಗೆ ಮಾನವ ಸಂಬಂಧಗಳ ಸೂಕ್ಷ್ಮ ಹಾಗೂ ಆಳವಾದ ವಿಶ್ಲೇಷಣೆಯಿದೆ ಮತ್ತು ಯಶಸ್ವಿ ಹಾಗೂ ವ್ಯಾಪಕ ಸಂವಿಧಾನವಿದೆ. ***ಧರ್ಮಶ್ರೀ, ವಂಶವೃಕ್ಷ, ತಬ್ಬಲಿಯು ನೀನಾದೆ ಮಗನೆ, ಸಾರ್ಥ, ಆವರಣ, ಕವಲು*** ಇತ್ಯಾದಿ ಕಾದಂಬರಿಗಳು ಎರಡನೆಯ ವರ್ಗದಲ್ಲಿ ಬರುತ್ತವೆ. ಈ ವರ್ಗದ ಕಾದಂಬರಿಗಳನ್ನು ಹಿಂದೂ-ಧರ್ಮ-ಕೇಂದ್ರಿತ ಬದ್ಧ ವೈಚಾರಿಕತೆ ಕಟ್ಟಿಕೊಟ್ಟಿದೆ; ಮತ್ತು ಹೆಚ್ಚಿನ ಕಾದಂಬರಿಗಳಲ್ಲಿ ಪರಂಪರಾಗತ ಹಿಂದು ಧರ್ಮವನ್ನು ಇಸ್ಲಾಂ, ಕ್ರಿಶ್ಚಿಯನ್, ಬೌದ್ಧ, ಇತ್ಯಾದಿ ಇತರ ಧರ್ಮಗಳೊಡನೆ ಹೋಲಿಸಿ, ಹಿಂದು ಧರ್ಮದ ಹಿರಿಮೆಯನ್ನು ಎತ್ತಿ ಹಿಡಿಯುವ ಪ್ರಯತ್ನವಿದೆ; ಪಾತ್ರಗಳು ಕಾದಂಬರಿಕಾರನ ಈ ಪ್ರಯತ್ನಕ್ಕೆ ತಕ್ಕಂತೆ ವರ್ತಿಸುವ ಕಠಪುತಲಿಗಳಾಗುತ್ತವೆ.

ತಮ್ಮ ವಿಮರ್ಶಾತ್ಮಕ ಕೃತಿಯಲ್ಲಿ ಪ್ರೊ || ಗೋಪಾಲಕೃಷ್ಣಯ್ಯನವರು ಆರಿಸಿರುವ ಐದೂ ಕಾದಂಬರಿಗಳು ***(ಧರ್ಮಶ್ರೀ, ವಂಶವೃಕ್ಷ , ನಾಯಿ ನೆರಳು, ದಾಟು, ತಬ್ಬಲಿಯು ನೀನಾದೆ ಮಗನೆ)*** ಎರಡನೆಯ ವರ್ಗಕ್ಕೆ ಸೇರುತ್ತವೆ. ***ಧರ್ಮಶ್ರೀ, ತಬ್ಬಲಿಯು ನೀನಾದೆ ಮಗನೆ,*** ಈ ಎರಡು ಕಾದಂಬರಿಗಳು ಕ್ರಿಶ್ಚಿಯನ್ ಧರ್ಮದ ಎದುರು ಹಿಂದು ಧರ್ಮವನ್ನು ಎತ್ತಿಹಿಡಿಯುತ್ತದೆ; ***ವಂಶವೃಕ್ಷ*** ಕಾದಂಬರಿಯು ಪರಂಪರಾಗತ ಹಿಂದು ಸಮಾಜದ ಆಚರಣೆ-ನಂಬಿಕೆಗಳಂತೆ ವಿಧವಾ ವಿವಾಹವನ್ನು ಅಮಾನ್ಯ ಮಾಡುತ್ತಾ, ವಂಶಪಾವಿತ್ರ್ಯವನ್ನು ಎತ್ತಿ ಹಿಡಿಯುತ್ತವೆ; ***ನಾಯಿ ನೆರಳು*** ಹಿಂದು ಧರ್ಮದ ಅಡಿಗಲ್ಲಾದ ಕರ್ಮ ಸಿದ್ಧಾಂತವನ್ನು ಕಥೆಯ ಮೂಲಕ ನಿದರ್ಶಿಸಿದರೆ, ***ದಾಟು*** ಜಾತಿಪದ್ಧತಿಯನ್ನು ವಿಶ್ಲೇಷಿಸುತ್ತದೆ.

ಈ ಸಂದರ್ಭದಲ್ಲಿ, ತಮ್ಮ ವಿಮರ್ಶನ ಚೌಕಟ್ಟನ್ನು ಗೋಪಾಲಕೃಷ್ಣಯ್ಯನವರು ತಮ್ಮ 'ಪ್ರಸ್ತಾವನೆ'ಯಲ್ಲಿ ಹೀಗೆ ವಿವರಿಸುತ್ತಾರೆ : ''ಲೋಕದಲ್ಲಿ ಧರ್ಮಾಧರ್ಮಗಳ ತೀರ್ಮಾನವು ಆಯಾ ಕಾಲದ ಸಾಮಾಜಿಕ ಸ್ಥಿತಿಗತಿಗಳನ್ನೂ, ಜನರನ್ನು ನಿಯಂತ್ರಿಸುವ ಅಧಿಕಾರಬಲ ಉಳ್ಳವರ ಮನೋಧರ್ಮವನ್ನೂ ಅವಲಂಬಿಸಿರುತ್ತದೆ ಎಂದು ಮಾತ್ರ ಹೇಳಬಹುದು. ಸಾಮಾಜಿಕ ವ್ಯವಸ್ಥೆಗಳೂ, ಜನರ ಸ್ಥಿತಿಗತಿಗಳೂ ಬದಲಾದಂತೆ 'ಧರ್ಮ' ಎನ್ನುವ ಪರಿಕಲ್ಪನೆಯೂ ಕೂಡ ಬದಲಾಗುತ್ತದೆ. ಇಂಥ ಬದಲಾವಣೆಯನ್ನು ಒಪ್ಪದವರು ಮಾತ್ರ ತಾವು ನಂಬಿದ್ದು, ತಾವು ಅನುಸರಿಸಿಕೊಂಡು ಬರುತ್ತಿರುವುದು ಮಾತ್ರ ಧರ್ಮ ಎಂದು ವಾದಿಸಬಹುದು ಅಷ್ಟೇ.'' ಈ ನಿಲುವು ಸರಿಸುಮಾರು ಫೂಕೋನ 'ಡಿಸ್ಕೋರ್ಸ್' ಪರಿಕಲ್ಪನೆಯನ್ನು ಹೋಲುತ್ತದೆ. ಈ ಚೌಕಟ್ಟಿನಲ್ಲಿ ಲೇಖಕರು ಮೇಲೆ ಹೇಳಿದ ಐದು ಕಾದಂಬರಿಗಳನ್ನು ವ್ಯಾಖ್ಯಾನಿಸುತ್ತಾರೆ. ಇವರ ವಿಮರ್ಶಾಕ್ರಮದ ನಿದರ್ಶನಗಳಾಗಿ, ಇವರು ಮಾಡುವ ***ವಂಶವೃಕ್ಷ*** ಮತ್ತು ***ಧರ್ಮಶ್ರೀ*** ಈ ಎರಡು ಕಾದಂಬರಿಗಳ ವಿಮರ್ಶೆಯನ್ನು ನೋಡಬಹುದು.

***ವಂಶವೃಕ್ಷ***ದ ಕೇಂದ್ರ ಕಾಳಜಿಯೆಂದರೆ ವಿಧವಾ ವಿವಾಹ ಎಂಬುದನ್ನು ಗೋಪಾಲಕೃಷ್ಣಯ್ಯನವರು ಗುರುತಿಸಿ, ಅನಂತರ ಕಾತ್ಯಾಯನಿ ಕೇಳುವ ''ಹೆಂಗಸು ಮರು ಮದುವೆ ಯಾಕಾಗಬಾರದು ?'' ಎಂಬ ಪ್ರಶ್ನೆಗೆ ಶ್ರೋತ್ರೀಯವರು ಕೊಡುವ ಉತ್ತರವನ್ನು ದಾಖಲಿಸುತ್ತಾರೆ : ''ಈಗ ಸಮಾಜದ ನಡವಳಿಕೆ ಕುರಿತಾಗಲಿ ಜಗತ್ತಿನ ನಡವಳಿಕೆ ಕುರಿತಾಗಲಿ ಯಾವ ತರ್ಕವೂ ಬೇಡ. ಇದು ನಿನ್ನೊಬ್ಬಳ ಪ್ರಶ್ನೆ.'' ಈ ಉತ್ತರವನ್ನು ವಿಶ್ಲೇಷಿಸುತ್ತಾ, ಗೋಪಾಲಕೃಷ್ಣಯ್ಯನವರು ಈ ಪ್ರಶ್ನೆಗಳನ್ನು ಎತ್ತುತ್ತಾರೆ : ''ಇದು ವ್ಯಕ್ತಿಯ ಪ್ರಶ್ನೆ ಹೇಗಾಗುತ್ತದೆ ? ಸಮಾಜದ ಪ್ರಶ್ನೆ ಬೇರೆ – ವ್ಯಕ್ತಿಯ ಪ್ರಶ್ನೆ ಬೇರೆ ಎಂದು ಪೃಥಕ್ಕರಿಸಲು ಸಾಧ್ಯವೆ ? ಸತ್ಯವೇನೆಂದರೆ, ಕಾತ್ಯಾಯನಿಯ ಪ್ರಶ್ನೆಗೆ ಶ್ರೋತ್ರೀಯವರ ಬಳಿಯಲ್ಲಾಗಲೀ ವೈದಿಕ ಸ್ಮೃತಿಗಳಲ್ಲಾಗಲೀ ಉತ್ತರವಿಲ್ಲ.'' ಹೀಗೆ, ಪ್ರತಿಯೊಂದು ಕೃತಿಯ ಮುಖ್ಯ ಘಟನೆಗಳ ಹಿಂದಿನ ವೈಚಾರಿಕತೆಯನ್ನು ಗೋಪಾಲಕೃಷ್ಣಯ್ಯ ಗುರುತಿಸಿ, ಅನಂತರ ಅದು ಹೇಗೆ ಸತ್ಯದೂರ ಎಂಬುದನ್ನು ತೀರ್ಮಾನಿಸುತ್ತಾರೆ. ಪರಿಣಾಮತಃ, ಹೆಚ್ಚಿನ ಸಂದರ್ಭಗಳಲ್ಲಿ ಅವರ ತೀರ್ಮಾನಗಳು ಸ್ವೀಕಾರಾರ್ಹವಾಗಿರುತ್ತವೆ.

***ಧರ್ಮಶ್ರೀ*** ಕಾದಂಬರಿಯ ಒಂದು ಸಂದರ್ಭದಲ್ಲಿ, ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾಗಲು ಮತಾಂತರಗೊಳ್ಳುವ ಇದೇನೂ (ಅಪರೂಪವಲ್ಲ) ಸತ್ಯ ತನ್ನ ಪತ್ನಿಯೊಡನೆ ಬೇಲೂರು-ಹಳೇಬೀಡುಗಳಿಗೆ ಹೋಗುತ್ತಾನೆ. ಅಲ್ಲಿಯ ಅದ್ಭುತ ಶಿಲ್ಪಕಲೆಯ ಬಗ್ಗೆ ಮಾತನಾಡುತ್ತಾ, ಅತ್ಯಂತ ಭಾವುಕನಾಗಿ, ತನ್ನ ಪತ್ನಿಗೆ ಹೀಗೆ ಹೇಳುತ್ತಾನೆ : ''ನನಗೆ ಆ ಧರ್ಮ-ಸಂಸ್ಕೃತಿಯ ಸಂಸ್ಕಾರವಿದೆ. ನೀನೂ (ಪೂರ್ವ ಹಿಂದುವಾದ್ದರಿಂದ)



# ಜಾಲಿ

ಊರೆಲ್ಲ ಗೂಡು ಕಟ್ಟಿದ ಕಾಡು
ಒಳಗೆ ಜೀವ ಹಕ್ಕಿಯ ಹಾಡು
ರೆಕ್ಕೆಗಳೆಲ್ಲಿ ನಾಡುಗಳ ಈ ಮರಕೆ ?
ತೆರೆದ ಆಕಾಶಕೆ
ಮೈಯ್ಯೆಲ್ಲ ಕೈಯ್ಯಾಗಿ ಚಾಚಿದ ಬೊಗಸೆ
ಬಿಸಿಲೋ ಮಳೆಯೋ
ಬೆಳದಿಂಗಳೋ
ನಿತ್ಯ ಆಪೋಶನ, ಬಂದುದೆಲ್ಲ
ಬದುಕಿಗೆ

ಮರದಲಿ ಅರಳಿದ
ಆಸೆಗಳಿಗೆಷ್ಟು ಲೆಕ್ಕ ?
ಕಡಿದಂತೆಲ್ಲ ಚಿಗುರುವ ರೆಂಬೆ
ಹಣ್ಣಾಗಿ ಎಲೆ ಉದುರಿದಂತೆಲ್ಲ
ಹಸಿರಾಗಿ ನಿಲ್ಲುವ ಚಿಗುರು

ಒಣಗಿದಂತೆಲ್ಲ ಮರ
ಮೊಳಕೆಯೊಡೆಯುವ ಬೀಜ

ಮಣ್ಣ ಕಣ ಕಣದೊಳಗೆ
ಮಿಡಿವ ಜೀವದ ಸದ್ದು
ಹಳೆಯದೆಲ್ಲವ ಹೀರಿ
ಮೀರಿ ನಿಲ್ಲುವ ತುಯಿತ
ಒಳಗೊಳಗೇ
ಹರಿವ ಜೀವಸೆಲೆ
ಮುಗಿಲೆತ್ತರದ ನಿರೀಕ್ಷೆಗೆ
ಅಳೆಯಲಾಗದ ಆಳ

ಅಗೆಯಲಾಗದು ನೆಲವ,
ಅಗೆದಲ್ಲೆಲ್ಲ ಬರಿ ಬೇರುಗಳ ಜಾಲ !

**ಗಣೇಶ ಹೊಸ್ಮನೆ**
ಜಾನ್ಮನೆ - ೫೮೧ ೩೧೫, ಶಿರಸಿ, ಉತ್ತರ ಕನ್ನಡ.

ಹಿಂದು ಸಂಸ್ಕೃತಿಯ ಬಗೆಗೆ ಕ್ರಿಯಾತ್ಮಕ ಶ್ರದ್ಧೆ ಬೆಳೆಸಿಕೊಂಡಿದ್ದೀಯ. ಆದರೆ, ನಮ್ಮ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳಿಗೆ ಬೇಲೂರು ಕೇವಲ ಪ್ರೇಕ್ಷಣೀಯ ಸ್ಥಳವಾಗಿ ಉಳಿದೀತು.'' (**ಆವರಣ** ಕಾದಂಬರಿಯಲ್ಲಿಯೂ ಇಂತಹುದೇ ಒಂದು ಸಂದರ್ಭ – ಹಂಪಿಯ ಬಗ್ಗೆ– ಬರುತ್ತದೆ.) ಈ ಸಂದರ್ಭದಲ್ಲಿ ಸತ್ಯನು ಎತ್ತುವ 'ವಾರಸುದಾರಿಕೆ' ಪ್ರಶ್ನೆಯೇ ಅರ್ಥವಿಲ್ಲದ್ದೆಂದು ಗೋಪಾಲಕೃಷ್ಣಯ್ಯ ವಾದಿಸುತ್ತಾ ಹೀಗೆ ಹೇಳುತ್ತಾರೆ: ''ಇಲ್ಲಿನ ಸತ್ಯನಾರಾಯಣ ಅಥವಾ ಭೈರಪ್ಪನವರಲ್ಲಿ ಹಿಂದು ಧರ್ಮ, ಹಿಂದು ಸಂಸ್ಕೃತಿಗಳ ಬಗೆಗೆ ಭಾವಜಾಗೃತಿ ಉಂಟಾಗಲು ಕಾರಣವಾದ ಆನಂದಕುಮಾರ ಸ್ವಾಮಿಗಳ (ಅವರ ಗ್ರಂಥಗಳ) ನೆನಪಾಗದಿರುವುದು ಆಶ್ಚರ್ಯದ ಸಂಗತಿ. ...ಆನಂದಕುಮಾರ ಸ್ವಾಮಿಯವರು ತಂದೆಯ ಕಡೆಯಿಂದಾಗಲಿ ತಾಯಿಯ ಕಡೆಯಿಂದಾಗಲಿ ಹಿಂದು ಧರ್ಮಕ್ಕೆ ಸೇರಿದವರಲ್ಲ. ಈ ರೀತಿ, ಒಂದು ಧರ್ಮವು ಸೃಷ್ಟಿಸಿದ ಕಲಾಕೃತಿಗಳನ್ನು ಇನ್ನೊಂದು ಧರ್ಮದವರು ಅರ್ಥಮಾಡಿಕೊಳ್ಳಲಾರರು ಎಂಬ ವಾದವನ್ನು ಸತಾರ್ಕಿಕವಾಗಿ ನಿರಾಕರಿಸಿ, ಕೊನೆಗೆ ಗೋಪಾಲಕೃಷ್ಣಯ್ಯ ಹೀಗೆ ಅರ್ಥಪೂರ್ಣವಾದ ಒಂದು ಮಾತನ್ನು ಹೇಳುತ್ತಾರೆ: ''ಭಾರತದ ಸಂಸ್ಕೃತಿಯ ವಿಕಾಸಕ್ಕೆ ಹಿಂದೂ ಧರ್ಮವು ಮಾತ್ರವಲ್ಲದೆ ಬೌದ್ಧ, ಜೈನ ಧರ್ಮಗಳೂ ಅನ್ಯದೇಶೀಯವೆನ್ನುವ ಇಸ್ಲಾಂ (ಪರ್ಷಿಯನ್) ಮತ್ತು ಕ್ರೈಸ್ತ ಧರ್ಮಗಳೂ ತಮ್ಮದೇ ಆದ ಕಾಣಿಕೆ ಸಲ್ಲಿಸಿವೆಯೆಂಬುದನ್ನು ಮರೆಯಬಾರದು.'' ಈ ನಿಲುವು ಇಂದು ತುಂಬ ಪ್ರಸ್ತುತವಷ್ಟೇ ಅಲ್ಲದೆ ಒಟ್ಟಾರೆ ಭಾರತೀಯ ಸಮಾಜಕ್ಕೂ ಆರೋಗ್ಯಕರವಾದದ್ದು.

ಈ ಸಂದರ್ಭದಲ್ಲಿ ಗೋಪಾಲಕೃಷ್ಣಯ್ಯನವರು ಹಿಂದು ಸಂಸ್ಕೃತಿಯ ಸ್ವರೂಪದ ಬಗ್ಗೆ ಮತ್ತೂ ಒಂದು ಬಹು ಮುಖ್ಯವಾದ ಸಂಗತಿಯನ್ನು ನಮ್ಮ ಗಮನಕ್ಕೆ ತರುತ್ತಾರೆ; ಅದೇಂದರೆ, 'ಹಿಂದು ಸಂಸ್ಕೃತಿ' ಎಂದರೆ ಕೇವಲ ಮೇಲ್ವರ್ಗದ ಸಂಸ್ಕೃತಿಯಲ್ಲ ಎಂಬುದು. ''ನಾಗರಿಕ ಪರಿಸರದಿಂದ ದೂರವೇ ಉಳಿದಿರುವ ಗ್ರಾಮೀಣ ಪ್ರದೇಶಗಳ ಅನಕ್ಷರಸ್ಥ ಕುಲ-ಬಣಗಳ ಆಚರಣೆಗಳು, ನಂಬಿಕೆಗಳು ಕೂಡ (ಹಿಂದು) ಸಂಸ್ಕೃತಿಯ ವ್ಯಾಪ್ತಿಯಲ್ಲಿ ಬರುತ್ತವೆ. ತಾತ್ವಿಕ ರೂಪದ, ಗ್ರಂಥಸ್ಥ ಮತಧರ್ಮಗಳು ಅಸ್ತಿತ್ವಕ್ಕೆ ಬರುವ ಮುಂಚಿನಿಂದಲೂ ಹತ್ತು ಹಲವು ಬಗೆಯ ಜಾನಪದ ಸಂಸ್ಕೃತಿಗಳು ರೂಢಿಯಲ್ಲಿವೆ. ಇವು ಒಂದು ರೀತಿಯಲ್ಲಿ ಮತಧರ್ಮ-ನಿರಪೇಕ್ಷ ಸಂಸ್ಕೃತಿಗಳು.''

ಹೀಗೆ, ಗೋಪಾಲಕೃಷ್ಣಯ್ಯನವರ ಕೃತಿ ಕೇವಲ ಭೈರಪ್ಪನವರ ಐದು ಕಾದಂಬರಿಗಳ ಸಮರ್ಥ ವಿಮರ್ಶೆಯೇ ಅಲ್ಲದೆ, ಹಿಂದು ಧರ್ಮ, ಸಂಸ್ಕೃತಿ, ನಮ್ಮ ಸಮಾಜದ ಪರಂಪರಾಗತ ಆಚರಣೆಗಳು ಹಾಗೂ ನಂಬಿಕೆಗಳು, ವಿಗ್ರಹಾರಾಧನೆ, ಇತ್ಯಾದಿ ಹತ್ತು ಹಲವು ವಿಷಯಗಳ ಬಗ್ಗೆ ಅರ್ಥಪೂರ್ಣ ಒಳನೋಟಗಳನ್ನು ಕೊಡುತ್ತದೆ. ಸತತ ಅಧ್ಯಯನ ಹಾಗೂ ಬಹುಶ್ರುತತೆ ಇವುಗಳನ್ನು ಬೇಡುವ ಇಂತಹ ವಿಮರ್ಶನ ಕೃತಿಯನ್ನು ಬರೆದಿರುವ ಗೋಪಾಲಕೃಷ್ಣಯ್ಯನವರು ಅಭಿನಂದನೀಯರು.

ಕೊನೆಯದಾಗಿ, ಈ ಕೃತಿಯ ಮಿತಿಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳಿ ಈ ಲೇಖನವನ್ನು ಮುಗಿಸುತ್ತೇನೆ. (೧) ಗೋಪಾಲಕೃಷ್ಣಯ್ಯನವರು ಕಾದಂಬರಿಯೊಂದರ ವಿಮರ್ಶೆ-ವ್ಯಾಖ್ಯಾನಗಳಿಗೆ ತೊಡಗುವ ಮೊದಲು, ಆ ಕಾದಂಬರಿಯ ಕಥಾ ಸಾರಾಂಶವನ್ನು ತುಂಬ ದೀರ್ಘವಾಗಿ (೨೩/೨೭/೨೯ ...ಪುಟಗಳಷ್ಟು) ಕೊಡುತ್ತಾರೆ; ವಿಮರ್ಶನ ಕೃತಿಯಲ್ಲಿ ಇಂತಹ ದೀರ್ಘ ಕಥಾ ಸಾರಾಂಶಗಳು, ನನ್ನ ದೃಷ್ಟಿಯಲ್ಲಿ, ಅಪೇಕ್ಷಣೀಯವಲ್ಲ. ಅವರು ಒಂದೆರಡು ಪುಟಗಳಲ್ಲಿ ಕಥೆಯ ದಿಕ್ಕನ್ನು ಗುರುತಿಸಿ, ಅನಂತರ, ತಮ್ಮ ಹೇಳಿಕೆಗಳ ಸಮರ್ಥನೆಗಾಗಿ, ಕೆಲವು ಘಟನೆಗಳನ್ನು ಸಂಕ್ಷಿಪ್ತವಾಗಿ ನಿರೂಪಿಸಬಹುದು. (೨) ಭೈರಪ್ಪನವರ ೨೨ ಕೃತಿಗಳಲ್ಲಿ ಗೋಪಾಲಕೃಷ್ಣಯ್ಯನವರು ಆಯ್ದುಕೊಂಡಿರುವ ಐದು ಕೃತಿಗಳು ಪ್ರಾತಿನಿಧಿಕವಾಗುವುದಿಲ್ಲ; ಭೈರಪ್ಪನವರ **ಸಾಕ್ಷಿ**, **ಪರ್ವ**, **ತಂತು**, **ಸಾರ್ಥ**, ಇತ್ಯಾದಿ ಕೃತಿಗಳನ್ನೂ ಇವರು ವಿಮರ್ಶೆಗೆ ಒಡ್ಡಿ, ಅವುಗಳಲ್ಲಿ ಇರುವ/ಇಲ್ಲದಿರುವ 'ಹಿಂದು ವೈಚಾರಿಕತೆ'ಯ ಬಗ್ಗೆ ದೀರ್ಘವಾಗಿ ಚರ್ಚೆ ಮಾಡಿದರೆ, ಅದು ಓದುಗರಿಗೆ ಇನ್ನೂ ಹೆಚ್ಚು ಉಪಯುಕ್ತವಾಗಬಹುದು.

(ಕೃತಿಯ ಅನಾವರಣ ಸಂದರ್ಭದಲ್ಲಿ ಮಾಡಿದ ಭಾಷಣದ ಸಂಕ್ಷಿಪ್ತ ಲಿಖಿತ ರೂಪ.)

**ಪ್ರೊ|| ಸಿ. ಎನ್. ರಾಮಚಂದ್ರನ್**
ಅಪಾರ್ಟ್‌ಮೆಂಟ್ ನಂ. ೧೦೦೨, 'ಶೋಭಾ ಟ್ಯೂಲಿಪ್'
೨೪ನೇ ಮುಖ್ಯರಸ್ತೆ, ೬ನೇ ಫೇಸ್, ಜೆ. ಪಿ. ನಗರ
ಬೆಂಗಳೂರು - ೫೬೦ ೦೭೮

# ೨೦೧೧ ಅಂತರರಾಷ್ಟ್ರೀಯ ರಸಾಯನಶಾಸ್ತ್ರ ವರ್ಷ

ಪ್ರೊ॥ ಎಮ್. ಆರ್. ನಾಗರಾಜು



ಹರಿಯುವ ನೀರಿಗೆ ಎರಡು ಬಗೆಯ ವಿರೋಧಗಳಿವೆ. ನದಿಯ ನೀರಿನ ಪಾತ್ರ ಒಡ್ಡುವ ಘರ್ಷಣೆಯ ಬಾಹ್ಯ ವಿರೋಧ ಹಾಗೂ ನೀರು ತನ್ನ ಚಲನೆಗೆ ತಾನೇ ಉಂಟುಮಾಡುವ ಅಡ್ಡಿಯ ವಿರೋಧ. ಇದನ್ನು ಸ್ನಿಗ್ಧತೆ ಎನ್ನಲಾಗುತ್ತದೆ.

ರಸಾಯನಶಾಸ್ತ್ರದ ಅಧ್ಯಯನ ನಿಸರ್ಗದ ಸಾಮಗ್ರಿಗಳನ್ನು ಮಾನವ ಅಗತ್ಯಗಳಿಗೆ ಮಣಿಸುವಲ್ಲಿ ವಿಶೇಷವಾಗಿ ಶ್ರಮಿಸಿದೆ, ನಿಸರ್ಗದ ಸಾಮಗ್ರಿಗಳನ್ನು ಕುರಿತಾದ ನಮ್ಮ ಧೋರಣೆಯನ್ನು ಬದಲಿಸುವ ವಿಚಾರಗಳನ್ನು ರೂಪಿಸಿದೆ. ನಿಸರ್ಗದ ರಾಚನಿಕ ಚಿತ್ರಣ ಕುರಿತು ನಮ್ಮ ಪರಿಜ್ಞಾನವನ್ನು ಪರಿಷ್ಕರಿಸುವಲ್ಲಿ ರಸಾಯನಶಾಸ್ತ್ರದ ಪಾತ್ರವಿದೆ. ಈ ಮೂರು ಅಂಶಗಳ ಕುರಿತಂತೆ ಮಾನವ ಸಮಾಜ ಹಾಗೂ ನಿಸರ್ಗಗಳು ಅನುಕ್ರಮವಾಗಿ ಬಾಹ್ಯ ಹಾಗೂ ಆಂತರಿಕ ಅಡ್ಡಿಗಳನ್ನು ಉಂಟುಮಾಡುತ್ತಲೇ ಬಂದಿವೆ. ಇದನ್ನು ಸೋದಾಹರಣವಾಗಿ ಪರಿಶೀಲಿಸೋಣ.

ಲೋಹಗಳು ನಿಸರ್ಗದಲ್ಲಿ ಸಂಯುಕ್ತ ರೂಪದಲ್ಲಿ ಲಭ್ಯ. ಆ ಸಂಯುಕ್ತಗಳನ್ನು ಮಣ್ಣಿನಿಂದ ಬೇರ್ಪಡಿಸಿ ಲೋಹ ತಯಾರಿಸುವ ರಾಸಾಯನಿಕ ಕಲೆ – ಲೋಹವಿದ್ಯೆ ಅರ್ಥಾತ್ ಮೆಟಲರ್ಜಿ. ಲೋಹ ತಯಾರಿಕೆಯಾದರೆ ರಸಾಯನಶಾಸ್ತ್ರದ ಹೊಣೆ ಮುಗಿಯಲಿಲ್ಲ, ರೂಪಿಸಿದ ಲೋಹ ವಾಯುಮಂಡಲದ ಘಟಕಗಳು, ಹಾಗೂ ನೀರಿನ ಪ್ರಭಾವಕ್ಕೊಳಗಾಗಿ ಮತ್ತೆ ಸಂಯುಕ್ತವಾಗುವ ಸಾಧ್ಯತೆ ಇದೆ. ಇದು ಲೋಹ ನಶಿಸಿಕೆ (ಕನಕ ಸಿಂಹಾಸನದ ಮೇಲಿನ ಶುನಕ, ಹೊಲಸನ್ನು ಕಂಡೊಡನೆ ಹಿಂತಿರುಗುವಂತೆ – ಎನ್ನುತ್ತೀರಾ !). ಆಗ ಎರಡು ತೊಂದರೆಗಳಿವೆ :

೧. ಲೋಹದ ವಸ್ತು ತನ್ನ ಹೊಳಪನ್ನೂ ಅಸ್ತಿತ್ವನ್ನೂ ಕಳೆದುಕೊಳ್ಳುವುದು.

೨. ಒಂದೆಡೆ ಭೂಮಿಯಲ್ಲಿ ಸಂಯುಕ್ತರೂಪದಲ್ಲಿ ಲಭ್ಯವಿದ್ದ ಲೋಹ ಈಗ ಸಂಯುಕ್ತವಾದ ಮೇಲೆ ಭೂಮಿಯನ್ನು ತಲುಪಿ ಮರಳಿ ಪಡೆಯಲಾಗದ ಸ್ಥಿತಿ ಉಂಟಾಗುವುದು. ಇದರಿಂದ ಲೋಹದ ನಿರಂತರ ಬೇಡಿಕೆ. ಲೋಹದ ಆಕರದ ಬರಿದಾಗುವಿಕೆ ಉಂಟಾಗುವುದು. ಈಗಾಗಲೇ ತಾಮ್ರದ ಸಂಯುಕ್ತಗಳ ನಿಕ್ಷೇಪ ಹೆಚ್ಚು - ಕಡಿಮೆ ಬರಿದಾಗಿದೆ ! ನಿಸರ್ಗ ಅನಂತ ಆಕರವಲ್ಲ.

ಹಣ ತೆತ್ತು ಲೋಹದ ಸಂಯುಕ್ತಗಳನ್ನು ಪಡೆಯುವ ಗ್ರಾಹಕರಿಗೆ ನಿಸರ್ಗ ಒಡ್ಡುವ ಈ ಪ್ರತಿರೋಧ ತಿಳಿಯದು ಎಂದಲ್ಲ, ಅದಕ್ಕೆ ವ್ಯಕ್ತಿಗತ ಸರಳ ಪರಿಹಾರಗಳನ್ನು ಕಂಡುಕೊಳ್ಳಲೂಬಹುದು; ಅಥವಾ ದೀರ್ಘಾವಧಿ ದುಷ್ಪರಿಣಾಮಗಳನ್ನು ಉಪೇಕ್ಷಿಸಲೂಬಹುದು.

ಆದರೆ, ಆ ಸಮಸ್ಯೆಗಳಿಗೆ ಕೂಡ ರಸಾಯನಶಾಸ್ತ್ರಜ್ಞ ಸ್ಪಂದಿಸುವುದು ನಿಜ. ಮಿಶ್ರಲೋಹಗಳನ್ನು ತಯಾರು ಮಾಡುವ ಮೂಲಕ, ಲೇಪನಗಳ ಮೂಲಕ, ನಶಿಸಿಕೆ

*ರಸಾಯನಶಾಸ್ತ್ರದ ಅಧ್ಯಯನ ನಿಸರ್ಗದ ಸಾಮಗ್ರಿಗಳನ್ನು ಮಾನವ ಅಗತ್ಯಗಳಿಗೆ ಮಣಿಸುವಲ್ಲಿ ವಿಶೇಷವಾಗಿ ಶ್ರಮಿಸಿದೆ, ನಿಸರ್ಗದ ಸಾಮಗ್ರಿಗಳನ್ನು ಕುರಿತಾದ ನಮ್ಮ ಧೋರಣೆಯನ್ನು ಬದಲಿಸುವ ವಿಚಾರಗಳನ್ನು ರೂಪಿಸಿದೆ. ನಿಸರ್ಗದ ರಾಚನಿಕ ಚಿತ್ರಣ ಕುರಿತು ನಮ್ಮ ಪರಿಜ್ಞಾನವನ್ನು ಪರಿಷ್ಕರಿಸುವಲ್ಲಿ ರಸಾಯನಶಾಸ್ತ್ರದ ಪಾತ್ರವಿದೆ.*

*ಮಾನವಕುಲ ಎದುರಿಸಿದ ಸವಾಲುಗಳಿಗೆ ಸಹಭಾಗಿಯಾಗಿ, ನಿಸರ್ಗ ಒಡ್ಡುವ ಅಡೆತಡೆಗಳಿಗೆ ಶಾಶ್ವತವಲ್ಲದೆ ಹೋದರೂ ತಾತ್ಕಾಲಿಕ ಪರಿಹಾರ ಒದಗಿಸುತ್ತಾ , ಮಾನವ ಸಮಾಜದ ಬೇಜವಾಬ್ದಾರಿ ಬಳಕೆಯನ್ನು ಚರ್ಚಿಸದೆ, ಪ್ರಶ್ನಿಸದೆ ಮಾಲಿನ್ಯವೂ ಸೇರಿದಂತೆ ಅನೇಕ ಸಮಸ್ಯೆಗಳನ್ನು ಬಣ್ಣಿಸದೆ, ಗೋಜಲಾಗಿಸದೆ ತನ್ನ ಇತಿಮಿತಿಯಲ್ಲಿ ಪರಿಹಾರ ಒದಗಿಸುವ ಆಲೋಚನೆಯಲ್ಲಿ ಮೂಕವಾಗಿ ತೊಡಗಿರುವ ರಸಾಯನಶಾಸ್ತ್ರ – ಬದುಕಿನ ಸವಾಲನ್ನೂ ಎದುರಿಸುವಾಗ ಪರಿಹಾರ ಕೇಂದ್ರಿತ ಚಿಂತನೆಯನ್ನು ಸದ್ದಿಲ್ಲದೆ ಕೈಗೊಳ್ಳುವ ಬಗೆಗೊಂದು ಮಾದರಿ ಎನಿಸುವುದಿಲ್ಲವೆ ? ಬಾಹ್ಯ ಮತ್ತು ಆಂತರಿಕ ಪ್ರತಿರೋಧಗಳ ಸಮಸ್ಯೆಯನ್ನು ಸವಾಲಾಗಿಸಿ ಕೊಳ್ಳುವುದೇ ಜೀವನದ ಕಲೆ ಅಲ್ಲವೆ ?*

ಪ್ರತಿಬಂಧಕಗಳ ಮೂಲಕ – ಇನ್ನೂ ಅನೇಕ ಕ್ರಮಗಳಿಂದ ನಶಿಸುವಿಕೆಯನ್ನು ವಿಳಂಬಗೊಳಿಸುವ ಕಾರ್ಯಕ್ರಮವನ್ನು ಕೈಗೊಂಡಿರುವುದಲ್ಲದೆ, ಲೋಹದ ಬದಲಿಗೆ ಪರ್ಯಾಯವಾಗಿ ಪಾಲಿಮರುಗಳನ್ನು ಬಳಸುವ ಕ್ರಮವನ್ನು – ರಸಾಯನಶಾಸ್ತ್ರ ಜಾರಿಗೆ ತಂದಿದೆ. ಲೋಹದ ಹಾಗೆ ಪಾಲಿಮರ್‌ಗಳೂ ನಶಿಸಿಕೆಗೆ ಒಳಗಾಗದವು.



ರಸಾಯನಶಾಸ್ತ್ರ ಒದಗಿಸಿದ ಈ ಪರಿಹಾರಕ್ಕೆ ಜನರ ಪ್ರತಿರೋಧವೂ ಉಂಟಾಯಿತು. ಲೋಹದ ಹೊಳಪಿನಿಂದ ಕಾಣುವಂತೆಯೂ ಇರಬೇಕು, ಪಾಲಿಮರ್‌ನ ಹಾಗೆ ಬಾಳಿಕೆ ಬರುವುದೂ ಆಗಬೇಕು ಎಂಬ ಬೇಡಿಕೆ ಬಂದಿತು. ಲೋಹಗಳಿಗೆ ಪಾರದರ್ಶಕ ಪಾಲಿಮರ್ ಲೇಪನಕಲೆ, ವಿದ್ಯುತ್‌ರಹಿತ ಲೇಪನದಿಂದ ಪಾಲಿಮರ್‌ನ ಪದರಗಳೊಳಗೆ ಲೋಹಕಣಗಳನ್ನು ಸೇರಿಸುವ ಕಲೆ ಜಾರಿಗೆ ಬಂದಿತು. ಲೋಹದ ಹಾಗೆ ತೋರಿಕೆ ನೀಡುವ ಆದರೆ ಲೋಹಕ್ಕಿಂತ ಹಗುರವಾಗಿರುವ ಅನೇಕ ರಚನೆಗಳನ್ನು (ಗಡಿಯಾರದ ಫ್ರೇಮ್ ಹಾಗೂ ಛತ್ರಿಯ ಹಿಡಿಗಳನ್ನು ಗಮನಿಸಿ) ನಾವಿಂದು ಕಾಣಬಹುದು.

ಪಾಲಿಮರ್‌ಗಳ ಬಳಕೆ ಜಾರಿಗೆ ಬಂದದ್ದು ಅವುಗಳ ನಶಿಸಿಕೆ ಕಡಿಮೆ ಎಂಬ ಒಂದೇ ಕಾರಣದಿಂದಲ್ಲ. ಅದಲ್ಲದೆ ಅವುಗಳ ತಯಾರಿಕೆಗೆ ಆಗುವ ಮಾಲಿನ್ಯ ಹಾಗೂ ಆರ್ಥಿಕ ವೆಚ್ಚ ಕಡಿಮೆ. ಮಿಗಿಲಾಗಿ ಅವುಗಳಲ್ಲಿ ಅಪೇಕ್ಷಿತ ಭೌತಿಕ/ರಾಸಾಯನಿಕ ಗುಣಗಳನ್ನುಂಟುಮಾಡಬಹುದು. ಮರದ ತುಂಡಿನ ಸಾಂದ್ರತೆಯನ್ನು, ಪಾರದರ್ಶಕತೆಯನ್ನು, ನಮ್ಯತೆಯನ್ನು, ಬಾಹ್ಯ ತಾಪಸ್ಪಂದನೆಯನ್ನು ಬದಲಿಸಲಾಗದು. ಆದರೆ ಪಾಲಿಮರ್‌ಗಳು ಹಾಗಲ್ಲ. ಅಪೇಕ್ಷಿತ ಗುಣಗಳನ್ನು ಅವುಗಳಿಗೆ ನೀಡಲು ಸಾಧ್ಯ.

ಹೀಗಾಗಿ ಪಾಲಿಮರ್‌ಗಳು ಅನೇಕ ರಚನಾ ಸಾಮಗ್ರಿಗಳಿಗೆ ಪರ್ಯಾಯವಾಗಿ ಬಳಕೆಯಾಗತೊಡಗಿವೆ. ಲೋಹ, ಮರ, ಗಾಜು, ರಬ್ಬರು, ಹತ್ತಿ, ಕಾಗದ – ಎಲ್ಲಕ್ಕೂ ಪರ್ಯಾಯ ಸಾಮಗ್ರಿಯಾಗಿ ಅವು ಬಳಕೆಯಾಗತೊಡಗಿವೆ. ಬಡವರಿಗೆ ಸುಲಭ ಬೆಲೆಯ ವರದಾನ, ಸಿರಿವಂತರಿಗೆ ಆಕರ್ಷಕತೆಯ ಆಮಿಷ. ನಿಸರ್ಗ ಪ್ರೇಮಿಗಳಿಗೆ ನೈಸರ್ಗಿಕ ಸಂಪನ್ಮೂಲದ ಅವಲಂಬನೆಯನ್ನು ಮಿತಿಗೊಳಿಸಿದ ಹಾಗೂ ಅಪವ್ಯಯ ತಪ್ಪಿಸಿದ ಆನಂದ ನೀಡಿದ ಅಪದ್ಬಾಂಧವ – ರಸಾಯನಶಾಸ್ತ್ರದ ಸುಪುತ್ರ.

ಇದಕ್ಕೀಗ ಖಳನಾಯಕನ ಪಟ್ಟ ಬಂದಿದೆ. ಏಕೆಂದರೆ ಅದು ತ್ಯಾಜ್ಯವಾಗಿ ಭೂಮಿಗೆ ತಲುಪಿದ ಪಾಲಿಮರ್ ನಶಿಸದೆ ಹಾಗೆಯೇ ಉಳಿದು ಜೀವಿಗಳ, ಭೂಮಿಯ ಒಡಲು ಸೇರಿ ಮಾಡುತ್ತಿರುವ ಗಡಿಬಿಡಿ! ಗ್ರಾಹಕರ ಬೇಜವಾಬ್ದಾರಿ ಬಳಕೆ ಹಾಗೂ ವಿಲೇವಾರಿಯಿಂದ, ನಿಸರ್ಗವು ಈ ವಸ್ತುಗಳಿಂದ ಹಾನಿಗೊಳಗಾಗಿದೆ. ನಿಸರ್ಗದ ಹಾನಿಯಿಂದ ದಿಢೀರನೆ ಎಚ್ಚೆತ್ತು ನಾವೀಗ 'ಪ್ಲಾಸ್ಟಿಕ್ ತ್ಯಜಿಸಿ' ಎಂದು ಚಳವಳಿ ಹೂಡಿದ್ದೇವೆ. ಆದರೆ ತ್ಯಜಿಸಲು ಸಾಧ್ಯವೇ ? ಒಮ್ಮೆ ಆಲೋಚಿಸಿ.

ಜಗತ್ತಿನಲ್ಲಿ ಅತಿ ಹೆಚ್ಚು ಪ್ಲಾಸ್ಟಿಕ್ ಬಳಸುವ ದೇಶ ಚೀನಾ. ಆದಾಗ್ಯೂ ಅದರ ಮಾಲಿನ್ಯದ ಪರಿಣಾಮ ಅತಿಯಾಗಿ ಕಾಣಿಸಿಕೊಳ್ಳುತ್ತಿರುವ ದೇಶ ಭಾರತ! ಹೀಗಿರುವಾಗ ಇದು ಗಂಭೀರ ಸಮಸ್ಯೆ. ಜಾಣತನವಲ್ಲ, ವ್ಯಾವಹಾರಿಕ ಸತ್ಯವೆಂದರೆ ಪಾಲಿಮರ್‌ಗಳ ವಿಲೇವಾರಿಯಲ್ಲಿ ವಹಿಸಬೇಕಾದ ಎಚ್ಚರ. ಸೂಕ್ಷ್ಮಜೀವಿಗಳು ವಿಘಟಿಸಬಲ್ಲ ಕೈಗೆಟುಕುವ ಬೆಲೆಯಲ್ಲಿ ಸಿಗುವಂತಹ ಪಾಲಿಮರ್ ರೂಪಿಸುವತ್ತ ರಸಾಯನಶಾಸ್ತ್ರಜ್ಞರು ಇಂದು ಪ್ರವೃತ್ತರಾಗಿದ್ದಾರೆ.

ಇನ್ನು ನಿಸರ್ಗದ ರಚನೆ ಕುರಿತಂತೆ ಕಂಡದ್ದನ್ನಷ್ಟೇ ನಂಬುವ, ಇಂದ್ರಿಯಗ್ರಾಹ್ಯ ಸತ್ಯವನ್ನೇ ಪರಮಸತ್ಯವೆಂದು ಭಾವಿಸುವ ಜನರ ಧೋರಣೆಗೆ ರಸಾಯನಶಾಸ್ತ್ರವು ಅಸತ್ಯಗಳ ಇತಿ-ಮಿತಿಯನ್ನು ತೋರಿಸುತ್ತಲೇ ಬಂದಿದೆ; ಜನರು ಅದನ್ನು ವಿರೋಧಿಸುತ್ತಲೇ ಬಂದಿದ್ದಾರೆ, ಇಲ್ಲವೆ ಉಪೇಕ್ಷಿಸುತ್ತಲೇ ಬಂದಿದ್ದಾರೆ. ಹೀಗಾಗಿ ಶ್ರೀಸಾಮಾನ್ಯರಿಗೂ ವಿಜ್ಞಾನಿಗಳಿಗೂ ಕಂದರ ಹಿರಿದಾಗುತ್ತಲೇ ಇದೆ. ಅತ್ಯಂತ ಸರಳವಾದುದನ್ನೇ ತೆಗೆದುಕೊಳ್ಳೋಣ. ನೀರು ಹಬೆಯಾದಾಗ ಅದು ಗೋಚರ ಸ್ಥಿತಿಯಿಂದ ಅಗೋಚರ ಸ್ಥಿತಿಗೆ ತಲುಪುವುದಾದರೂ ಅದರ ರಾಸಾಯನಿಕ ಲಕ್ಷಣಗಳು ಬದಲಾಗುವುದೇ ಇಲ್ಲ! ಅಂದರೆ ಗೋಚರ ಜಗತ್ತು ಅಗೋಚರ ಕಣ ಗಳಿಂದಾಗಿವೆ ಎಂಬುದು ಎಂತಹ ಕಟು ವಾಸ್ತವ! ಲೋಹದ ನಾಣ್ಯವನ್ನು ನೆಲದ ಮೇಲೆ ಎಸೆದಾಗ 'ಠಣ್' ಎಂದು ಶಬ್ದವಾಗುತ್ತದೆ. ಆದರೆ ಚೂರು ಮಾಡುತ್ತಾ ಹೋದಾಗ ಒಂದು ಹಂತದಲ್ಲಿ ಶಬ್ದ ನಿಂತುಹೋಗುತ್ತದೆ. ಘಟಕ ಕಣಗಳಿಗಿಲ್ಲದ ಶಬ್ದ ಮಾಡುವ ಗುಣ ದಿಢೀರನೆ ಒಂದು ಹಂತದಲ್ಲಿ ಕಾಣಿಸಿಕೊಂಡಿದ್ದು ಹೇಗೆ ? ಇದು ಜೀನೋ ಎಂಬ ಗ್ರೀಕ್ ದಾರ್ಶನಿಕ ಹಾಕಿದ ಸವಾಲು.

ರಸಾಯನಶಾಸ್ತ್ರ ಜಗತ್ತಿನ ಇಂತಹ ಸವಾಲುಗಳನ್ನು ಎದುರಿಸುತ್ತಲೇ ಬಂದಿದೆ, ಬೆಳೆದಿದೆ. ನೀರಿನ ಆವಿಯನ್ನು, ನೀರನ್ನು ಪ್ರತ್ಯೇಕವಾಗಿ ರಸಾಯನಶಾಸ್ತ್ರ ಅಧ್ಯಯನ ಮಾಡುವುದಾದರೂ ನಿಸರ್ಗದಲ್ಲಿ ನೀರು ಹಾಗೂ ನೀರಾವಿ ಒಟ್ಟಿಗೆ ಇವೆ. ನೀರಾವಿಗೂ ಗಾಳಿಗೂ ಸಂಪರ್ಕವಿದೆ, ಪರಸ್ಪರ ಪ್ರಭಾವವೂ ಇದೆ. ಗಾಳಿ ಬೀಸಿದರೆ ಆವಿಯಾಗುವಿಕೆ ಹೆಚ್ಚು. ಗಾಳಿ ಒತ್ತಡ ಹೆಚ್ಚಿದರೆ ಆವಿಯಾಗುವಿಕೆ ಕಡಿಮೆ. ಆವಿಯಾಗುವಿಕೆ ತಾಪವನ್ನೂ ಅವಲಂಬಿಸಿದೆ. ಹೀಗಿರುವಾಗ ದ್ರವ ನೀರಿನ, ನೀರಾವಿಯ ಪ್ರತ್ಯೇಕ ಅಧ್ಯಯನ ಕೈಗೊಂಡು ಅದನ್ನು ಒಟ್ಟುಗೂಡಿಸ ಬರುತ್ತದೆಯೆ ? $H_2O$ ಎನ್ನುವುದು ನೀರಿನ ಒಂದು ಅಣು, ವಿನಾ ನೀರನ್ನು ಪ್ರತಿನಿಧಿಸುವುದಿಲ್ಲ. ನೀರಿನ ಅಣುಗಳ ಚಲನೆ, ಡಿಕ್ಕಿ, ಅವುಗಳ ಪರಸ್ಪರ ಇರುವ ಹೈಡ್ರೋಜನ್ ಬಂಧ, ಅಯಾನೀಕರಣ – ಎಲ್ಲವನ್ನೂ ನೀರಿನ ಅಣುರಚನೆ ಮರೆಮಾಚುತ್ತದೆ! – ಎಂದೆಲ್ಲಾ ವಾದ ಮಾಡುವವರಿದ್ದಾರೆ. ಆ ವಾದ ಪೂರ್ಣ ಸುಳ್ಳೇನಲ್ಲ. ಕೇಸರಿಭಾತಿನ ಘಟಕಗಳೆಲ್ಲದರ ರುಚಿಯನ್ನು ಪ್ರತ್ಯೇಕವಾಗಿ ಪರಿಶೀಲಿಸಿ ಸಮಗ್ರಗೊಳಿಸಿ ಕೇಸರಿಭಾತಿನ ರುಚಿಯನ್ನು ಊಹಿಸಲು ಹೇಗೆ ಅಸಾಧ್ಯವೋ, ರಸಾಯನ ವಿಜ್ಞಾನ ಅಣುಗಳನ್ನೂ ದ್ರವ್ಯಗಳನ್ನೂ ಬಿಡಿಬಿಡಿಯಾಗಿ ಅಧ್ಯಯನ ಮಾಡಿ ಇಡಿಗೊಳಿಸುವುದು ಹುಸಿ! – ಎಂಬ ತಾತ್ತ್ವಿಕ ಅತಿರೇಕದ ನಿಲುವೂ ಇದೆ.

ಆಲ್ಫ್ರೆಡ್ ನಾರ್ಥ್ ವೈಟ್‌ಹೆಡ್ ಎಂಬವರು ಈ ಕುರಿತಂತೆ ವಿಜ್ಞಾನದ ಸಮಸ್ಯೆಯನ್ನು ವಿಶ್ಲೇಷಿಸಿದ್ದಾರೆ. ಮೂರ್ತ ಇಂದ್ರಿಯಗ್ರಾಹ್ಯ ಲಕ್ಷಣ ಹಾಗೂ ಚಿತ್ರಣಗಳ ಮೂಲಕ ಅಮೂರ್ತ, ಅಗ್ರಾಹ್ಯ ನಿಸರ್ಗವನ್ನೂ ವಿವರಿಸುವ ಹುಸಿಕಾರ್ಯದಿಂದ ಈ ತೊಡಕುಗಳುಂಟಾಗಿವೆ ಎಂದವರು ಹೇಳುತ್ತಾರೆ.

ಸತ್ಯದ ಪರಾಕಾಷ್ಠೆಯ ಈ ವಿವಾದವನ್ನು ಪಂಡಿತರಿಗೇ ಬಿಟ್ಟುಬಿಡೋಣ. ಮಾನವಕುಲ ಎದುರಿಸಿದ ಸವಾಲುಗಳಿಗೆ ಸಹಭಾಗಿಯಾಗಿ, ನಿಸರ್ಗ ಒಡ್ಡುವ ಅಡೆತಡೆಗಳಿಗೆ ಶಾಶ್ವತವಲ್ಲದೆ ಹೋದರೂ ತಾತ್ಕಾಲಿಕ ಪರಿಹಾರ ಒದಗಿಸುತ್ತಾ, ಮಾನವಸಮಾಜದ ಬೇಜವಾಬ್ದಾರಿ ಬಳಕೆಯನ್ನು ಚರ್ಚಿಸದೆ, ಪ್ರಶ್ನಿಸದೆ ಮಾಲಿನ್ಯವೂ ಸೇರಿದಂತೆ ಅನೇಕ ಸಮಸ್ಯೆಗಳನ್ನು ಬಣ್ಣಿಸದೆ, ಗೋಜಲಾಗಿಸದೆ ತನ್ನ ಇತಿಮಿತಿಯಲ್ಲಿ ಪರಿಹಾರ ಒದಗಿಸುವ ಆಲೋಚನೆಯಲ್ಲಿ ಮೂಕವಾಗಿ ತೊಡಗಿರುವ ರಸಾಯನಶಾಸ್ತ್ರ – ಬದುಕಿನ ಸವಾಲನ್ನೂ ಎದುರಿಸುವಾಗ ಪರಿಹಾರಕೇಂದ್ರಿತ ಚಿಂತನೆಯನ್ನು ಸದ್ದಿಲ್ಲದೆ ಕೈಗೊಳ್ಳುವ ಬಗೆಗೊಂದು ಮಾದರಿ ಎನಿಸುವುದಿಲ್ಲವೆ ? ಬಾಹ್ಯ ಮತ್ತು ಆಂತರಿಕ ಪ್ರತಿರೋಧಗಳ ಸಮಸ್ಯೆಯನ್ನು ಸವಾಲಾಗಿಸಿಕೊಳ್ಳುವುದೇ ಜೀವನದ ಕಲೆ ಅಲ್ಲವೆ ?



ಪ್ರೊ|| ಎಮ್. ಆರ್. ನಾಗರಾಜು
ಎಫ್-೪, ಎಸ್ ಬಿ ಎಸ್ ನಿವಾಸಗಳು
೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ
ಬೆಂಗಳೂರು - ೫೬೦ ೧೦೬



## ಹಿಂದುಳಿದವರು

ಸಂ. : ಡಾ॥ ವರದಾ ಶ್ರೀನಿವಾಸ್
**ಪುಟ : ೧೮೮ ಬೆಲೆ : ರೂ. ೮೦**
**ಅನು ಪ್ರಕಾಶನ,**
ನಂ. ೧೦೦೮, ೮ನೇ 'ಜಿ' ಮುಖ್ಯರಸ್ತೆ, ೩ನೇ ಸ್ಟೇಜ್, ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

ಇವು ಹಿಂದುಳಿದ ಜನರ ಬಗ್ಗೆ ಸಂಗ್ರಹಿಸಲಾದ ಬರಹಗಳು. ಪ್ರಧಾನ ಸಂಪಾದಕರು ಶ್ರೀ ಬಿ. ಎನ್. ರಮೇಶ್. ಸಂಪಾದಕಿ ಡಾ॥ ವರದಾ ಶ್ರೀನಿವಾಸ್. ಆಹ್ವಾನಿಸಲ್ಪಟ್ಟ ಇಲ್ಲಿನ ಬರಹಗಳಲ್ಲಿ ಜಾತಿಯ ಕಾರಣವಾಗಿ, ಆರ್ಥಿಕವಾಗಿ ದುರ್ಬಲರಾಗಿರುವ ಸಮುದಾಯಗಳನ್ನು ಕುರಿತು ವಿಶೇಷ ಪ್ರಸ್ತಾಪಗಳಿದ್ದು ಹೆಚ್ಚಿನ ಕಾಳಜಿಯಿಂದ ಚರ್ಚಿಸಲಾಗಿದೆ. ಕೆಲವು ಪಂಗಡಗಳು ಮಾತ್ರ ಯಾಕೆ ಹಿಂದುಳಿದವು? ಉದ್ದೇಶಪೂರ್ವಕ ಅವರನ್ನು ಕಡೆಗಣಿಸಲಾಯಿತೆ? ಹಿಂದುಳಿಯುವಿಕೆಗೆ ಕಾರಣ ಹಲವು. ಬಡವರಿಗೆ ತಮ್ಮ ದಿನದ ಕೂಳಿಗಾಗಿ ಇನ್ನೊಬ್ಬರ ಕೃಪಾಕಟಾಕ್ಷ, ಆಶ್ರಯ ಅನಿವಾರ್ಯವಾದಾಗ ಅಲ್ಲಿ ಒಂದು ಬಗೆಯ ಸೂಕ್ಷ್ಮ ಕೊಡು-ಕೊಳ್ಳುವಿಕೆಯ ಪ್ರಾರಂಭ. ಕೊಡುವವನು ದರ್ಪದಿಂದ ಕೊಟ್ಟು ತೆಗೆದುಕೊಂಡವನು ಅತಿ ವಿನಯವಂತನಾದಾಗ ಮೇಲು-ಕೀಳು ಪ್ರಾರಂಭ. ತುಳಿಯುವಿಕೆ ಅದರ ಮುಂದುವರಿಕೆ. ಮುಂದೆ ಸೇವಕ, ಧನಿ, ಉಪಕೃತ, ದಾನಿ, ಭಿಕ್ಷುಕ ಎಂಬ ತಾರತಮ್ಯ. ತಮ್ಮ ಸೇವೆಗಾಗಿ ಅವರನ್ನು ಬಳಸಿಕೊಂಡು ಅವರನ್ನು ಕೆಳ ಹಂತದಲ್ಲೇ ಉಳಿಸುವ ಹುನ್ನಾರ. ಉಳ್ಳವ-ಇಲ್ಲದವ, ದುರ್ಬಲ-ಸಬಲ ಪದಗಳ ಮೆರವಣಿಗೆಯ ಈ ಓಟದಲ್ಲಿ ಹೆಚ್ಚಿನವರು ಹಿಂದುಳಿದು ಕೆಲವೇ ವರ್ಗಗಳು ಶ್ರೀಮಂತರಾಗುತ್ತಾರೆ. ಮುಂದೆ ಸಮಾಜವಾದ ಉದಯಿಸಿ ಸಮಾನತೆಯ ಕೂಗು ಕೇಳಿಸಿತು. ಹೀಗೆ ಸಮಾಜದಲ್ಲಿ 'ಹಿಂದುಳಿದ' ಎಂಬ ಪದ ರೂಢಿಗೆ ಬಂತು. ಸಮಾಜದಲ್ಲಿ ನಾವೆಷ್ಟೇ ಸ್ವತಂತ್ರರೆಂದುಕೊಂಡರೂ ನಮಗೆ ಎಲ್ಲರ ಸಹಕಾರ ಬೇಕೆಂಬ ಮತ್ತು ಪರಸ್ಪರ ಎಂಬ ಪದವನ್ನು ಮತ್ತೆ ಮತ್ತೆ ಸ್ವೀಕರಿಸಬೇಕಾದ ಅನಿವಾರ್ಯತೆಯತ್ತ ಈ ಪುಸ್ತಕ ನಮ್ಮ ಗಮನ ಸೆಳೆಯುತ್ತದೆ.

## ಕೋಲಾರ ಚಿನ್ನದ ಗಣಿಗಳು

ಡಾ॥ ಎಂ. ವೆಂಕಟಸ್ವಾಮಿ
**ಪುಟ : ೩೩೬** **ಬೆಲೆ : ರೂ. ೨೫೦**
**ಸಾಹಿತ್ಯ ಸುಗ್ಗಿ**, ನಂ. ೪೦, ೧ನೇ ಮುಖ್ಯರಸ್ತೆ, ೨ನೇ ಹಂತ, ೩ನೇ ಬ್ಲಾಕ್, ನಾಗರಭಾವಿ, ಬೆಂಗಳೂರು - ೫೬೦ ೦೭೨



ಚಿನ್ನವೆಂದರೆ ಸಾಕು, ಹೆಣ್ಣು ಮಕ್ಕಳ ಕಿವಿಗೆ ಅದು ಇಂಪಾಗಿ ಕೇಳಿಸಿ ಮುಖವರಳುತ್ತದೆ. ನಾಗರಿಕತೆಯ ಬೆಳವಣಿಗೆಯ ಕಾಲದಲ್ಲಿ ದೇಶ-ದೇಶಗಳ ಚರಿತ್ರೆಯಲ್ಲಿ ಚಿನ್ನಕ್ಕಾಗಿ ಸ್ಥಳೀಯ ಮುಗ್ಧ ಬುಡಕಟ್ಟು ಜನರ ಕಗ್ಗೊಲೆಯಾಗಿದೆ. ಪ್ರಪಂಚದ ಶ್ರೀಮಂತಿಕೆಯನ್ನು ಅಳೆಯುವ ಸಾಧನ ಚಿನ್ನ ಎಂಬಷ್ಟರ ಮಟ್ಟಿಗೆ ಇಂದು ಅದರ ಬೆಲೆಯೇರಿ ನಿಂತಿದೆ. ಇರಲಿ, ಈ ಪುಸ್ತಕ ಕೋಲಾರದ ಚಿನ್ನದ ಗಣಿಗಳ ಚರಿತ್ರೆಯನ್ನು ತಿಳಿಸುತ್ತವೆ. ರಾಜರುಗಳ ವೈಭವಕ್ಕೆ, ದೇವಾಲಯಗಳಲ್ಲಿನ ದೇವತಾಮೂರ್ತಿಗಳನ್ನು ಒಂದಿಂಚೂ ಬಿಡದೆ ಅಲಂಕರಿಸುವುದಕ್ಕೆ ಟನ್‌ಗಟ್ಟಲೆ ಚಿನ್ನವನ್ನು ಉತ್ಪಾದಿಸುವ ಗಣಿಗಳ ಚರಿತ್ರೆ ಇದು. ಜೊತೆಗೆ ಸಾವಿರಾರು ಮೀಟರ್ ಆಳದಲ್ಲಿ ಹೊಟ್ಟೆಪಾಡಿಗಾಗಿ ದುಡಿಯುವ ಕಾರ್ಮಿಕನ ಚರಿತ್ರೆಯೂ ಇದೇ ಆಗಿದೆ. ಅದಿರಿನಿಂದ ಬೇರ್ಪಡಿಸಿ ಶುದ್ಧ ಚಿನ್ನವನ್ನಾಗಿ ಮಾರ್ಪಡಿಸಲು ಗಣಿಗಾರಿಕೆಯ ಹಂತದಿಂದ ಕಾರ್ಮಿಕ ಅನುಭವಿಸುವ ಅಪಾರ ಕಷ್ಟಕೋಟಲೆ ಮತ್ತು ಸುತ್ತಲಿನ ಪರಿಸರಕ್ಕೆ ರಾಸಾಯನಿಕ ಬಳಕೆಯಿಂದ ಆಗುವ ಹಾನಿ ವಿಪರೀತದ್ದು. ಭಾರತದಲ್ಲಿ ಬ್ರಿಟಿಷರ ಕಾಲದಲ್ಲಿ ಜಾನ್ ಟೇಲರ್ ಅಭಿವೃದ್ಧಿಪಡಿಸಿ ಭೂಗರ್ಭದಿಂದ ಮೇಲೆತ್ತಿದ ಚಿನ್ನದ ಪ್ರಮಾಣ ಅತೀ ಹೆಚ್ಚು. ಕೆ.ಜಿ.ಎಫ್. ಪ್ರದೇಶವನ್ನು 'ಲಿಟ್ಲ್ ಇಂಗ್ಲೆಂಡ್' ಎಂದು ಕರೆದು ಸಾಗಿಸಿದ ಚಿನ್ನದ ಪ್ರಮಾಣವೂ ಹೆಚ್ಚು. ಸೂರ್ಯ ಮುಳುಗದೆ ಇದನ್ನೆಲ್ಲ ನೋಡುತ್ತಿದ್ದ. ಸಾಕಷ್ಟು ವಿವರವಾದ ಅಂಕಿ-ಅಂಶಗಳನ್ನು ನೀಡಿ ಕೆ.ಜಿ.ಎಫ್.ನ ಬಗ್ಗೆ ನಮಗೆ ತಿಳಿಸಿದ್ದಾರೆ ಡಾ॥ ಎಂ. ವೆಂಕಟಸ್ವಾಮಿ.

## ಎಲ್ಲಾ ಕಾಲದ ಬೆಳಕು

ಪ್ರ. ಸಂ. : ಭೀಮನಗೌಡ ಇಟಗಿ
**ಪುಟ : ೧೯೮ + xxii** **ಬೆಲೆ : ರೂ. ೧೦೦**
**ಕನಸು ಪ್ರಕಾಶನ**, ಸಂ. ೪-೪-೫೭೮/೧, ಜಹೀರಾಬಾದ್, ರಾಯಚೂರು

ಲೋಹಿಯಾ ಅವರದ್ದು ಜಾತ್ಯತೀತ-ಸಮಾಜವಾದೀ ರಾಷ್ಟ್ರ ನಿರ್ಮಾಣದ ಕನಸು. ರಾಷ್ಟ್ರ ರಾಜಕಾರಣದಲ್ಲಿ ಅವರದ್ದು ದಿಟ್ಟ ಹೆಜ್ಜೆ. ಗಾಂಧೀಜಿಯ ಸಮಕಾಲೀನರಾಗಿದ್ದು ಈ ದೇಶದ ಬಡವರ, ಮಹಿಳೆಯರ, ಸಮಾನತೆಯ ಬಗ್ಗೆ, ಅವರ ಏಳ್ಗೆಯ ಬಗ್ಗೆ ಸದಾ ಚಿಂತಿಸಿದವರು. ಭೋಗ ಜೀವನಕ್ಕೆ ತಿಲಾಂಜಲಿ ಇತ್ತು, ಅಧಿಕಾರದಾಸೆಗೆ ಬಲಿಯಾಗದೆ ತ್ಯಾಗಜೀವನವನ್ನು ನಡೆಸಿ ಕಡೆಗೂ ಶಸ್ತ್ರಚಿಕಿತ್ಸೆಗಾಗಿ ಹೆಚ್ಚಿನ ಸೌಕರ್ಯ ಮತ್ತು ವಿಶೇಷ ಸೌಲಭ್ಯಗಳಿಲ್ಲದ ಸರಕಾರಿ ಆಸ್ಪತ್ರೆ ಸೇರಿ ಅಲ್ಲಿ ಮೃತರಾದರು. ಅದು ಇಂದು ದೆಹಲಿಯಲ್ಲಿರುವ ಅತ್ಯಂತ ಸುಸಜ್ಜಿತ ರಾಮ ಮನೋಹರ ಲೋಹಿಯಾ ಆಸ್ಪತ್ರೆ. ಅವರ ಚಿಂತನೆಗಳನ್ನು ಯುವ ಜನಾಂಗಕ್ಕೆ ಇಂದು ಪರಿಚಯಿಸಬೇಕಾದ ಅಗತ್ಯವಿದೆ. ಸಮಾನ ಮನಸ್ಕರಾದ ಕೆಲವು ಲೇಖಕರು ಇಲ್ಲಿ ಲೋಹಿಯಾ ವ್ಯಕ್ತಿತ್ವದ ಬಗ್ಗೆ ವಿಶೇಷ ಲೇಖನಗಳನ್ನು ಬರೆದಿದ್ದಾರೆ. ಲೋಹಿಯಾ ಅವರನ್ನು ಎಲ್ಲ ಕಾಲದ ಹಾಗೂ ಎಲ್ಲ ದೇಶಗಳ ಬೆಳಕೆಂದು ಈ ಪುಸ್ತಕದಲ್ಲಿ ಪರಿಚಯಿಸಲಾಗಿದೆ. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಅವರು ಸಮಾನ ನಾಗರಿಕ ಹಕ್ಕುಗಳನ್ನು ಪ್ರತಿಪಾದಿಸಿದ್ದಾರೆ. ಅನೇಕ ಚಳುವಳಿಗಳನ್ನು ನಡೆಸಿದ್ದಾರೆ. ಬಂಡಾಯವೆದ್ದಿದ್ದಾರೆ. ನಮ್ಮ ದೇಶದ ಅವನತಿಗೆ ಅವರು ಕಾರಣಗಳನ್ನು ಅಂದೇ ಕಂಡಿದ್ದರು ಮತ್ತು ಹೇಳಿಯೂ ಇದ್ದರು. ಅದಕ್ಕೆ ಪರ್ಯಾಯವನ್ನೂ ಸೂಚಿಸಿದ್ದರು. ಆದರೂ ಅವರ ಸಮಾಜವಾದದ ಆಚರಣೆ ನಿರೀಕ್ಷೆಯಂತೆ ನಡೆಯಲೇ ಇಲ್ಲ. ಈ ಎಲ್ಲ ಅಂಶಗಳನ್ನು ಇಲ್ಲಿನ ಲೇಖನಗಳು ಬಿಂಬಿಸುತ್ತವೆ.



## ಕಡಲಿಗೆಷ್ಟೊಂದು ಬಾಗಿಲು

ರೂಪ ಹಾಸನ
**ಪುಟ : ೧೦೪** **ಬೆಲೆ : ರೂ. ೫೦**
**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

ರೂಪ ಹಾಸನ ನಮ್ಮ ನಡುವಿನ ಕವಯಿತ್ರಿ. ತನ್ನ ಎದೆಯಾಳದಿಂದ ಸಹಜವಾಗಿ ಹರಿದುಬರುವ ಅಭಿವ್ಯಕ್ತಿಗಳನ್ನಷ್ಟೇ ದಾಖಲಿಸಿ ಕವಿತೆಯನ್ನಾಗಿಸುವ ಕುಸುರಿ ಕೆಲಸ ಅರಿತವರು. ಒಬ್ಬರಿಗಿಂತ ಒಬ್ಬರದು ಭಿನ್ನವಾಗಿರುವ ಪ್ರಪಂಚದ ಈ ಬದುಕಿನಲ್ಲಿ ನಮ್ಮನ್ನು ಕಾಡಿಸುವ ಪೀಡಿಸುವ ಘಟನೆಗಳು, ಸಂತೋಷ ಸಂಭ್ರಮದ ಕ್ಷಣಗಳು ಎದುರಾಗುತ್ತಲೇ ಇರುತ್ತವೆ. ಮನಸ್ಸು ಅದಕ್ಕೆ ಮಿಡಿಯುತ್ತಲೇ ಇರುತ್ತದೆ. ಆದರಲ್ಲೂ ಕವಿಯ ಒಡಲೇ ಒಂದು ಕಡಲು. ಭಾವನೆಗಳು ಅಲ್ಲಿ ಭೋರ್ಗರೆಯುತ್ತಿದ್ದು, ಭಾವತೀವ್ರತೆಯ ಒತ್ತಡ ಹೆಚ್ಚಾದಾಗ ಅನಿವಾರ್ಯವಾಗಿ ಕವನಗಳು ಜನ್ಮ ತಳೆಯುತ್ತವೆ. ಹೀಗೆ ಹಾಡು ತಾನಾಗಿ ಹುಟ್ಟಿಬಂದು, ಎಲ್ಲರೊಳಗೆ ಥೇಟ್ ಕಡಲಿನ ಅಲೆಗಳಂತೆಯೇ ಸಾಗಿ ಬಂದು ಪರಸ್ಪರ ಸಂದೇಶ ಸಾರುತ್ತವೆ. ಕವಿತೆಗಳ ಮೂಲಕ, ಅಲ್ಲಿ ನೀಡಿದ ರೂಪಕಗಳ ಮೂಲಕ ಇಲ್ಲೊಂದು ಉನ್ನತ ಮೌಲ್ಯಶೋಧದ ಕೆಲಸ ಖಂಡಿತವಾಗಿಯೂ ಸಾಗಿದೆ. ಕವಿತೆಗಳ ಸಾರವನ್ನೆಲ್ಲ ಗ್ರಹಿಸಿದಂತಹ, ಕಡಲಿನ ಒಡಲನ್ನು ಹೊಕ್ಕು ಹೊರಬಂದು ಅಲ್ಲಿನ ನಿಧಿಯನ್ನು ಪರಿಚಯಿಸಿದಂತಹ ಮೌಲಿಕ ಮುನ್ನುಡಿ ಶ್ರೀ ಬರಗೂರು ರಾಮಚಂದ್ರಪ್ಪನವರಿಂದ ಈ ಸಂಕಲನಕ್ಕೆ ದೊರಕಿದೆ. ಸಾಮಾನ್ಯವಲ್ಲದ ಅಸಾಮಾನ್ಯ ಎನ್ನುವಂತಹ ಒಂದೆರಡು ಸಾಲುಗಳು ಹೀಗಿವೆ: ''ಎಲ್ಲ ಹುಟ್ಟುವ ಮೊದಲೇ ಇವಳು ಹುಟ್ಟಿಬಿಟ್ಟಳು, ತಾನೇ ಇಳೆಯಾಗಿಬಿಟ್ಟಳು'', ''ಸತ್ತ ಜಿರಲೆಯ ಹೆಣ ಹೊತ್ತು ಅದೋ ನೋಡು ಬದುಕಿದಿರುವೆಗಳ ಮೆರವಣಿಗೆ.''

**ಸಮಗ್ರ ಕಾವ್ಯ (೧೯೬೦ರಿಂದ ೨೦೧೦)**

*ಲೇ: ವಿಷ್ಣು ನಾಯ್ಕ*

**ಪುಟ : ೬೧೪+೪೪ = ೬೫೮** **ಬೆಲೆ : ರೂ. ೪೫೦**

**ವಿಷ್ಣು ನಾಯ್ಕ**, 'ಪರಿಮಳ', ಅಂಬಾರಕೊಡ್ಲ, ಅಂಕೋಲ - ೫೮೧ ೩೧೪, ಉ.ಕ. ಜಿಲ್ಲೆ

ಅಂಬಾರ ಕೊಡ್ಲದ ವಿಷ್ಣು ನಾಯ್ಕ ಊರಿನವರೆಲ್ಲರ ಅಚ್ಚುಮೆಚ್ಚಿನ ನಾಯಕರು. ಹತ್ತು ಹಲವು ಸಂಘಸಂಸ್ಥೆಗಳಲ್ಲಿ ಕ್ರಿಯಾಶೀಲರಾಗಿದ್ದು, ನೊಂದವರಿಗೆ ಸಹಾಯಹಸ್ತ ಚಾಚುವ ಇವರು ಸದ್ದುಗದ್ದಲವಿಲ್ಲದೆ ಸಮಾಜಸೇವೆ ಮತ್ತು ಸಾಹಿತ್ಯಸೇವೆ ಎರಡನ್ನೂ ಮಾಡುತ್ತ ಜನಪ್ರಿಯತೆ ಗಳಿಸಿದ್ದಾರೆ. ವಿದ್ಯಾರ್ಥಿ ಜೀವನದ ಪ್ರಾರಂಭದಿಂದಲೂ ಸಾಂಸ್ಕೃತಿಕ-ಸಾಮಾಜಿಕ-ಜನಪರ ಹೋರಾಟಗಳಲ್ಲಿ ಸಕ್ರಿಯರಾಗಿ ಪಾಲ್ಗೊಂಡಿದ್ದಾರೆ. ಲೇಖಕ, ಕವಿ, ರಂಗಕರ್ಮಿ, ಅಧ್ಯಾಪಕ, ಯಕ್ಷಗಾನ ಪ್ರೇಮಿ, ಪುಸ್ತಕ ಪ್ರಕಾಶಕ... ಹೀಗೆ ಬಹುಮುಖ ಪ್ರತಿಭೆ. ರಾಘವೇಂದ್ರ ಪ್ರಕಾಶನದ ಮೂಲಕ ಬಹಳಷ್ಟು ಪುಸ್ತಕಗಳನ್ನು ಹೊರತಂದು ನಾಡಿನಾದ್ಯಂತ ಪರಿಚಿತರು. ಪ್ರಸ್ತುತ ಪುಸ್ತಕವು ವಿಷ್ಣು ನಾಯ್ಕರ ಸಮಗ್ರ ಕವನಗಳ ಸಂಗ್ರಹ. ಇದುವರೆಗೆ ಇವರು ರಚಿಸಿದ ಸುಮಾರು ನಾಲ್ಕುನೂರು ಕವಿತೆಗಳಲ್ಲಿ ಹೆಚ್ಚಿನವು ಇಲ್ಲಿ ಸಂಕಲಿತವಾಗಿವೆ. ಈ ಕವಿತೆಗಳಲ್ಲಿ ಜೀವನವನ್ನು ಬಗೆದು ನೋಡಿದ ಅನುಭವವಿದೆ; ಸಿರಿತನ-ಬಡತನ ಎಂಬ ತಾರತಮ್ಯವಿಲ್ಲದೆ ಎಲ್ಲ ವರ್ಗಗಳ ಜನರ ನಾಡಿಮಿಡಿತವನ್ನದು ಹಿಡಿದಿದೆ. ತನ್ನೂರಿನ ಬಗ್ಗೆ ಯಾವತ್ತೂ ಪ್ರೀತಿವಿಶ್ವಾಸ ಇರಿಸಿಕೊಂಡಿರುವ ಅವರು ಸಾಹಿತ್ಯದಲ್ಲೂ ಅದನ್ನು ಪಡಿಮೂಡಿಸಿದ್ದಾರೆ. ಈ ಇಳಿವಯಸ್ಸಿನಲ್ಲೂ ಕ್ರಿಯಾಶೀಲರಾಗಿ ವಿವಿಧ ಆಯ್ಕೆ ಸಮಿತಿಗಳು, ಅಕಾಡೆಮಿಯ ಸಲಹಾಮಂಡಳಿಗಳು, ಜಿಲ್ಲಾಮಟ್ಟದ ಸಾರ್ವಜನಿಕ ಗ್ರಂಥಾಲಯಗಳಲ್ಲಿ ಬೇರೆ ಬೇರೆ ಸ್ಥಾನಮಾನಗಳಲ್ಲಿದ್ದು ಕಾರ್ಯ ನಿರ್ವಹಿಸುತ್ತಿದ್ದಾರೆ.




**ಎಸ್. ಕೆ. ಕರೀಂಖಾನ (ಜೀವನ ಮತ್ತು ಸಾಹಿತ್ಯ)**

*ಲೇ : ಡಾ|| ಪ್ರಕಾಶ ಬಿ. ನಾಯಕ*

**ಪುಟ : ೧೪+೨೨೨ = ೨೩೬** **ಬೆಲೆ : ರೂ. ೧೯೦**

**ಸ್ನೇಹಸಿಂಧು ಪ್ರಕಾಶನ**, ಅಂಕೋಲಾ - ೫೮೧ ೩೧೪

ಜಾನಪದ ಕ್ಷೇತ್ರದಲ್ಲಿ ಗಮನಾರ್ಹ ಸಾಧನೆಗೈದು, ವಿಶೇಷ ಆಸ್ಥೆಯಿಂದ ಕನ್ನಡ ಜನಪದ ಗೀತೆಗಳನ್ನು ಸಂಗ್ರಹಿಸಿದವರು ಶ್ರೀ ಎಸ್. ಕೆ. ಕರೀಂಖಾನರು. ಸ್ವಾತಂತ್ರ್ಯ ಹೋರಾಟ, ಕರ್ನಾಟಕ ಏಕೀಕರಣದ ಸಂದರ್ಭದಲ್ಲಿ ನಿಸ್ಪೃಹ ಸೇವೆ ಸಲ್ಲಿಸಿ ಅನೇಕ ಸಲ ಸೆರೆಮನೆ ವಾಸ ಕಂಡಿದ್ದಾರೆ. ನಂದಿಬೆಟ್ಟಕ್ಕೆ ಗಾಂಧೀಜಿಯವರು ಆಗಮಿಸಿದ್ದಾಗ ಅವರನ್ನು ಭೇಟಿಯಾದ ಕರೀಂಖಾನ್ ಗಾಂಧೀವಾದಕ್ಕೆ ಮನಸೋತು ಅವರ ಅನುಯಾಯಿಯಾದರು. ಮುಂದೆ ಬ್ರಿಟಿಷರ ವಿರುದ್ಧ ''ಭಾರತ ಬಿಟ್ಟು ತೊಲಗಿ'' ಚಳವಳಿಯಲ್ಲಿ ಪಾಲ್ಗೊಂಡರು. ನಾಡು-ನುಡಿಗೆ ವಿವಿಧ ಬಗೆಯಲ್ಲಿ ಸೇವೆ ಸಲ್ಲಿಸಿರುವ ಕರೀಂಖಾನ್ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷರೂ ಆಗಿದ್ದರು. ಎಳವೆಯಲ್ಲೇ ಕರ್ನಾಟಕದಾದ್ಯಂತ ಕಾಲ್ನಡಿಗೆಯಲ್ಲಿ ಪ್ರಯಾಣಿಸುತ್ತ ಜನಪದ ಹಾಡುಗಳನ್ನು ಹಾಡುತ್ತ ಸಂಚರಿಸಿದ್ದರು. ಕನ್ನಡ ಚಲನಚಿತ್ರರಂಗಕ್ಕೆ ಇವರು ಬರೆದ ಕಥೆ, ಸಂಭಾಷಣೆ, ಗೀತೆಗಳು ಕಳೆದ ಶತಮಾನದ ಅರವತ್ತರ ದಶಕದಲ್ಲಿ ಭಾರಿ ಜನಪ್ರಿಯತೆ ಗಳಿಸಿದ್ದುವು. ಕನ್ನಡ ಭಾಷೆ ಮತ್ತು ಕರ್ನಾಟಕಕ್ಕೆ ಸಲ್ಲಿಸಿದ ಸೇವೆಗಾಗಿ ವಿವಿಧ ಸಂಘಸಂಸ್ಥೆಗಳಿಂದ ಗೌರವಿಸಲ್ಪಟ್ಟು, ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಮತ್ತು ಜಾನಪದಶ್ರೀ ಪ್ರಶಸ್ತಿ ಪಡೆದಿದ್ದಾರೆ. ಕಪಟ-ಮೋಸ-ವಂಚನೆ- ದ್ವೇಷಗಳೆಂದರೇನೆಂದೇ ಅರಿಯದ ಮುಗ್ಧ ಸ್ವಭಾವದ ಇವರ ಜೀವನ ಹಾಗೂ ಸಾಹಿತ್ಯದ ಬಗ್ಗೆ ಅತ್ಯಂತ ಜತನದಿಂದ ವಿವರಗಳನ್ನು ಕಲೆಹಾಕಿದ ಈ ಪುಸ್ತಕವು ಡಾ|| ಪ್ರಕಾಶ ಬಿ. ನಾಯಕ ಅವರ ಪಿಎಚ್.ಡಿ. ಮಹಾಪ್ರಬಂಧವೂ ಹೌದು.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

# ಅಲಂಕಾರದ ಸಂಗೀತ



ಚೆಲುವಿನ ಲಯವು ಮಾಧುರ್ಯದ ಶ್ರುತಿಯು
ಮೌಲ್ಯವು ಕಟ್ಟಲಾಗದ ಗಗನದ ಈ ಗಾನವು
ಶೃಂಗಾರದ ಶಿಲ್ಪವು ಪ್ರಣಯದ ಕಾವ್ಯವು
ಶುಭಕೋರುವ ಲಹರಿಯು ನವರಸದ ಈ ಗೀತೆ
ಏಳು ಸ್ವರಗಳ ಅಲಂಕಾರದ ಸಂಗೀತವು

ದುಂಬಿಯ ಝೇಂಕಾರ ಹಕ್ಕಿಯ ಚಿಲಿಪಿಲಿಯು
ಗಾಳಿಯಲ್ಲಿ ತೇಲುವುದು ಜೇನಿನ ಪರಿಮಳ
ವನವೆಲ್ಲಾ ಕುಹೂ ಕುಹೂ ಗಾನವು
ಏಳು ಸ್ವರಗಳ ಅಲಂಕಾರದ ಸಂಗೀತವು

ಸರಿಗಮಪದನಿ ಜುಳು ಜುಳು ಜೋಗದಲ್ಲಿ
ಹರಿಯುವ ನದಿಯಲ್ಲಿ ತಂಪಿನ ನಾದವು
ಕಡಲಲ್ಲಿ ತುಂಟಾಟದ ಅಲೆ ಅಲೆಯ ತಾಳವು
ಏಳು ಸ್ವರಗಳ ಅಲಂಕಾರದ ಸಂಗೀತವು

ಮೋಹದಲ್ಲಿ ಅಂಬರವು ಬೆಳ್ಳಿಯ ಸಿಡಿಲು
ಮೋಡವು ಕರಗಿ ಮುತ್ತಿನಾ ಹನಿಗಳು ಚೆಲ್ಲಿ
ಭೂಮಿಯ ಮೇಲೆ ಹಸಿರ ತೆನೆಯಾ ರಾಗವು
ಏಳು ಸ್ವರಗಳ ಅಲಂಕಾರದ ಸಂಗೀತವು

ಅನುರಾಗ್




# ಗ್ರಹಗಳ ಪುನರಾಗಮನ

ಕಳೆದ ತಿಂಗಳು -ಹುಣ್ಣಿಮೆಯಾದ ಒಂದೇ ಗಂಟೆಯಲ್ಲಿ ಚಂದ್ರ - ಭೂಮಿ ನಡುವಿನ ಅಂತರ ಕನಿಷ್ಠ ಆಗಿತ್ತು. ಇದರಿಂದ ಕಡಲ ತೀರದಲ್ಲಿ ಉಬ್ಬರ ಇಳಿತಗಳು ಎಂದಿನ ಹುಣ್ಣಿಮೆಗಿಂತ ಜೋರು ಎಂಬ ಒಂದೇ ಭೌತಿಕ ಪರಿಣಾಮವನ್ನು ಯಾರಾದರೂ ಗಮನಿಸಿದರೋ ಇಲ್ಲವೋ ತಿಳಿಯಲಿಲ್ಲ. ಆದರೆ ಬೇರೆ ಬಗೆಯ ಪರಿಣಾಮಗಳು ಬಹಳ ಸ್ಪಷ್ಟವಾಗಿ ಗೋಚರಿಸಿದವು. ಅನೇಕ ಮಾಧ್ಯಮಗಳಿಗೆ ಸನ್ನಿ ಹಿಡಿದಿತ್ತು. ಹುಸಿ ಬೆದರಿಕೆಗಳನ್ನು ಹುಟ್ಟು ಹಾಕಿ ಮುಗ್ಧರ ಮನಶ್ಶಾಂತಿ ಕೆಡಿಸಿದುದಕ್ಕೆ ನಮ್ಮ ನ್ಯಾಯಾಂಗ'ದ'ಲ್ಲಿ ಯಾವ ಶಿಕ್ಷೆಯೂ ಇದ್ದಂತಿಲ್ಲ. ಆ ಕಾರ್ಯಕ್ರಮಗಳ ನಿಯೋಜಕರಿಗೆ ಸವಾಲು ಹಾಕುತ್ತಿದೆ ಚಂದ್ರ ಈ ತಿಂಗಳು. ಹುಣ್ಣಿಮೆಗೆ ಸರಿಯಾಗಿ ೨೪ ಗಂಟೆ ಮುಂಚೆ ಚಂದ್ರ -ಭೂಮಿ ಅಂತರ ಕನಿಷ್ಠ ವಾಗುತ್ತಿದೆ. ಕಳೆದ ತಿಂಗಳ ಕಲ್ಪಿತ ಆರೋಪಗಳನ್ನು ಈ ತಿಂಗಳು ಚಂದ್ರನಿಗೆ ಹೊರಿಸೋಣವೇ ? ಮತ್ತೆ ಮುಂದಿನ ತಿಂಗಳು, ಆ ಮುಂದಿನ ತಿಂಗಳು...?

ಸಂಜೆಯ ಆಕಾಶದಲ್ಲಿ ಬುಧ ಗ್ರಹ ಪಶ್ಚಿಮ ದಿಗಂತದ ಅಂಚಿಗೆ ಕಾಣುವುದು. ದಿನ ಕಳೆದಂತೆ ದಿಗಂತದ ಅಂಚಿಗೆ ಸರಿಯುತ್ತದೆ. ಹಾಗಾಗಿ ಸಂಜೆ ಯಾವ ಗ್ರಹವೂ ಇಲ್ಲದಂತಾಗುತ್ತದೆ. ಈ ನಷ್ಟವನ್ನು ತುಂಬಿಕೊಡಲು ಶನಿ ಗ್ರಹ ಪೂರ್ವದಂಚಿನಲ್ಲಿ ಕಾಣಿಸಿಕೊಳ್ಳುತ್ತದೆ. ಈಗ ಉಂಗುರಗಳ ಓರೆಕೋನ ಅನುಕೂಲಕರವಾಗಿದ್ದು ದೂರದರ್ಶಕ ಇರುವವರಿಗೆ ಒಳ್ಳೆಯ ಅವಕಾಶವಾಗುತ್ತದೆ.

ಶುಕ್ರ ಬೆಳಗಿನ ಜಾವ ಕಾಣುತ್ತದೆ. ತಿಂಗಳ ಕೊನೆಯ ದಿನಗಳಲ್ಲಿ ಬಹಳ ಸೂಕ್ಷ್ಮವಾಗಿ ಗಮನಿಸಿದರೆ ಇನ್ನೂ ಮೂರು ಗ್ರಹಗಳನ್ನು ಕಾಣಬಹುದು. ಗುರು, ಬುಧ ಮತ್ತು ಮಂಗಳ ಇವೇ ಆ ಗ್ರಹಗಳು. ಮುಂಜಾವಿನಲ್ಲಿ ನಾಲ್ಕು ಗ್ರಹಗಳನ್ನು ಹೀಗೆ ಒಟ್ಟಿಗೇ ನೋಡುವ ಅವಕಾಶ ಇದೆ. ಛಾಯಾಗ್ರಹಣಕ್ಕೂ ಇದು ಸೂಕ್ತ. ೩೦ರಂದು ಚಂದ್ರನೂ ಈ ಗುಂಪಿಗೆ ಸೇರಿ ಮತ್ತೆ ಫಲಜ್ಯೋತಿಷಿಗಳ ಗಮನ ಸೆಳೆಯಬಹುದು. ಎಚ್ಚರ! ಇದೇನೂ ಹೊಸ ವಿಷಯವಲ್ಲ. ಪ್ರಳಯ ಭೂಕಂಪ ಇತ್ಯಾದಿಗಳಿಗೂ ಗ್ರಹಗಳು ಒಟ್ಟಿಗೆ ಸೇರುವ ಈ ಗ್ರೂಪ್ ಫೋಟೋ ಅವಕಾಶಕ್ಕೂ ತಾಳೆ ಮಾಡದಿರಿ. ಕ್ಯಾಮೆರಾ ಇದ್ದವರು ಆನಂದದಿಂದ ಕ್ಲಿಕ್ಕಿಸಿ, ಅಷ್ಟೇ.

ಮಂಗಳ ಮತ್ತು ಬುಧ ಎರಡೂ ಕೆಂಪಗೇ ಕಾಣುತ್ತವೆ. ಆದ್ದರಿಂದ ಅವುಗಳನ್ನು ಗುರುತಿಸುವುದು ಒಂದು ಸವಾಲೇ ಆಗಬಹುದು. ಪ್ರತಿ ಮುಂಜಾವು ಈ ಚುಕ್ಕೆಗಳನ್ನು ಗಮನಿಸುತ್ತಿರಿ. ಒಂದು ದಿನದಿನಕ್ಕೆ ಮೇಲೇರಿ ಮೇ ತಿಂಗಳ ಮೊದಲ ವಾರದ ನಂತರ ಕೆಳಗಿಳಿಯತೊಡಗುತ್ತದೆ. ಇನ್ನೊಂದು ತಟಸ್ಥವಾಗಿದೆಯೇನೋ ಎನ್ನಿಸುತ್ತದೆ. ಬೇಗ ಓಡುವ ಚುಕ್ಕೆಯೇ ಬುಧ. ಇಂಗ್ಲಿಷ್‌ನಲ್ಲಿ ಅದರ ಹೆಸರು ಮರ್ಕ್ಯುರಿ ಅಂದರೆ ಬೇಗ ಓಡಿ ಸಂದೇಶ ಮುಟ್ಟಿಸುವ ದೂತ. ಮರ್ಕ್ಯುರಿ ಎಂದರೆ ಪಾದರಸವೂ ಆಗುತ್ತದೆ. ಅದೂ ಪುಟುಪುಟನೆ ಓಡುವ ವಸ್ತುವೇ.

ಇದಕ್ಕೆ ತದ್ವಿರುದ್ಧವಾಗಿ ನಿಧಾನವಾಗಿ ಚಲಿಸುವ ಗ್ರಹ ಶನಿ. ಅದು ಸಂಜೆಯ ಆಕಾಶದಲ್ಲಿ ನಿಧಾನವಾಗಿ (ದಿನದಿಂದ ದಿನಕ್ಕೆ) ಮೇಲೇರುವುದನ್ನು ಗಮನಿಸಿ. ಚಿತ್ರಾ ನಕ್ಷತ್ರದಿಂದ ಅದು ಒಂದೇ ಅಂತರದಲ್ಲಿ ಕಾಣುತ್ತದೆ ಎಂಬುದನ್ನು ಗಮನಿಸಿ.

ಉ

ಧ್ರುವ
ಸಪ್ತರ್ಷಿ ಮಂಡಲ
ಪಾರ್ಥ
ವಿಜಯಸಾರಥಿ
ಕೃಷ್ಣವೇಣಿ
ವೃಷಭ
ಸಿಂಹ
ಮಿಥುನ
ಪೂ
ಪ
ಶನಿ
ಮಹಾವ್ಯಾಧ
ಚಿತ್ರಾ
ಹಸ್ತ
ಲುಬ್ಧಕ
ಅಜಗರ
ಮಹಾಶ್ವಾನ
ವೈತರಣೀ
ನೌಕಾಪಟ
ಆಗಸ್ತ್ಯ

ದ

ಯುತಿ ಮತ್ತು ವಿಯುತಿಗಳನ್ನು ಅರ್ಥಮಾಡಿಕೊಳ್ಳಲು ಈ ತಿಂಗಳಲ್ಲಿ ಒಳ್ಳೆಯ ಅವಕಾಶವಿದೆ. ಯುತಿ ಅಂದರೆ ಸೂರ್ಯನ ನೇರಕ್ಕೆ ಗ್ರಹದ ಸ್ಥಾನ. ಸೂರ್ಯೋದಯದೊಡನೆ ಗ್ರಹದ ಉದಯಾಸ್ತಗಳು. ೬ರಂದು ಗುರುಗ್ರಹದ ಯುತಿ. ಇದರ ತಾತ್ಪರ್ಯ ಎಂದರೆ ಆಗ ಈ ಗ್ರಹ ಕಾಣದು ಎಂದು. ೯ರಂದು ಬುಧ ಗ್ರಹದ ಯುತಿ. ಶನಿಗ್ರಹದ ವಿಯುತಿ ೪ರಂದು ಅಂದರೆ ಸೂರ್ಯಾಸ್ತವಾಗುವಾಗ ಇದರ ಉದಯ. ಆದ್ದರಿಂದ ಈ ಗ್ರಹ ರಾತ್ರಿ ಇಡೀ ನೋಡಲು ಸಿಗುತ್ತದೆ.

ಸಂಜೆಯ ಆಕಾಶದಲ್ಲಿ ಕಾಣುವುದು ಮಹಾವ್ಯಾಧ ಅಥವಾ ಒರ್ಗಯನ್. ಇದರ ಸ್ವಲ್ಪ ಉತ್ತರಕ್ಕಿರುವ

ಡಾ|| ಬಿ. ಎಸ್. ಶೈಲಜಾ



೩೦ರ ಬೆಳಗಿನ ಜಾವ ಚಂದ್ರ ಮತ್ತು ನಾಲ್ಕು ಗ್ರಹಗಳು

ಚೌಕಾಕಾರವೇ ಮಿಥುನ; ಇದರ ಎರಡು ಪ್ರಖರ ನಕ್ಷತ್ರಗಳು ಪುನರ್ವಸು. ಶ್ರೀರಾಮ ನವಮಿಯಂದು ಸಂಗೀತ ಆಲಿಸುತ್ತಾ ಕುಳಿತು ಕತ್ತೆತ್ತಿ ನೋಡಿ. ಚಂದ್ರ ಈ ಪುನರ್ವಸುವಿನ ಪಕ್ಕದಲ್ಲಿಯೇ ಕಾಣುತ್ತದೆ. ಮಿಥುನದ ಮುಂಚಿನ ರಾಶಿ ವೃಷಭ. ಇದನ್ನು ಗುರುತಿಸಲು ಕೃತ್ತಿಕಾ ಪುಂಜದ ಸಹಾಯ ಪಡೆಯಬಹುದು. ನೆತ್ತಿಯಿಂದ ಸ್ವಲ್ಪ ಪಕ್ಕಕ್ಕೆ ಕಾಣುತ್ತದೆ. ಇದನ್ನು ಗುರುತಿಸಲು ೭ರ ಸಂಜೆ ಚಂದ್ರನನ್ನು ನೋಡಿ. ಗುಚ್ಛದ ಪಕ್ಕದಲ್ಲಿಯೇ ಕಾಣುತ್ತದೆ.

ಚಂದ್ರನಿಲ್ಲದಾಗ ಆಕಾಶಗಂಗೆಯ ಸೊಬಗು ಆಸ್ವಾದಿಸಲು ದಕ್ಷಿಣಕ್ಕೆ ದೃಷ್ಟಿಹರಿಸಿ. ಮಹಾವ್ಯಾಧನ ಪಾದಗಳ ಕೆಳಗೆ ನಕ್ಷತ್ರಗಳ ದಟ್ಟಣೆ ಹೆಚ್ಚು ಎಂದು ಮೇಲ್ನೋಟಕ್ಕೆ ತಿಳಿಯುತ್ತದೆ. ಲುಬ್ಧಕ (ಸಿರಿಯಸ್), ಅಗಸ್ತ್ಯ (ಕೆನೋಪಸ್) ಮತ್ತು ಅವುಗಳ ಆಸುಪಾಸಿನ ಪುಂಜಗಳಲ್ಲಿ ನೆಬ್ಯುಲಾಗಳೂ ಸಾಕಷ್ಟಿವೆ.

**ಖಗೋಳ ದಿನಚರಿ**

೨. ಚಂದ್ರ - ಭೂಮಿ ನಡುವೆ ಗರಿಷ್ಠ ದೂರ; ಮಂಗಳ - ಚಂದ್ರ ಜೋಡಿ
೩. ಅಮಾವಾಸ್ಯೆ ೨೦:೦೨ ಕ್ಕೆ
೩. ಶನಿಗ್ರಹದ ವಿಯುತಿ (ಸೂರ್ಯನಿಗೆ ವಿರುದ್ಧ ದಿಕ್ಕಿನಲ್ಲಿ ಶನಿ; ಸೂರ್ಯಾಸ್ತಕ್ಕೆ ಶನಿಯ ಉದಯ)
೪. ಬುಧ - ಗುರು - ಚಂದ್ರ ಜೋಡಿ (ಕಾಣುವುದು ಕಷ್ಟ)
೬. ಗುರು ಗ್ರಹದ ಯುತಿ (ಸೂರ್ಯನೊಡನೆಯೇ ಗುರುಗ್ರಹದ ಉದಯಾಸ್ತ)
೯. ಬುಧ ಗ್ರಹದ ಯುತಿ
೧೧. ಚಾಂದ್ರಮಾಸದ ಮೊದಲ ಪಾದ
೧೭. ಚಂದ್ರ - ಭೂಮಿ ನಡುವೆ ಕನಿಷ್ಠ ದೂರ ೧೧:೨೯ಕ್ಕೆ;
ಚಿತ್ತಾ - ಶನಿ - ಚಂದ್ರ ಜೋಡಿ (ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)
೧೮. ಹುಣ್ಣಿಮೆ ೦೮:೧೪ ಕ್ಕೆ
೧೯. ಬುಧ - ಮಂಗಳ ಜೋಡಿ
೨೫. ಚಾಂದ್ರಮಾಸದ ಕೊನೆಯ ಪಾದ
೨೯. ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೩೧. ಶುಕ್ರ - ಚಂದ್ರ ಜೋಡಿ (ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಮೇ ೧ ಬುಧ, ಮಂಗಳ, ಗುರು ಚಂದ್ರ ಗುಂಪುಗೂಡುತ್ತವೆ. (ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

(೪೨ನೇ ಪುಟದಿಂದ) **ವಿಕೃತಿ ಸಂವತ್ಸರದ ವಿಕೃತಗಳು**

ಘೋಷಿಸುವ ನೈತಿಕ ಹಕ್ಕು ಇತರೆ ಹಕ್ಕುಗಳೊಡನೆ ದೊರೆಯುತ್ತದೆ. ಆದರೆ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳೇ ಕಟಕಟೆಯಲ್ಲಿ ನಿಲ್ಲುವಂತಾದರೆ ಇಂದಿನ ವ್ಯವಸ್ಥೆಯ ನೈತಿಕ ಅಧಃಪತನದ ಆಳದ ಅರಿವಾದೀತು. ಇದು ನ್ಯಾಯಾಂಗದ ಮೇಲೆ ಆವರಿಸಿರುವ ಕರಾಳ ಛಾಯೆ. ಸರ್ವೋಚ್ಚ ನ್ಯಾಯಾಲಯ, ಉಚ್ಚ ನ್ಯಾಯಾಲಯಗಳು ಮತ್ತು ಅಧೀನ ನ್ಯಾಯಾಲಯಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಹಲವಾರು ಪ್ರಾಮಾಣಿಕ ನ್ಯಾಯಾಧೀಶರಿದ್ದಾರೆ. ಈ ಜನರು ನಿರ್ಭೀತರಾದಲ್ಲಿ ಮಾತ್ರ ಬದಲಾವಣೆ ಸಾಧ್ಯ. ನ್ಯಾಯಾಂಗದಲ್ಲಿನ ಅನೇಕ ಭ್ರಷ್ಟಾಚಾರದ ಪ್ರಕರಣಗಳಿಂದಾಗಿ ಈ ಪ್ರಾಮಾಣಿಕ ನ್ಯಾಯಾಧೀಶರೂ ಕೂಡ ಈಚಲ ಮರದ ಕೆಳಗೆ ಮಜ್ಜಿಗೆ ಕುಡಿಯುತ್ತಿರುವ ಸ್ಥಾನ ಸೇರಿದ್ದಾರೆ. ಇದೊಂದು ಭಯಾನಕ ಬೆಳವಣಿಗೆ.

**ನ್ಯಾಯಾಂಗದ ಅಧಿಕಾರ ದಾಹ**

ಸರ್ವೋಚ್ಚ ನ್ಯಾಯಾಲಯ ತನ್ನ ಅನೇಕ ತೀರ್ಪುಗಳ ಮೂಲಕ ಅನೇಕ ಅಧಿಕಾರಗಳನ್ನು ತನ್ನದಾಗಿಸಿಕೊಂಡಿದೆ. ಅದರಲ್ಲಿ ಉಚ್ಚ ನ್ಯಾಯಾಲಯಗಳ ಮತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರ ನೇಮಕಾತಿಯ ಅಧಿಕಾರವೂ ಒಂದು. ಮಾಜಿ ಲೋಕಸಭಾಧ್ಯಕ್ಷ ಸೋಮನಾಥ ಚಟರ್ಜಿ ಈ ಬೆಳವಣಿಗೆಯನ್ನು ಪ್ರಜಾಪ್ರಭುತ್ವಕ್ಕೆ ಮಾರಕವೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದರು. ಅಮೆರಿಕಾದ ನ್ಯಾಯಾಂಗ ವ್ಯವಸ್ಥೆಯ ಬಗ್ಗೆ ವ್ಯಾಖ್ಯಾನಿಸುತ್ತಾ ಜೋರ್ಡಿ ಥಾಮಸ್ ಜೆಫರ್‌ಸನ್ ಎಂಬುವರು ನ್ಯಾಯಾಧೀಶರು ಎರಡು ಬಗೆಯವರು – ಮೊದಲನೇ ಬಗೆಯ ನ್ಯಾಯಾಧೀಶರು ಜನಗಳ ಬಗ್ಗೆ ಹೆದರಿಕೆ ಮತ್ತು ಅಪನಂಬಿಕೆಯನ್ನು ಹೊಂದಿದವರು. ಇವರು ಎಲ್ಲ ಅಧಿಕಾರ ತಮ್ಮ ಕೈಗೆ ತೆಗೆದುಕೊಳ್ಳಬಯಸುವವರು. ಎರಡನೇ ಬಗೆಯವರು ಜನಗಳ ಜೊತೆ ತಮ್ಮನ್ನು ಗುರುತಿಸಿಕೊಳ್ಳುವವರು, ಅವರ ಬಗ್ಗೆ ಭರವಸೆ ಹೊಂದಿರುವವರು ಮತ್ತು ಅವರ ಪ್ರಾಮಾಣಿಕತೆಯ ಬಗ್ಗೆ ನಂಬಿಕೆಉಳ್ಳವರು. ಭಾರತದ ನ್ಯಾಯಾಧೀಶರುಗಳೂ ಕೂಡ ಇದೇ ಬಗೆಯವರು. ಆದರೆ ಮೊದಲನೇ ಬಗೆಯ ನ್ಯಾಯಾಧೀಶರ ಸಂಖ್ಯೆ ಹೆಚ್ಚುತ್ತಿದೆ. ಇದು ನಿಜಕ್ಕೂ ಆತಂಕಕಾರಿ ಬೆಳವಣಿಗೆ. ಇಷ್ಟೊಂದು ಅಧಿಕಾರ ಪಡೆದಿರುವ ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯಗಳ ನ್ಯಾಯಾಧೀಶರ ನಡವಳಿಕೆಗಳ ಬಗ್ಗೆ ಯಾವ ನೀತಿಸಂಹಿತೆಗಳೂ ಇಲ್ಲ. ಹಲವಾರು ನ್ಯಾಯಾಧೀಶರ ನಡವಳಿಕೆಗಳು ಶಿಕ್ಷಾರ್ಹವಾಗಿದ್ದರೂ ಅದರ ತನಿಖೆ ಮತ್ತು ನೀಡಬಹುದಾದ ಶಿಕ್ಷೆಯ ಬಗ್ಗೆ ಯಾವುದೇ ಕಾನೂನಿಲ್ಲ. ಸಂವಿಧಾನದಡಿಯಲ್ಲಿರುವ ಅಧಿಕಾರವನ್ನು ಪಾರ್ಲಿಮೆಂಟ್ ಯಾವ ನ್ಯಾಯಾಧೀಶರ ಮೇಲೂ ಚಲಾಯಿಸಿಲ್ಲ. ಹೀಗಾಗಿ ಈ ನ್ಯಾಯಾಧೀಶರ ಮೇಲೆ ಯಾವ ಕಡಿವಾಣವೂ ಇಲ್ಲದಂತಾಗಿದೆ. ದಿನಕರನ್, ಬಾಲಕೃಷ್ಣನ್ ಅಂತಹವರ ಸಂಖ್ಯೆ ಹೆಚ್ಚುತ್ತಿದೆ.

**ನೀತಿಬೋಧೆ - ಪರರಿಗೆ**

ಇತ್ತೀಚೆಗೆ ಮುಖ್ಯ ವಿಜಿಲೆನ್ಸ್ ಕಮಿಷನರ್ ಪಿ. ಜೆ. ಥಾಮಸ್‌ನ ನೇಮಕಾತಿಯನ್ನು ರದ್ದುಗೊಳಿಸುತ್ತಾ ಸರ್ವೋಚ್ಚ ನ್ಯಾಯಾಲಯ ತಾನು ಒಂದು ಸಂಸ್ಥೆಯ ಪ್ರಾಮಾಣಿಕತೆ ಬಗ್ಗೆ ಕಾಳಜಿ ಹೊಂದಿದೆಯೆಂದು ತಿಳಿಸಿದೆ. ಈ ನ್ಯಾಯ-ನೀತಿ ಸರ್ವೋಚ್ಚ ನ್ಯಾಯಾಲಯವೆಂಬ ಸಂಸ್ಥೆಗೂ ಅನ್ವಯಿಸಬೇಕೆಂದು ತಿಳಿದಲ್ಲಿ ಮತ್ತು ಅಳವಡಿಸಿಕೊಂಡಲ್ಲಿ ನ್ಯಾಯಾಂಗದ ವರ್ಚಸ್ಸು ಉಳಿಯಬಹುದು.

**ಮುರಳಿಧರ್**
ವಕೀಲರು, ನಂ. ೮೩, ಮಲ್ಲೇಶರಂ ವೃತ್ತ
ಬೆಂಗಳೂರು - ೫೬೦ ೦೦೩




## ವಿಕಿಲೀಕ್ಸ್ : ಮನಮೋಹನ ಸಿಂಗ್ ಅಧಿಕಾರ ತ್ಯಜಿಸಲಿ

ನಮ್ಮ ದೇಶದ ಸಾರ್ವಭೌಮತ್ವಕ್ಕೆ ಚ್ಯುತಿ ಉಂಟಾಗುವಂತೆ ಮಾಡಿ, ಸ್ವತ್ರಂತ್ರ ವಿದೇಶಾಂಗ ನೀತಿಯನ್ನು ಅಮೆರಿಕದ ಅಡಿದಾವರೆಗಳಲ್ಲಿ ಇರಿಸುವುದೇ ಡಾ॥ ಮನಮೋಹನ್ ಸಿಂಗ್ ಮುಂದಿರುವ ಗುರಿ ಎಂದು ಯುಪಿಎ ಸರಕಾರದ ಪ್ರಧಾನಿ ಪಟ್ಟ ವಹಿಸಿಕೊಂಡಾಗಿನ ಮೊದಲಲ್ಲೇ ಈ ಅಂಕಣದ ಬರಹಗಳಲ್ಲಿ ಎಚ್ಚರಿಸಿದ್ದೆವು. ಮನಮೋಹನ ಸಿಂಗ್, ಆಹ್ಲುವಾಲಿಯ, ಚಿದಂಬರಂ ಈ ಮೂವರ ಹಿನ್ನೆಲೆಯನ್ನು ಆಧರಿಸಿ ಹಾಗೆ ಹೇಳಿದ್ದೆವು. ಮನಮೋಹನ ಸಿಂಗ್‌ರ ಪ್ರತಿಯೊಂದು ನಿಲುವೂ ಅಮೆರಿಕದ ಯಜಮಾನರನ್ನು ಸುಪ್ರೀತಗೊಳಿಸುವುದಾಗಿತ್ತು. ಇರಾನಿನ ನ್ಯೂಕ್ಲಿಯರ್ ವಿಷಯದಲ್ಲಾಗಲಿ, ಪ್ಯಾಲಸ್ಟೈನ್ ವಿಚಾರದಲ್ಲಾಗಲೀ ಇರಾಕಿನ ಮೇಲೆ ಅಮೆರಿಕ ನಡೆಸಿದ ದುರಾಕ್ರಮಣದ ವಿಷಯದಲ್ಲಾಗಲಿ ಮನಮೋಹನ ಸಿಂಗ್ ತಳೆದ ಧೋರಣೆಗಳೆಲ್ಲ ಭಾರತದ ಹಿಂದಿನ ಸ್ವತಂತ್ರ ನೀತಿಯನ್ನು ಗಾಳಿಗೆ ತೂರಿ ಅಮೆರಿಕದ ಆಡಳಿತಗಾರರನ್ನು ಓಲೈಸುವುದಾಗಿತ್ತು. ನ್ಯೂಕ್ಲಿಯರ್ ಕ್ಷೇತ್ರದಲ್ಲಿ ಅಮೆರಿಕದೊಂದಿಗೆ ಒಪ್ಪಂದಕ್ಕೆ ತೀವ್ರವಾದ ವಿರೋಧವನ್ನು ಲೆಕ್ಕಿಸದೆ ಯುದ್ಧ ಪಿಪಾಸು ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಒಡ್ಡಿದ ಆಮಿಷಗಳಿಗೆ ಶರಣಾದದ್ದು ಮನಮೋಹನ ಸಿಂಗ್‌ರ ಸಾಧನೆ. ಅಮೆರಿಕದ ಜೊತೆ ಎಲ್ಲ ರೀತಿಯಲ್ಲಿಯೂ ವ್ಯೂಹಾತ್ಮಕ ಮೈತ್ರಿ ಬೆಸೆಯುವ, ಸ್ವತಂತ್ರ ವಿದೇಶೀ ನೀತಿಗೆ ತಿಲಾಂಜಲಿ ಇತ್ತು. ಅಮೆರಿಕದ ಬಾಲ ಬಡುಕನಾಗಿಸುವ ಪ್ರಧಾನಿ ಮನಮೋಹನ ಸಿಂಗ್‌ರ ಧೋರಣೆ ಪ್ರತಿಭಟಿಸಿ ಎಡಪಕ್ಷಗಳು ಸರಕಾರಕ್ಕೆ ಹೊರಗಿನಿಂದ ನೀಡುತ್ತಿದ್ದ ಬೆಂಬಲವನ್ನು ಹಿಂತೆಗೆದುಕೊಂಡವು. ಆಗ ಯುಪಿಎ ಪ್ರಮುಖ ಪಕ್ಷ ಕಾಂಗ್ರೆಸ್ ಹಾಗೂ ಒಪ್ಪಂದದ ಪರವಾಗಿದ್ದ ಪಕ್ಷಗಳವರು ಎಡಪಕ್ಷಗಳವರಿಗೆ ಅಮೆರಿಕ ಎಂದರೆ ಕಾಮಾಲೆ ಕಣ್ಣು ಎಂದು ಮೂದಲಿಸಿದ್ದನ್ನು ನೆನಪು ಮಾಡಿಕೊಳ್ಳಬಹುದು.

ವಿಶ್ವವೀಕ್ಷಣೆ

ಇಷ್ಟೆಲ್ಲ ಹಿನ್ನೆಲೆ ಏಕೆ ಎಂದು ಯಾರಿಗಾದರೂ ಅನಿಸಬಹುದು. ಆದರೆ ಆಗ ಹೇಳಿದ್ದೆಲ್ಲ ಎಷ್ಟು ಸತ್ಯ ಎನ್ನುವುದು ಸಾಬೀತಾಗಿದೆ ಈಗ. ಜೂಲಿಯನ್ ಅಸಾಂಜ್ ಪ್ರಧಾನ ಸಂಪಾದಕನಾಗಿರುವ 'ವಿಕಿಲೀಕ್ಸ್' ಬಹಿರಂಗಪಡಿಸಿರುವ ಸಾವಿರಾರು ಪುಟಗಳ ರಹಸ್ಯ ಸಂದೇಶಗಳು ಜಗತ್ತನ್ನೇ ತಲ್ಲಣಗೊಳಿಸಿವೆ. ಇದೀಗ ಪ್ರಕಟವಾಗಿರುವ, ಪ್ರಕಟವಾಗುತ್ತಿರುವ ಭಾರತಕ್ಕೆ ಸಂಬಂಧಪಟ್ಟ ದಾಖಲೆಗಳು ಮನಮೋಹನ ಸಿಂಗ್ ಮುಖಕ್ಕೆ ಮಸಿ ಬಳಿದಿವೆ. ವಿದೇಶಗಳಲ್ಲಿರುವ ಅಮೆರಿಕದ ರಾಯಭಾರಿ ಕಚೇರಿಗಳು ಸಂಬಂಧಪಟ್ಟ ದೇಶಗಳ ಮೇಲೆ ಯಾವ ರೀತಿ ನಿಗಾ ಇರಿಸಿರುತ್ತವೆ, ಯಾವ ರೀತಿ ಹಸ್ತಕ್ಷೇಪ ಮಾಡುತ್ತವೆ, ಅಧಿಕಾರಿಗಳು, ಸಚಿವರುಗಳ ಪೈಕಿ ತಮಗೆ ಬೇಕಾದವರನ್ನು ಹೇಗೆ ಉಪಯೋಗಿಸಿಕೊಳ್ಳುತ್ತವೆ ಎನ್ನುವುದನ್ನು ವಿಕಿಲೀಕ್ಸ್ ಬಹಿರಂಗಪಡಿಸಿರುವ ಕೇಬಲ್‌ಗಳು ಹೊರಗೆಡಹಿವೆ. ಆಧುನಿಕ ತಂತ್ರಜ್ಞಾನದ ಈ ಕಾಲದಲ್ಲಿ ಯಾವುದನ್ನೂ ಹೆಚ್ಚು ಕಾಲ ರಹಸ್ಯವಾಗಿರಿಸಲು ಸಾಧ್ಯವಿಲ್ಲ. ಹಾಗಾಗಿ ಅಮೆರಿಕ ಜೂಲಿಯನ್ ಅಸಾಂಜ್‌ಗೆ ಸಾಕಷ್ಟು ಕಿರುಕುಳ ನೀಡುತ್ತಿದೆ. ಸ್ವೀಡಿಷ್ ಸರಕಾರ ಅಮೆರಿಕದ ಒತ್ತಡಕ್ಕೆ ಮಣಿದು ಈತನ ಮೇಲೆ ಮೊಕದ್ದಮೆ ದಾಖಲಿಸಿದೆ. ಎಲ್ಲೂ ಆಶ್ರಯ ದೊರೆಯದಂತೆ ಮಾಡಲು ಅಮೆರಿಕ ಪ್ರಯತ್ನಿಸುತ್ತಿದೆ. ಇದು ಬೇರೆಯೇ ಕತೆ. ವಿಷಯಕ್ಕೆ ಬರೋಣ.

ಅನೇಕ ದೇಶಗಳಲ್ಲಿ ವಿದೇಶಿ ನೀತಿ ರೂಪುಗೊಳ್ಳುವುದು, ಅಮೆರಿಕ ಪರ ಧೋರಣೆಗಳು ರೂಪುಗೊಳ್ಳುವುದು ಅಮೆರಿಕದ ರಾಯಭಾರಿ ಕಚೇರಿಗಳಲ್ಲಿ. ಮನಮೋಹನ ಸಿಂಗ್ ನೇತೃತ್ವದ ಯುಪಿಎ ಸರಕಾರ ಇದಕ್ಕೆ ಹೊರತೇನಾಗಿಲ್ಲ. ನಮ್ಮ ದೇಶದ ವಿದೇಶಾಂಗ ಕಚೇರಿ ಒಂದು ರೀತಿಯಲ್ಲಿ ಅಮೆರಿಕದ ಹಿತರಕ್ಷಣೆಯ ಒಂದು ಭಾಗವೇ ಆಗಿಬಿಟ್ಟಿದೆ. ಸಚಿವರುಗಳು, ಅಧಿಕಾರಿಗಳು, ಪಾರ್ಲಿಮೆಂಟ್ ಸದಸ್ಯರುಗಳು, ಇತರರು ಅಮೆರಿಕದ ರಾಯಭಾರಿ ಕಚೇರಿಗೆ ಹೋಗಿಬರುವ ಪರಿಪಾಠ ಹೊಸದೇನಲ್ಲ. ರಾಯಭಾರಿಯನ್ನು, ಅಧಿಕಾರಿಗಳನ್ನು ಭೇಟಿಯಾದಾಗ ಲೋಕಾಭಿರಾಮವಾಗಿ ಮಾತಾಡಿ ಅನೇಕ ವಿಷಯಗಳನ್ನು ಚರ್ಚಿಸುತ್ತಾರೆ.

ಅಮೆರಿಕದ ಮರ್ಜಿಯನ್ನು, ಅಪೇಕ್ಷೆಗಳನ್ನು ಅರಿತುಕೊಂಡು ದೇಶ ಅನುಸರಿಸಬೇಕಾದ ಧೋರಣೆಗಳನ್ನು ರೂಪಿಸಲು ಪ್ರಭಾವ ಬೀರುತ್ತಾರೆ. ಮನಮೋಹನ ಸಿಂಗ್ ಸರಕಾರ ಮೊದಲ ಅವಧಿಯಲ್ಲೇ ತನ್ನ ಅಮೆರಿಕ ಪರ ನಿಲುವನ್ನು ತೋರ್ಪಡಿಸಿಕೊಂಡಿತು. ಇರಾನಿನ ನ್ಯೂಕ್ಲಿಯರ್ ಅಪೇಕ್ಷೆಯ ವಿಚಾರದಲ್ಲಿ ಅಮೆರಿಕದೊಂದಿಗೆ ಕೈಜೋಡಿಸಿದ್ದು, ಅಂತರರಾಷ್ಟ್ರೀಯ ಪರಮಾಣು ಶಕ್ತಿ ಸಂಸ್ಥೆಯ ಸಭೆಯಲ್ಲಿ ಅಮೆರಿಕದ ಜೊತೆ ಮತ ನೀಡಿದ್ದು ಮನಮೋಹನ ಸಿಂಗ್ ಯಾವ ದಿಶೆಯಲ್ಲಿ ಹೊರಟಿದ್ದಾರೆ ಎನ್ನುವುದನ್ನು ತೋರಿಸಿತು. ಇರಾನ್-ಪಾಕಿಸ್ತಾನ -ಭಾರತ ಅನಿಲ ಪೈಪ್‌ಲೈನ್ ವಿಚಾರದಲ್ಲಿ ಅಮೆರಿಕದ ಒತ್ತಡಗಳಿಗೆ ಮಣಿದು ಯೋಜನೆಯಿಂದ ದೂರ ಸರಿದದ್ದು ಮನಮೋಹನ ಸಿಂಗ್‌ರ ಸೋಗಲಾಡಿತನಕ್ಕೆ ಸಾಕ್ಷಿಯಾಯಿತು.

ಅಮೆರಿಕದ ರಾಯಭಾರಿ ಕಚೇರಿ ಸಂಪುಟ ರಚನೆ, ಪುನಾರಚನೆ ಮೊದಲಾದ ವಿಷಯಗಳಲ್ಲಿ ಎಷ್ಟು ಆಸಕ್ತಿ ವಹಿಸುತ್ತದೆ, ಏನು ಪ್ರಭಾವ ಬೀರುತ್ತದೆ ಎನ್ನುವುದಕ್ಕೆ ಒಂದೆರಡು ಉದಾಹರಣೆ. ಭಾರತ-ಇರಾನ್-ಪಾಕಿಸ್ತಾನ ಅನಿಲ ಪೈಪ್ ಯೋಜನೆಯನ್ನು ಬಲವಾಗಿ ಪ್ರತಿಪಾದಿಸುತ್ತಿದ್ದವರು ಇಂಧನ ಸಚಿವರಾಗಿದ್ದ ಮಣಿಶಂಕರ ಐಯ್ಯರ್. ಅಮೆರಿಕದ ದೃಷ್ಟಿಯಲ್ಲಿ ಈತ ಶಂಕಿತ ವ್ಯಕ್ತಿ. ೨೦೦೬ರ ಜನವರಿಯಲ್ಲಿ ಸಂಪುಟದ ಪುನಾರಚನೆಯಾದಾಗ ಮನಮೋಹನ ಸಿಂಗ್ ಒತ್ತಡಕ್ಕೆ ಮಣಿದು ಮಣಿಶಂಕರ ಐಯ್ಯರ್ ಇವರನ್ನು ಸಂಪುಟದಿಂದ ತೆಗೆದುಹಾಕಿ ಅಮೆರಿಕದ ಪರ ಇದ್ದ ಮುರಳಿ ದೇವರ ಇವರನ್ನು ಇಂಧನ ಸಚಿವರಾಗಿ ನೇಮಕ ಮಾಡಿದರು. ಇದರಿಂದ ತೃಪ್ತರಾದ ಅಮೆರಿಕದ ರಾಯಭಾರಿ ಡೇವಿಡ್ ಮುಲ್‌ಫೋರ್ಡ್ ಜನವರಿ ೩೦, ೨೦೦೬ರಲ್ಲಿ ವಾಷಿಂಗ್ಟನ್‌ಗೆ ಕಳಿಸಿದ ರಹಸ್ಯ ಸಂದೇಶ (೫೧೦೮೮)ದಲ್ಲಿ ವಿವಾದಿತ, ಇರಾನಿನ ಪೈಪ್‌ಲೈನಿನ ಪ್ರತಿಪಾದಕ ಮಣಿಶಂಕರ ಐಯ್ಯರ್‌ರನ್ನು ಕೈಬಿಟ್ಟು ಅಮೆರಿಕ ಪರ ಮುರಳಿ ದೇವರಾರ ನೇಮಕವನ್ನು ಸ್ವಾಗತಿಸಿ ಅವರು "ಇದು ಭಾರತ-ಅಮೆರಿಕ ಸಂಬಂಧಗಳನ್ನು ವೇಗವಾಗಿ ವರ್ಧಿಸುವ ನಿರ್ಧಾರವನ್ನು ಖಚಿತಗೊಳಿಸಿದೆ" ಎಂದು ಹೇಳಿದ್ದಾರೆ. ಸಂಪುಟ ಪುನಾರಚನೆಯಲ್ಲಿ ಅಮೆರಿಕ ಪರವಾಗಿರುವ ಸಚಿವರ ಸಂಖ್ಯೆ ಗಣನೀಯವಾಗಿ ಹೆಚ್ಚಿರುವುದನ್ನು ಗುರ್ತಿಸಿರುವ ಮುಲ್‌ಫೋರ್ಡ್ ಎಡಪಕ್ಷಗಳಿಗಾಗಿರುವ ಅಸಮಾಧಾನವನ್ನು ಗುರ್ತಿಸಿದ್ದಾರೆ. ಪ್ರಧಾನಿ ಮನಮೋಹನ ಸಿಂಗ್ ವಿದೇಶಾಂಗ ಖಾತೆಯನ್ನು ತಾವೇ ಉಳಿಸಿಕೊಂಡಿದ್ದರ ಬಗ್ಗೆ ಸಂತಸ ವ್ಯಕ್ತಗೊಳಿಸಿದ್ದಾರೆ. ಮುಂಬೈ ದಾಳಿಯ (೨೬/೧೧) ಸಂಬಂಧದಲ್ಲಿ ಪಾಕಿಸ್ತಾನದೊಂದಿಗೆ ಮಾಹಿತಿಯನ್ನು ಹಂಚಿಕೊಳ್ಳುವ ವಿಚಾರದಲ್ಲೂ ಅಮೆರಿಕದ ಹಸ್ತಕ್ಷೇಪವನ್ನು ವಿಕಿಲೀಕ್ಸ್ ಕೇಬಲ್‌ಗಳು ಬಹಿರಂಗಪಡಿಸಿವೆ. ಭಾರತದ ಭದ್ರತಾ ಸಲಹೆಗಾರ ಎಂ. ಕೆ. ನಾರಾಯಣನ್ ೨೦೦೯ರ ಆಗಸ್ಟ್ ತಿಂಗಳಲ್ಲಿ ಅಮೆರಿಕದ ರಾಯಭಾರಿ ತಿಮೋತಿ ರೋಮರ್ ಇವರನ್ನು ಭೇಟಿಮಾಡಿ ಮನಮೋಹನ ಸಿಂಗ್‌ರೊಂದಿಗಿನ ಭಿನ್ನಾಭಿಪ್ರಾಯವನ್ನು ಹಂಚಿಕೊಂಡಿದ್ದು ನಾಚಿಕೆಗೇಡು. ಈ ಭೇಟಿಯ ಕುರಿತು ರಾಯಭಾರಿ ಕಚೇರಿ ಕಳಿಸಿರುವ ಕೇಬಲ್ ಸಂದೇಶಗಳು ಪರಿಸ್ಥಿತಿ ಎಷ್ಟು ಕೆಳಗಿಳಿದಿದೆ ಎನ್ನುವುದಕ್ಕೆ ದ್ಯೋತಕವಾಗಿದೆ. ಇಂಥವರ ಕೈಯಲ್ಲಿ ದೇಶ ಎಷ್ಟು ಸುರಕ್ಷಿತ!

ಇದನ್ನೆಲ್ಲ ನೋಡಿದರೆ ನಮ್ಮ ದೇಶದ ಪ್ರತಿಯೊಂದು ವಿದ್ಯಮಾನಗಳ ಮೇಲೂ ಅಮೆರಿಕ ಎಷ್ಟು ನಿಗಾ ಇರಿಸಿದೆ, ಎಷ್ಟು ಹಸ್ತಕ್ಷೇಪ ಮಾಡುತ್ತಿದೆ ಎನ್ನುವುದು ವೇದ್ಯವಾಗುತ್ತವೆ. ವಿದೇಶೀ ರಾಯಭಾರಿಗಳ ಚಟುವಟಿಕೆಗಳ ಮೇಲೆ ನಿಗಾ ಇರಿಸಬೇಕಾದ ಸರಕಾರ, ತಾನೇ ಅಮೆರಿಕದ ರಾಯಭಾರಿ ಕಚೇರಿಯ ನಿಗಾದಲ್ಲಿರುವುದು ವಿಪರ್ಯಾಸ. 'ಕೊಯಲಿಷನ್ ಧರ್ಮ'ದ ಹೆಸರಿನಲ್ಲಿ ನಾಚಿಕೆ ಇಲ್ಲದೆ ಭ್ರಷ್ಟಾಚಾರವನ್ನು ಸಮರ್ಥಿಸಿಕೊಳ್ಳುತ್ತಿರುವ ಮನಮೋಹನ ಸಿಂಗ್ ವಿದೇಶಾಂಗ ವ್ಯವಹಾರದ ಕ್ಷೇತ್ರದಲ್ಲಿ ಅಮೆರಿಕದ ದಾಸಾನುದಾಸ. ಭಾರತದ ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಅಮೆರಿಕಾಗೆ ಒತ್ತೆ ಇಟ್ಟಿದ್ದಾರೆ. ಈತ ಪ್ರಧಾನಿಯಾಗಿ ಮುಂದುವರಿಯಲು ಯಾವ ಯೋಗ್ಯತೆಯೂ ಇಲ್ಲವಾಗಿದೆ. ಮನಮೋಹನ ಸಿಂಗ್ ಪ್ರಧಾನಿ ಅಧಿಕಾರದಿಂದ ಕೆಳಗಿಳಿಯಬೇಕು. ಭಾರತದ ಗೌರವ ಉಳಿಯಬೇಕಾದರೆ ಇದು ಜರೂರು ಅಗತ್ಯ. ಇದಕ್ಕಾಗಿ ಜನಾಂದೋಳನ ನಡೆಯಲಿ.

## ಲಿಬಿಯ - ಗಡಾಫಿಯ ಮೊಂಡುತನ

ಅಧಿಕಾರ ತ್ಯಜಿಸಲು ನಿರಾಕರಿಸಿರುವ ಲಿಬಿಯದ ಸರ್ವಾಧಿಕಾರಿ ದೇಶದಲ್ಲಿ ಅಂತರ್ಯುದ್ಧದ ಪರಿಸ್ಥಿತಿ ತಂದಿದ್ದಾನೆ. ಗಡಾಫಿ ಬೆಂಬಲಿಗ ಸೇನೆ ಜನತೆಯ ಮೇಲೆ ಯುದ್ಧ ಸಾರಿದೆ. ಒಂದು ತಿಂಗಳಿಂದ ನಡೆಯುತ್ತಿರುವ ಜನಾಂದೋಳನದಲ್ಲಿ ಈಗಾಗಲೇ ಮೂರು ನಾಲ್ಕು ಸಾವಿರ ಜನ ಸಾವಿಗೀಡಾಗಿದ್ದಾರೆ. ಸಹಸ್ರ ಸಹಸ್ರ ಮಂದಿ ನಿರಾಶ್ರಿತರಾಗಿದ್ದಾರೆ. ಈಚಿನ ವರದಿಗಳ ಪ್ರಕಾರ ಗಡಾಫಿ ಪರ ಸೇನೆ ಮುನ್ನಡೆ ಸಾಧಿಸಿದೆ. ಟ್ಯುನೀಷಿಯ ಮತ್ತು ಈಜಿಪ್ಟ್‌ಗಳಲ್ಲಿ ಜನಾಂದೋಳನಕ್ಕೆ ಸಾಕಷ್ಟು ಶೀಘ್ರವಾಗಿಯೇ ಜಯ ಲಭಿಸಿತು. ಮುಂದೆ ಅಲ್ಲಿ ಯಾವ ರಾಜಕೀಯ ವ್ಯವಸ್ಥೆ ಬರುವುದೋ ಅದು ಬೇರೆಯ ಮಾತು. ಈ ಜನಾಂದೋಳನಗಳು ಇದೇ ಉತ್ತರ ಆಫ್ರಿಕ ಮತ್ತು ಪಶ್ಚಿಮ ಏಶಿಯದ ದೇಶಗಳಲ್ಲಿ ಪ್ರತಿಭಟನೆಗಳಿಗೆ ಚಾಲನೆ ನೀಡಿದ್ದಂತೂ ನಿಜ.

ಲಿಬಿಯಾದಲ್ಲಿ ನಲವತ್ತೆರಡು ವರ್ಷಗಳಿಂದ ಆಡಳಿತ ನಡೆಸುತ್ತ ಬಂದಿರುವ ಗಡಾಫಿ ಪರವಾಗಿ ಇನ್ನೂ ಬೆಂಬಲ ಇರುವುದು ಆಶ್ಚರ್ಯದ ಸಂಗತಿ. ಈತನ ವ್ಯಕ್ತಿತ್ವದಲ್ಲಿ ಆಗಿರುವ ಪರಿವರ್ತನೆಗಳು ವಿಚಿತ್ರ. ಸಾಮ್ರಾಜ್ಯಶಾಹಿ ವಿರೋಧಿಯಾಗಿ, ಕ್ರಾಂತಿಕಾರಿಯಾಗಿ, ಸಮಾಜವಾದದ ಪ್ರತಿಪಾದಕನಾಗಿ ಅಧಿಕಾರಕ್ಕೇರಿದ ಈತ ಅರಬ್ ಜಗತ್ತಿನಲ್ಲಿ ಹೀರೋ. ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳಿಗೆ ಕಡುವೈರಿ. ಆದರೆ ಕಾಲಾಂತರದಲ್ಲಿ ಈತ ಪಶ್ಚಿಮ ರಾಷ್ಟ್ರಗಳ ಜೊತೆ ಒಡಂಬಡಿಕೆ ಮಾಡಿಕೊಂಡು, ಅವರ ಭಂಟನಾದ್ದು ವಿಚಿತ್ರ. ಆರ್ಥಿಕ ದಿಗ್ಬಂಧನ, ಪ್ರಾಣದ ಮೇಲೆ ಬೆದರಿಕೆಗಳನ್ನು ಧೈರ್ಯವಾಗಿ ಎದುರಿಸಿದ ಗಡಾಫಿ ಪಾಶ್ಚಾತ್ಯರ ಕಣ್ಮಣಿ ಆದದ್ದು ಒಂದು ರೋಚಕ ಬೆಳವಣಿಗೆ. ಇರಲಿ. ಪ್ರಾರಂಭದಲ್ಲಿ ಜನಪರವಾದ ಸುಧಾರಣೆಗಳನ್ನು ಜಾರಿಗೆ ತಂದು, ತೈಲೋದ್ಯಮವನ್ನು ರಾಷ್ಟ್ರೀಕರಣ ಮಾಡಿದ ಈತ ಬರಬರುತ್ತ ಭ್ರಷ್ಟನಾದ. ಇದೇ ಜನರನ್ನು ರೊಚ್ಚಿಗೆಬ್ಬಿಸಿದ್ದು. ಪ್ರಜಾಪ್ರಭುತ್ವ ವ್ಯವಸ್ಥೆಯ ಪ್ರಬಲವಾದ ಪರಂಪರೆ ಇಲ್ಲದ ಈ ದೇಶದಲ್ಲಿಯೂ ಜನಾಂದೋಳನ ಏಕಾಏಕಿಯಾಗಿ ಪ್ರಾರಂಭವಾದದ್ದು ಗಡಾಫಿ ಅಧಿಕಾರ ಅಂತ್ಯಗೊಳ್ಳಬೇಕೆಂಬುದೇ ಗುರಿ. ಅಂತರ್ಯುದ್ಧದಲ್ಲಿ ಹೊರ ದೇಶಗಳ, ಮುಖ್ಯವಾಗಿ ಪಶ್ಚಿಮ ರಾಷ್ಟ್ರಗಳ ಮಧ್ಯಪ್ರವೇಶವನ್ನು ಹೋರಾಟಗಾರರು ವಿರೋಧಿಸಿದ್ದಾರೆ. ಇದು ಸ್ವಾಗತಾರ್ಹ. ಇದು ಸರ್ವಾಧಿಕಾರದ ವಿರುದ್ಧ ಜನತೆಯ ಹೋರಾಟ. ಈ ಎಲ್ಲ ಬೆಳವಣಿಗೆಗಳನ್ನು ಗಂಭೀರವಾಗಿ ಅವಲೋಕಿಸುತ್ತಿರುವ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ಮಧ್ಯೆ ಪ್ರವೇಶಿಸಲು ತುದಿಗಾಲಿನ ಮೇಲೆ ನಿಂತಿವೆ. ''ನ್ಯಾಟೋ'' ಪಡೆಗಳು ಲಿಬಿಯದ ಆಸುಪಾಸಿನಲ್ಲಿ ಜಮಾಯಿಸಿವೆ. ಬಾಂಬು ಸುರಿದಿದೆ.

ತೈಲ ಸಂಪತ್ತಿನಿಂದ ಕೂಡಿರುವ ಈ ಭೂಭಾಗದಲ್ಲಿ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳ ಹಿತಾಸಕ್ತಿ ಎಲ್ಲರಿಗೂ ತಿಳಿದಿರುವ ವಿಷಯ. ಅಂತೆಯೇ, ಈಚಿನ ವಿದ್ಯಮಾನಗಳನ್ನು ಆ ದೇಶಗಳು ಗಂಭೀರವಾಗಿ ಅವಲೋಕಿಸುತ್ತಿವೆ. ಸೌದಿ ಅರೇಬಿಯದ ಭದ್ರಕೋಟೆಯಂತೆ, ಈಜಿಪ್ಟ್ ಟ್ಯೂನೀಷಿಯಾಗಳಲ್ಲೂ ಅಮೆರಿಕದ ಪರ ಇರುವ ಸರಕಾರಗಳನ್ನು ತರಲು ಲೆಖ್ಖಾಚಾರ ಹಾಕುತ್ತಿವೆ. ಪ್ರಜಾಪ್ರಭುತ್ವ ಶಕ್ತಿಗಳು ಈ ಅಪಾಯವನ್ನು ಗಮನಿಸುವುದು ಅಗತ್ಯ.

ಸೀಯಾರ್ಕೆ
'ಚೌಜೀನ', [illegible], ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

## ಮೂವತ್ತು ವರ್ಷಗಳ ಹಿಂದೆ...

'ವಿಶ್ವಕಥಾಕೋಶ'ದ ಇಪ್ಪತ್ತೈದು ಸಂಪುಟಗಳು ೧೯೮೦ರ ದಶಕದಲ್ಲಿ ಪ್ರಕಟವಾದವು. ೯೬ ದೇಶ-ಪ್ರದೇಶಗಳ, ೩೨೦ ಲೇಖಕರ, ೩೨೪ ಶ್ರೇಷ್ಠ ಕಥೆಗಳನ್ನೊಳಗೊಂಡ ಈ ಸಂಪುಟಗಳು ಕನ್ನಡ ಸಾಹಿತ್ಯ ಲೋಕಕ್ಕೆ ನವಕರ್ನಾಟಕ ನೀಡಿದ ಅಪೂರ್ವವಾದ ಒಂದು ವಿಶಿಷ್ಟ ಕೊಡುಗೆ. ಈ ಸಂಪುಟಗಳ ಸಂಪಾದಕರು ನಿರಂಜನ.

ಈಗ, ನವಕರ್ನಾಟಕ ಪ್ರಕಾಶನದ ಚಿನ್ನದ ಹಬ್ಬದ ಸಂದರ್ಭದಲ್ಲಿ, 'ವಿಶ್ವಕಥಾಕೋಶ'ದ ೨೫ ಸಂಪುಟಗಳ ಎರಡನೇ ಆವೃತ್ತಿಯ ಲೋಕಾರ್ಪಣೆ ಸಮಾರಂಭ ತಾರೀಖು ೩-೪-೨೦೧೧ರ ಭಾನುವಾರ ಬೆಳಗ್ಗೆ ೧೦ ಗಂಟೆಗೆ ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆಯಲಿದೆ.



**ಚಿತ್ರದಲ್ಲಿ (ಎಡದಿಂದ ಬಲಕ್ಕೆ ) ಮಾಸ್ತಿ, ಗೊರೂರು, ಹಾಮಾನಾ, ನಿರಂಜನ.**
**ಹಿಂದುಗಡೆ ಇರುವವರು ಆರ್. ಎಸ್. ರಾಜಾರಾಮ್.**

ಡಾ|| ಯು. ಆರ್. ಅನಂತಮೂರ್ತಿ ಸಮಾರಂಭದ ಅಧ್ಯಕ್ಷತೆ ವಹಿಸಿ ಸಂಪುಟಗಳ ಲೋಕಾರ್ಪಣೆ ಮಾಡುತ್ತಾರೆ. ಎಸ್. ದಿವಾಕರ್ ಕೃತಿಗಳ ಪರಿಚಯ ಮಾಡಿಕೊಡುತ್ತಾರೆ. ಡಾ|| ಎಚ್. ನಾಗವೇಣಿ ಮುಖ್ಯ ಅತಿಥಿಯಾಗಿ ಭಾಗವಹಿಸುತ್ತಾರೆ. ಹಿಂದೆ ಆರು ಕಂತುಗಳ ಪ್ರಕಟಣ ಸಮಾರಂಭಗಳ ಅಪೂರ್ವ ಛಾಯಾಚಿತ್ರ ಪ್ರದರ್ಶನವನ್ನು ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

# ಛತ್ರಪತಿ ಶಿವಾಜಿಯ ತಾಯಿ ಜೀಜಾಬಾಯಿ

## ಡಾ॥ ತಿಮ್ಮನಹಳ್ಳಿ ವೇಣುಗೋಪಾಲ್

''ಜಗತ್ತಿನ ಎಲ್ಲ ಮಹಾನ್ ಚೇತನಗಳು ತಮ್ಮ ಸಾಮರ್ಥ್ಯದ ಶಿಖರ ತಲುಪುವಲ್ಲಿ ತಮ್ಮ ತಮ್ಮ ತಾಯಂದಿರಿಂದ ಸ್ಫೂರ್ತಿಯನ್ನು ಪಡೆದಿದ್ದಾರೆ. ಶಿವಾಜಿಯ ಜೀವನ ಮತ್ತು ಶಕ್ತಿಯನ್ನು ರೂಪಿಸುವಲ್ಲಿ ಜೀಜಾಬಾಯಿಯ ವ್ಯಕ್ತಿತ್ವ ತುಂಬು ಪಾತ್ರ ವಹಿಸಿದೆ.''

ನಮ್ಮ ಪ್ರಮುಖ ಆರಂಭಿಕ ರಾಷ್ಟ್ರೀಯವಾದಿ ಹಾಗೂ ಆರ್ಥಿಕ ಚಿಂತಕ ಎಂ. ಜಿ. ರಾನಡೆಯವರ ಈ ಮಾತು ತಾಯಿಯ ಮಹಾಚೇತನವನ್ನೂ, ಅದರ ಅನನ್ಯತೆಯನ್ನೂ ಸಮರ್ಥವಾಗಿ ಕಟ್ಟಿಕೊಡುತ್ತದೆ.

ಇಲ್ಲಿ ಮಹಿಳೆಯನ್ನು ಮತ್ತವಳ ಸಂವೇದನೆ ಹಾಗೂ ಸೃಜನಶೀಲತೆಯನ್ನು ಮಾತನಾಡುವುದರಿಂದ ಒಂದು ಸ್ಪಷ್ಟನೆ ನೀಡುವ ಮೂಲಕ ಈ ಲೇಖನದ ವಸ್ತು ವಿಷಯ ಪ್ರಾರಂಭಿಸುವುದು ಸೂಕ್ತ. ನಮ್ಮ ದೇಶದ ಚರಿತ್ರೆಯೊಳಗೆ ಹಲವು ಚರಿತ್ರೆಗಳಿವೆ. ಹಲವು ಚರಿತ್ರೆ ಅನ್ನುವಾಗ ಅದು ಅಲಕ್ಷಿತ ವರ್ಗದ ಚರಿತ್ರೆಯನ್ನೇ ಹೇಳುತ್ತದೆ. ಭಾರತದ ಪಾಳೆಗಾರಿ ಸಾಮಾಜಿಕ ವ್ಯವಸ್ಥೆಯಲ್ಲಿ ಆಳುವ ವರ್ಗದ ಮಹಿಳೆಯ ಬಗೆಗೆ ಮಾತನಾಡುವಾಗ ಸಾಮಾಜಿಕ ಹಿನ್ನೆಲೆ ಆಧರಿಸಿ ಪ್ರತ್ಯೇಕ ಮಾನದಂಡ ಬಳಸುವ ಅಗತ್ಯವಿದೆಯೇ ಎಂಬ ಪ್ರಶ್ನೆ ಎದುರಾಗುತ್ತದೆ. ಇಲ್ಲಿ ಸ್ತ್ರೀ ಸಮುದಾಯದ ಮರು ವಿಭಜನೆ ಮತ್ತು ಶ್ರೇಣೀಕರಣದಂತಹ ತಾತ್ವಿಕ ವಾಗ್ವಾದವೇ ಸೂಕ್ಷ್ಮವಾದದ್ದು. ಒಟ್ಟಾರೆಯಾಗಿ ಆರ್ಯಪ್ರಣೀತ ಪುರುಷ ಪ್ರಭುತ್ವದ ಸಾಮಾಜಿಕ ಹಿನ್ನೆಲೆಯ ನಮ್ಮ ಚರಿತ್ರೆಯಲ್ಲಿ ಮಹಿಳೆಯು ಯಾವ ಮೂಲದಿಂದ ಬಂದಿದ್ದರೂ ಆಯಾಯ ವರ್ಗದ ಸಂದರ್ಭದಲ್ಲಿ ನಿರ್ಲಕ್ಷಿತಳೇ ಆಗಿದ್ದಾಳೆ ಎಂಬ ಅಭಿಪ್ರಾಯ ನಮ್ಮ ನಡುವೆ ಹೆಚ್ಚು ಚರ್ಚಿತವಾಗುತ್ತಿದೆ. ಹಾಗಾಗಿಯೇ ಗಣ್ಯ-ನಗಣ್ಯ ಸ್ತರಗಳ ವರ್ಗೀಕರಣ ಕೈಬಿಟ್ಟು ಶೂದ್ರರರಂತೆ ಶೋಷಿತ ವರ್ಗವೇ ಆಗಿದ್ದ ಮಹಿಳೆಯನ್ನು ಏಕರೂಪಿಯಾಗಿ ನೋಡುವ ಉದಾರವಾದಿ ದೃಷ್ಟಿಕೋನಕ್ಕೆ ಒತ್ತು ಸಿಗುತ್ತದೆ.

ಹದಿನೇಳನೇ ಶತಮಾನದ ಮರಾಠ ಇತಿಹಾಸದಲ್ಲಿ ಆಗಿಹೋಗಿ ನಮ್ಮ ಗಮನ ಸೆಳೆಯುವ ಜೀಜಾಬಾಯಿಯನ್ನು ಮೇಲಿನ ಚರ್ಚಿತ ಸೈದ್ಧಾಂತಿಕ ಪರಿಕ್ರಮದಲ್ಲಿ ಇಟ್ಟು ಶೋಧಿಸುವ ಅಗತ್ಯವಿದೆ. ಆಕೆಯ ಹೋರಾಟ, ತ್ಯಾಗ, ಸಹನೆ, ಅಂತಃಕರಣ ನರಳಿಕೆ-ಕನಸುಗಳು ಎಲ್ಲವೂ ವ್ಯಕ್ತವಾಗುವುದು ಸ್ವತಂತ್ರ ಮರಾಠ ರಾಜ್ಯದ ಸ್ಥಾಪಕನಾಗಿ ಶಿವಾಜಿಯು ಅರಳುವ ಮುಖೇನ ಎಂಬುದು ನಿಜ. ಆದರೆ ಜೀಜಾಬಾಯಿ ಇಲ್ಲವೆ ಶಿವಾಜಿಯ ಬಗೆಗೆ ಆಸಕ್ತಿ ತಳೆಯುವ ಯಾವುದೇ ಜವಾಬ್ದಾರಿಯುತ ವಿದ್ಯಾರ್ಥಿ ಒಂದು ವಿಷಯದ ಬಗ್ಗೆ ಎಚ್ಚರಿಕೆ ವಹಿಸುವುದು ಅಗತ್ಯ. ಇವರ ಬಗೆಗೆ ಜೆಡೆ ಕುಟುಂಬದ ಮೂಲಗಳು, ಸಭಾಸದ್ ದಾಖಲೆಗಳು, ಸಮಕಾಲೀನ ಪರ್ಷಿಯನ್ ದಾಖಲೆಗಳು, ಪೇಷ್ವಾ ಬಖೈರ್‌ಗಳು ಹೀಗೆ ಅಪಾರ ಪ್ರಮಾಣದ ಆಕರಗಳು ಲಭ್ಯವಿವೆ. ಆದರೆ ಸಮಸ್ಯೆ ಇರುವುದು ಅವುಗಳ ಬಗೆಗಿನ ಅಪಗ್ರಹಿಕೆಯಿಂದಾಗಿ. ಅವು ವಸ್ತುನಿಷ್ಠ ಚಿತ್ರಣವನ್ನು ಒದಗಿಸಲು ಸೋತ ಸಂಗತಿಯನ್ನು ಗಂಭೀರವಾಗಿ ಪರಿಗಣಿಸದೆ ನಮ್ಮ ಕೆಲವು ಬರಹಗಾರರು ಅವು ನಿರ್ಮಿಸಿರುವ ವೈಭವೀಕೃತ ಆವರಣವನ್ನೇ ಸತ್ಯಸಂಗತಿಗಳೆಂದು ಬಗೆದು ಚರಿತ್ರೆಯನ್ನು ಆಗಿಸಿರುವುದಾಗಿದೆ. ಅದು ವಸಾಹತುಶಾಹಿ ಸಂದರ್ಭದ ರಾಷ್ಟ್ರೀಯವಾದಿ ಬರಹಗಾರರ ಮಿತಿಯೂ ಆಗಿದೆ. ಇದನ್ನೇ ಇನ್ನೊಂದು ರೀತಿ ಹೇಳುವುದಾದರೆ ಮರಾಠಿ ಜಾನಪದದ ವಸ್ತು ವಿಷಯವಾಗುವ ಎತ್ತರ ಏರಿದ ಜೀಜಾಬಾಯಿ, ಶಿವಾಜಿಯಂತಹವರ ನಿಜ ಇತಿಹಾಸ ಕಣ್ಮರೆಯಾಗಿ ಪೇಷ್ವಾ ಬಖೈರ್ ಇಂತಹವುಗಳೊಳಗೆ ಮಿಳಿತವಾಗಿರುವ ಸಂಪ್ರದಾಯಶೀಲ, ಕೋಮುಪ್ರೇರಿತ ಅಂಶಗಳಿಗೆ ಜಾಣ ಕುರುಡಾದ ನಮ್ಮ ಚರಿತ್ರೆಯ ಬರವಣಿಗೆ ಹುಸಿ ಚಿತ್ರಣವನ್ನು ವಿಜೃಂಭಿಸಲು ಯತ್ನಿಸಿದ್ದು. ಆದರೆ ಚರಿತ್ರೆ ಬಯಸುವ ವಿಮರ್ಶೆಯನ್ನು ಅರಗಿಸಿಕೊಳ್ಳಲು ಇಂದೂ ಕೂಡ ನಮಗೆ ಆಗಿಲ್ಲದಿದ್ದರೆ ಆಶ್ಚರ್ಯವಿಲ್ಲ. ಜೇಮ್ಸ್ ಡಬ್ಲ್ಯು. ಲೇನ್ ಇತ್ತೀಚೆಗೆ ಪ್ರಕಟಿಸಿದ

ಜೀಜಾಬಾಯಿ ಕೇವಲ ಮಗಳಾಗಿ, ಹೆಂಡತಿಯಾಗಿ, ತಾಯಿಯಾಗಿ, ಕೊನೆಗೆ ಹೆಣ್ಣಾಗಿ ಮಾತ್ರವೇ ಸೀಮಿತಗೊಳ್ಳದೆ ತನ್ನ ಕಾಲದ ಭಾರತ ಇತಿಹಾಸದ ಅಪಾರ ಘಟನೆಗಳನ್ನೂ, ಎಳೆಗಳನ್ನೂ, ಬಿಚ್ಚಿಡುವ ಚರಿತ್ರೆಯೂ ಆಗಿ ಮಹತ್ವವನ್ನು ಪಡೆಯುತ್ತಾಳೆ. ಜೀಜಾಬಾಯಿ ಮರಾಠ ಭೌನ್ಸಲಾ ಮನೆತನದ ಷಹಜಿ ಭೌನ್ಸಲಾನ ಹಿರಿಯ ಹೆಂಡತಿ. ಜನ್ಮ ನೀಡಿದ ಆರು ಜನ ಮಕ್ಕಳಲ್ಲಿ ನಾಲ್ಕು ಮಕ್ಕಳ ಕಣ್ಮರೆಯ ನಡುವೆ ಉಳಿದ ಇಬ್ಬರು ಮಕ್ಕಳಲ್ಲಿ ಶಾಂಭುಜಿ ಹಿರಿಯವನಾದರೆ ಶಿವಾಜಿ ಕಿರಿಯವನಾಗಿದ್ದನು. ಬಲಾಢ್ಯ ರಾಜಕೀಯ ಕುಟುಂಬದಿಂದ ಬಂದ ಜೀಜಾಬಾಯಿ ಷಹಜಿ ಭೌನ್ಸಲಾನ ಹೆಂಡತಿಯಾಗಿದ್ದೇ ಒಂದು ರೋಚಕ ಕತೆ. ಹೆಣ್ಣು ಹೇಗೆ ಸ್ನಾಯುಬಲದ ಚಿಟಿಕೆಯ ಆಟಿಕೆ ಮತ್ತು ಮನರಂಜನೆಯಾಗಬಲ್ಲಳು ಎಂಬುದನ್ನು ಕುರಿತು ಮರಾಠರ ಕರಿಯದ ಕಾನೋಜಿ ಜೆಡೆ ಕುಟುಂಬದ ದಾಖಲೆಗಳು ಮತ್ತು ಪರಮಾನಂದನ ಶಿವಭಾರತದಂತಹ ಗ್ರಂಥಗಳು ವಿವರ ಒದಗಿಸುತ್ತವೆ.



'Shivaji : Hindu King in Muslim India' ಎಂಬ ಕೃತಿಯ ಮಿತಿ ಏನೇ ಇದ್ದಾಗ್ಯೂ ಅದರ ಬಗೆಗೆ ಮಹಾರಾಷ್ಟ್ರದ ಸಂಬಾಜಿ ಬ್ರಿಗೇಡ್ ತೋರಿದ ಅಸಹನೆ ಇದನ್ನು ಪುಷ್ಟೀಕರಿಸಬಲ್ಲದು.

ಮರಾಠ ಇತಿಹಾಸ ಬರೆಯ ಹೊರಟ ಯಾವ ಬರಹಗಾರರಿಗೂ ಶಿವಾಜಿಯ ಮೇಲೆ ಜೀಜಾಬಾಯಿಯ ಪ್ರಭಾವವನ್ನು ಕುರಿತು ಬರೆಯದೆ ಮುಂದೆ ಹೋಗಲಾಗಲಿಲ್ಲ. ಅದು ಅಷ್ಟೊಂದು ಪರಿಣಾಮಕಾರಿ ಸಂಗತಿಯಾಗಿತ್ತು. ಲಾಲಾ ಲಜಪತ ರಾಯ್ ಅವರಂತಹ ತೀವ್ರಗಾಮಿ ರಾಷ್ಟ್ರೀಯ ಹೋರಾಟಗಾರರು, ವಸಾಹತು ಕಾಲದ ಡೇವಿಡ್ ಕಿನ್‌ಸೈಡ್‌ರಂತಹ ಆಂಗ್ಲೋ-ಇಂಡಿಯನ್ ಬರಹಗಾರರು, ಜೆ. ಎನ್. ಸರ್ಕಾರರಂಥ ಅನೇಕ ರಾಷ್ಟ್ರೀಯವಾದಿ ಇತಿಹಾಸಕಾರರು ಮುಂದು ಮಾಡಿರುವುದು ಜೀಜಾಬಾಯಿಯ ಅಳಿಸಲಾಗದ ಹಿಂದೂ ಛಾಯೆಯು ಶಿವಾಜಿಯ ಮೇಲೆ ಒತ್ತಲ್ಪಟ್ಟಿರುವ ಅಂಶವನ್ನು. ಇವರು ಶಿವಾಜಿಯನ್ನು ಹಿಂದೂ ರಾಷ್ಟ್ರೀಯ ನಾಯಕನನ್ನಾಗಿ ಚಿತ್ರಿಸಲು ಇದ್ದ ಒತ್ತಡ ಮತ್ತು ಮೋಹವನ್ನು ಇತಿಹಾಸದ ವಿದ್ಯಾರ್ಥಿಗಳು ಅರ್ಥಮಾಡಿಕೊಳ್ಳದೆ ಯಥಾವತ್ತಾಗಿ ಅಭ್ಯಸಿಸುವ ಕ್ರಮ ಪರಿಣಾಮದಲ್ಲಿ ವಿಕೃತಿಗೆ ಎಡೆಮಾಡಿದೆ. ಈ ಎಲ್ಲಾ ಎಚ್ಚರಗಳನ್ನು ಇಟ್ಟುಕೊಂಡೇ ಜೀಜಾಬಾಯಿಯನ್ನಾಗಲಿ ಶಿವಾಜಿಯನ್ನಾಗಲಿ ನೋಡುವ ಅಗತ್ಯವಿದೆ.

ಜೀಜಾಬಾಯಿ ಕೇವಲ ಮಗಳಾಗಿ, ಹೆಂಡತಿಯಾಗಿ, ತಾಯಿಯಾಗಿ, ಕೊನೆಗೆ ಹೆಣ್ಣಾಗಿ ಮಾತ್ರವೇ ಸೀಮಿತಗೊಳ್ಳದೆ ತನ್ನ ಕಾಲದ ಭಾರತ ಇತಿಹಾಸದ ಅಪಾರ ಘಟನೆಗಳನ್ನೂ, ಏಳಿಗೆಗಳನ್ನೂ, ಬಿಚ್ಚಿಡುವ ಚರಿತ್ರೆಯೂ ಆಗಿ ಮಹತ್ವವನ್ನು ಪಡೆಯುತ್ತಾಳೆ. ಜೀಜಾಬಾಯಿ ಮರಾಠ ಭೌನ್ಸಲಾ ಮನೆತನದ ಷಹಜಿ ಭೌನ್ಸಲಾನ ಹಿರಿಯ ಹೆಂಡತಿ. ಜನ್ಮ ನೀಡಿದ ಆರು ಜನ ಮಕ್ಕಳಲ್ಲಿ ನಾಲ್ಕು ಮಕ್ಕಳ ಕಣ್ಮರೆಯ ನಡುವೆ ಉಳಿದ ಇಬ್ಬರು ಮಕ್ಕಳಲ್ಲಿ ಶಾಂಭುಜಿ ಹಿರಿಯವನಾದರೆ ಶಿವಾಜಿ ಕಿರಿಯವನಾಗಿದ್ದನು. ಬಲಾಢ್ಯ ರಾಜಕೀಯ ಕುಟುಂಬದಿಂದ ಬಂದ ಜೀಜಾಬಾಯಿ ಷಹಜಿ ಭೌನ್ಸಲಾನ ಹೆಂಡತಿಯಾಗಿದ್ದೇ ಒಂದು ರೋಚಕ ಕತೆ. ಹೆಣ್ಣು ಹೇಗೆ ಸ್ನಾಯುಬಲದ ಚಿಟಕೆಯ ಆಟಿಕೆ ಮತ್ತು ಮನರಂಜನೆಯಾಗಬಲ್ಲಳು ಎಂಬುದನ್ನು ಕುರಿತು ಮರಾಠರ ಕರಿಯದ ಕಾನೋಜಿ ಜೆಡೆ ಕುಟುಂಬದ ದಾಖಲೆಗಳು ಮತ್ತು ಪರಮಾನಂದನ ಶಿವಭಾರತದಂತಹ ಗ್ರಂಥಗಳು ವಿವರ ಒದಗಿಸುತ್ತವೆ. ಜೀಜಾಬಾಯಿಯ ತಂದೆ ಲಕ್ಜಿ ಜಾದವನು ಅಹಮದ್ ನಗರದ ನಿಜಾಂಷಾಹಿಯಲ್ಲಿ ಸೈನಿಕ ನಾಯಕನಾಗಿದ್ದು ಪ್ರಬಲ ಸ್ಥಾನಮಾನ ಹೊಂದಿದವನಾಗಿದ್ದನು. ಷಹಜಿ ಭೌನ್ಸಲಾನ ತಂದೆ ಮಾಲೋಜಿ ಭೌನ್ಸಲಾ ಲಕ್ಜಿ ಜಾದವನಲ್ಲಿ ಸೇವೆಯಲ್ಲಿದ್ದನು; ಷಹಜಿ-ಜೀಜಾಬಾಯಿಯ ಜೋಡಿಯ ಬಗೆಗೆ ತಮಾಷೆಯ ಮಾತೆ ಮೂಲವಾಗಿ ಸ್ಥಾನಮಾನ, ಪ್ರತಿಷ್ಠೆ, ಸ್ವಾಭಿಮಾನದಂತಹ ಪ್ರಶ್ನೆಗಳು ಎರಡೂ ಕುಟುಂಬಗಳ ನಡುವೆ ತಲೆ ಎತ್ತಿ ಸಂಘರ್ಷ ಅಸಮಾಧಾನಗಳ ಮಧ್ಯೆಯೇ ೧೬೦೫ರಲ್ಲಿ ಸಿಂದ್ ಖೇಡ್ ಎಂಬಲ್ಲಿ ಜರುಗಿದ ವಿವಾಹದಲ್ಲಿ ಪರ್ಯವಸಾನವಾಯಿತು. ಪರಿಣಾಮದಲ್ಲೂ ಸುಖಾಂತ್ಯ ಇರಲಿಲ್ಲ. ಕಂದಕ ದೊಡ್ಡದಾಗುತ್ತಲೇ ಹೋಯಿತು. ಕಟುವಾಸ್ತವವೆಂದರೆ ಅದರ ಬಲಿಪಶು ಆಗಿದ್ದು ಮಾತ್ರ ಜೀಜಾಬಾಯಿ.

ಪ್ರಕ್ಷುಬ್ಧಗೊಳ್ಳುತ್ತಿದ್ದ ದಖ್ಖನ್ನಿನ ರಾಜಕೀಯದಲ್ಲಿ ಷಹಜಿ ಭೌನ್ಸಲ ಅಹಮದ್ ನಗರದ ನಿಜಾಂಷಾಹಿಗಳ ಸೇವೆಗೆ ಸೇರಿ ಗಳಿಸುತ್ತಾ ಸಾಗಿದ ಏಳಿಗೆ-ಪ್ರಾಬಲ್ಯಗಳು ಜೀಜಾಬಾಯಿಯ ಸ್ಥಿತಿಗತಿಯನ್ನೇನೂ ಸುಧಾರಿಸಲಿಲ್ಲ. ದಖ್ಖನ್ನಿನ ಶಕ್ತಿಗಳಲ್ಲಿ ಅಧಿಕಾರ ಮತ್ತು ಬಲ ಅಸ್ಥಿರ ಸ್ವರೂಪಿಯಾಗಿದ್ದ ಸಂದರ್ಭದಲ್ಲಿ ಯಾವುದೇ ಒಂದು ಪಕ್ಷಕ್ಕೆ ನಿಷ್ಠೆ ತೋರುವುದು ಷಹಜಿಗೂ ಕಷ್ಟದಾಯಕವಾಗಿತ್ತು. ಅಹಮದ್ ನಗರದ ನಿಜಾಂಷಾಹಿಗಳಿಂದ ಪಡೆದಿದ್ದ ಪೂನಾದ ಜಹಗೀರನ್ನು ಬಿಜಾಪುರದ ಆದಿಲ್‌ಷಾಹಿಗಳ ಸೇವೆಯಲ್ಲಿದ್ದಾಗಲೊ, ಮೊಗಲರ ಮಾನ್ಸಬ್ದಾರನಾಗಿದ್ದಾಗಲೊ ಉಳಿಸಿಕೊಳ್ಳುವ ಕಾರ್ಯತಂತ್ರ ರೂಪಿಸಿಕೊಳ್ಳುತ್ತಲೇ ಇದ್ದನು. ದಖ್ಖನ್ನಿನಲ್ಲಿ ಜರುಗುತ್ತಿದ್ದ ಶಕ್ತಿ ರಾಜಕಾರಣದ ಫಲಶ್ರುತಿಯೆಂದರೆ ಜೀಜಾಬಾಯಿಯನ್ನು ನಿರಾಶ್ರಿತಳನ್ನಾಗಿಸಿದ್ದು ಎಂಬುದೇ ಆಗಿದೆ.

ನಿರಾಶ್ರಿತ ಸ್ಥಿತಿ ಅನುಭವಿಸುತ್ತಿದ್ದಾಗ ಜೀಜಾಬಾಯಿ ಶಿವಾಜಿಗೆ ನೀಡಿದ ಜನ್ಮ, ಅವನನ್ನು ಎಲ್ಲಾ ನಿರೀಕ್ಷಿತ ಅಪಾಯಗಳಿಂದ ರಕ್ಷಿಸಿದ್ದು, ಶಿವಾಜಿಯ ಅಸಹಾಯಕ ಸ್ಥಿತಿಯಲ್ಲಿ ಪೋಷಕ, ಗುರು ಮತ್ತು ಸ್ನೇಹಿತೆ ಎಲ್ಲವೂ ಆಗಿ ಅವನ ಸ್ವಶಕ್ತಿಯನ್ನು ಮನನಮಾಡಿಕೊಟ್ಟಿದ್ದು, ಹೀಗೆ ಛಲ ಸ್ವಭಾವದ ತಾಯಿಯೊಬ್ಬಳು ಏನೆಲ್ಲಾ ಮಾಡಬಲ್ಲಳು ಎಂಬುದು ಮರಾಠ ಇತಿಹಾಸದಲ್ಲಿ ಗಮನ ಸೆಳೆಯುವ ಸಂಗತಿಯೇ ಆಗಿದೆ.

ಪೂನಾದಿಂದ ಉತ್ತರಕ್ಕೆ ಐವತ್ತು ಮೈಲು ದೂರದ ಶಿವನೇರಿ ದುರ್ಗದಲ್ಲಿ ಶಿವಾಜಿಗೆ ಜನ್ಮವಿತ್ತ ಬಗೆಗೆ ಎಲ್ಲಾ ಮರಾಠ ದಾಖಲೆಗಳು ಏಕಾಭಿಪ್ರಾಯ ಹೊಂದಿವೆ. ಆದರೆ ದಿನಾಂಕಕ್ಕೆ ಸಂಬಂಧಿಸಿದಂತೆ ಭಿನ್ನ ಉಲ್ಲೇಖನಗಳನ್ನು ನೀಡುವ ಮೂಲಕ ವಾಗ್ವಾದಕ್ಕೆ ಎಡೆಮಾಡಿಕೊಟ್ಟಿವೆ. ಜೆಡೆ ಶಕಾವಳಿ ಹೇಳುವ ಕ್ರಿ. ಶ. ೧೬೩೦ಕ್ಕೆ ಬಹಳಷ್ಟು ವಿದ್ವಾಂಸರ ಸಹಮತವಿದೆ.

ಕ್ರಿ. ಶ. ೧೬೩೦-೧೬೩೬ರ ನಡುವೆ ದಖ್ಖನ್ ಯುದ್ಧಪೀಡಿತವಾಗಿತ್ತು. ಷಹಜಿ ತೀವ್ರ ಸಂಕಷ್ಟಕ್ಕೆ ಸಿಲುಕಿ ಶತ್ರುಗಳಿಂದ ರಕ್ಷಿಸಿಕೊಳ್ಳಲು ಹೆಣಗುತ್ತ ಅಲೆಯುತ್ತಿದ್ದನು. ಇಂತಹ ಪರಿಸ್ಥಿತಿಯಲ್ಲಿ ತನ್ನ ಹೆಂಡತಿ ಜೀಜಾಬಾಯಿ ಹಾಗೂ ಶಿವಾಜಿಯನ್ನು ರಕ್ಷಣಾ ತಾಣ ಶಿವನೇರಿಯಲ್ಲಿ ಬಿಟ್ಟು ತೊರೆಯಬೇಕಾಯಿತು. ಆದರೆ ಸತ್ಯವೇ ಬೇರೆಯಾಗಿತ್ತು. ಈ ಇಬ್ಬರೂ ಷಹಜಿಯ ಉದಾಸೀನಕ್ಕೆ ಒಳಗಾಗಿದ್ದರು. ಇದು ಜೀಜಾಬಾಯಿ ತನ್ನ ಗಂಡನ ಪ್ರೀತಿಯನ್ನು ಕಳೆದುಕೊಂಡಿದ್ದನ್ನು ಸೂಚ್ಯವಾಗಿ ಹೇಳುತ್ತದೆ. ಸೂಪಾದ ಮೋಹಿತೆ ಕುಟುಂಬದ ಸುಂದರವಾದ ತುಕ್ಕುಬಾಯಿಯನ್ನು ಷಹಜಿ ವಿವಾಹವಾಗಿದ್ದು ತನ್ನ ಪ್ರೀತಿ ಮತ್ತು ತಾನು ಗಳಿಸಿದ್ದೆಲ್ಲವನ್ನೂ ಅವರಿಗೆ ವಿನಿಯೋಗಿಸಿದ್ದನು. ಇದರ ಪರಿಣಾಮವಾಗಿ ಮುಂದಿನ ದಿನಗಳು ಜೀಜಾಬಾಯಿಯನ್ನು ಮತ್ತಷ್ಟು ಕರುಣಾಜನಕ ಸ್ಥಿತಿಗೆ ನೂಕಿದವು. ಈ ಜೀವರಕ್ಷಣೆಯ ಹೋರಾಟದ ಅಸಹಾಯಕ ಸ್ಥಿತಿಯಲ್ಲಿ ಷಹಜಿ ಭೌನ್ಸಲಾ ಇಬ್ಬರು ಹೆಂಡತಿಯರನ್ನೂ ಮಕ್ಕಳನ್ನೂ ಜೊತೆಯಲ್ಲಿ ಕೊಂಡೊಯ್ಯಲು ಸಾಧ್ಯವಾಗದೆ ಎರಡನೇ ಹೆಂಡತಿ ತುಕ್ಕುಬಾಯಿಯ ಜೊತೆಯಲ್ಲಿ ತೆರಳಿದ್ದರಲ್ಲಿ ಅಸ್ವಾಭಾವಿಕವಾದುದು ಏನೂ ಇಲ್ಲ ಎಂಬ ಅಭಿಪ್ರಾಯ ಮರಾಠ ಇತಿಹಾಸದಲ್ಲಿ ಆಸಕ್ತಿ ತಳೆದ ಕೆಲವು ಚರಿತ್ರೆಕಾರರದ್ದು. ಇದು ಸ್ತ್ರೀ ಸಂವೇದನೆಯಿಲ್ಲದ ಪಾಳೆಗಾರಿ ಸಾಮಾಜಿಕ ವ್ಯವಸ್ಥೆಯ ಸಹಜ ಗುಣವೆಂದು ಗಮನಿಸಬೇಕಾಗುತ್ತದೆ.

೧೬೩೧ರಲ್ಲಿ ಮೊಗಲ್ ಚಕ್ರವರ್ತಿ ಷಹಜಹಾನ್ ದಖ್ಖನ್ ದಂಡೆಯಾತ್ರೆಯಲ್ಲಿ ತೊಡಗಿದ್ದಾಗ ತಾನು ಅತೀವ ಪ್ರೀತಿಸುತ್ತಿದ್ದ ಮುಮ್ತಾಜ್ ಮಹಲ್‌ಳು ಬಹ್ರ್ಯಾಂಪುರದಲ್ಲಿ ಸಾವನ್ನಪ್ಪಿದಾಗ ಕಳೇಬರವನ್ನು ಆಗ್ರಾಕ್ಕೆ ಕೊಂಡೊಯ್ದು ಗೋರಿ ಮಾಡಲಾಯಿತು; ಮತ್ತು ತಾಜ್‌ಮಹಲ್ ಭವ್ಯ ಸ್ಮಾರಕವೊಂದನ್ನು ಅವಳ ನೆನಪಿಗಾಗಿ ನಿರ್ಮಿಸುವ ತೀವ್ರ ತುಡಿತವನ್ನು ಆಳುವ ಮನೆತನದ ಷಹಜಹಾನ್ ತೋರಿದ್ದನು. ಈ ಇಡೀ ಬೆಳವಣಿಗೆಯನ್ನು ಸಹಜವಾಗಿಯೆ ಸಾಂಸಾರಿಕ ಸುಖದಿಂದ ವಂಚಿತನಾಗಿ ದುಗುಡ ತಳಮಳಗಳಲ್ಲೆ ದಿನಗಳನ್ನು ದೂಡುತ್ತಿದ್ದ, ರಾಜಕೀಯ ವಿದ್ಯಾರ್ಥಿಯೂ ಆಗಿದ್ದ ಜೀಜಾಬಾಯಿಯು ಗಮನಿಸಿರಲೂ ಸಾಧ್ಯ.

ಜೀಜಾಬಾಯಿ ತನ್ನ ಕುಟುಂಬದೊಳಗಿನ ನಿರ್ಲಕ್ಷ್ಯಕ್ಕೆ ಮಾತ್ರವಲ್ಲ, ಶತ್ರುಗಳಿಂದ ಬಂಧನಕ್ಕೊಳಗಾಗುವ ಭೀತಿಯಲ್ಲಿ ರಕ್ಷಣೆಗಾಗಿ ಕೋಟೆಯಿಂದ ಕೋಟೆಗೆ ಪಲಾಯನ ಮಾಡುತ್ತಾ ಬದುಕುತ್ತಿದ್ದಳು. ಈ ಸಂದರ್ಭದಲ್ಲಿ ತನ್ನನ್ನೂ ತನ್ನ ಮಗನನ್ನೂ ರಕ್ಷಿಸಿಕೊಳ್ಳಲು ಅವಳು ನಡೆಸಿದ ಸೆಣಸಾಟ ಗಮನ ಸೆಳೆಯುತ್ತದೆ. ಒಂದು ಜನಜನಿತ ಕತೆಯಂತೆ ೧೬೩೩-೧೬೩೪ರ ನಡುವೆ ಷಹಜಿಯ ಹೆಂಡತಿ ಜೀಜಾಬಾಯಿಯು ಬೈಜಾಪುರದಲ್ಲಿ ಮೊಗಲರ ಸೆರೆಯಾಳಾಗಿದ್ದಳು. ಸಂಘಗಢದಲ್ಲಿ ಕೆಲಕಾಲ ಮೊಗಲರ ಮಹಲ್ದಾರ್ ಖಾನನ ಬಂಧನದಲ್ಲಿದ್ದಳಾದರೂ ತನ್ನ ಕಾರ್ಯತಂತ್ರ ಮತ್ತು ಬುದ್ಧಿವಂತಿಕೆ, ಚಿಕ್ಕಪ್ಪ

## ಟೊಳ್ಳು - ಗಟ್ಟಿ

ಮಣ್ಣಲ್ಲಿ ಬಿದ್ದದ್ದು
ಬೆಳೆದ ಕಂದಮ್ಮಗಳಂಥ
ಗಟ್ಟಿ ಆಸೆಗಳಷ್ಟೇ
ಬದುಕಿ ಉಳಿಯುತ್ತವೆ

ಹತ್ತು ಚುಕ್ಕಿ ಹತ್ತು ಸಾಲು
ಎಂದು ರಂಗೋಲಿ ಬರೆಯುತ್ತಾ
ಕೂತವಳಿಗಿಂತ
ಹತ್ತು ಇರುವೆಗಳ ಸಾಲು
ಎಷ್ಟೋ ದುಡಿಯುತ್ತವೆ

ಕನ್ಯಾಕುಮಾರಿಯ-
-ಹೆಬ್ಬಂಡೆ ಮೇಲೆ ಕುಳಿತು
ಕಾಶ್ಮೀರದ ಹೂ ಬನಗಳನ್ನು
ನೆನೆಯುತ್ತಾನೆ ವಿರಹಿ

**ಕೆ. ವಿ. ಚಂದ್ರ ಜ್ಯೋತಿ (ಕಸ್ತೂರಿ)**
ನಂ. ೨/೪೬, ಕೆ. ಆರ್. ಬಡಾವಣೆ,
ತುಮಕೂರು - ೫೭೨೧೦೧

ಜಗದೇವ್ ರಾವ್ ಜಾದವನ ಸಹಾಯದಿಂದ ಬಿಡುಗಡೆಗೊಳ್ಳುವಲ್ಲಿ ಯಶಸ್ವಿಯಾದಳು. ಇದನ್ನು ನಿಖರವಾಗಿ ಸಮರ್ಥಿಸುವ ಚಾರಿತ್ರಿಕ ದಾಖಲೆಗಳ ಕೊರತೆ ಇರುವುದಾದರೂ ಷಹಜಿ ತನ್ನ ಕುಟುಂಬವು ಮೊಗಲರ ಬಂಧನಕ್ಕೊಳಗಾಗುವ ಭೀತಿಯ ಹಿನ್ನೆಲೆಯಲ್ಲಿ ರಕ್ಷಣೆಗಾಗಿ ಪೋರ್ಚುಗೀಸರ ಸಹಾಯಕ್ಕಾಗಿ ಯಾಚಿಸಿದ್ದನ್ನು ಪರಿಗಣಿಸಿ ಸಂಭವನೀಯವೆಂದು ಈ ಘಟನೆಯ ತಥ್ಯವನ್ನು ಪರಿಗಣಿಸಲು ಸಾಧ್ಯವಿದೆ. ಇಂತಹ ಸಂಕಟದ ಕ್ಷಣದಲ್ಲೂ ತವರು ಕುಟುಂಬದ ಆಶ್ರಯಕ್ಕಾಗಿ ಯಾಚಿಸದೆ ಷಹಜಿಯ ಜಹಗೀರಿನ ಪ್ರಭಾವಿ ಕಕ್ಷೆಯಲ್ಲಿಯೆ ರಕ್ಷಣೆಗಾಗಿ ತಡಕಾಡುತ್ತಿದ್ದುದು ಅವಳ ಸ್ವಾಭಿಮಾನಿ ಗುಣವನ್ನೇ ಹೇಳುತ್ತದೆ.

ಕ್ರಿ. ಶ. ೧೬೩೬ರಲ್ಲಿ ಮೊಗಲರ ದಖ್ಖನ್ ಯುದ್ಧ ಕೊನೆಗೊಂಡ ಬೆನ್ನಲ್ಲೆ ಷಹಜಿ ಭೌನ್ಸಲಾ ಬಿಜಾಪುರದ ಆದಿಲ್‌ಷಾಹಿಗಳ ಸೇವೆಗೆ ಸೇರುವ ಮೂಲಕ ಜೀವಭಯದಿಂದ ತತ್ತರಿಸಿಹೋಗಿದ್ದ ಜೀಜಾಬಾಯಿ ಮತ್ತು ಅವಳ ಮಗ ಶಿವಾಜಿಗೆ ಪೂನಾದ ಜಹಗೀರಿನ ಒಂದು ನೆಲೆ ಸಿಕ್ಕಿದ್ದೇನೋ ನಿಜ. ಆದರೆ ಆಡಳಿತಾಧಿಕಾರಿಯಾದ ದಾದಾಜಿ ಕೊಂಡದೇವನು ನೀಡುವ ನಿರ್ದೇಶನ, ತೋರುವ ಕೃಪೆಗಳೇ ಹೆಚ್ಚು ಚುರುಕಾಗಿದ್ದವು. ಇಂತಹ ಆಡಳಿತ ವ್ಯವಸ್ಥೆಯಿಂದ ಬದುಕಲು ಬೇಕಾದ ಭತ್ಯೆ ಪಡೆಯುತ್ತಿದ್ದು, ಪೂನಾದಲ್ಲಿ ಅವರು ವಾಸಿಸುತ್ತಿದ್ದ ಲಾಲ್‌ಮಹಲ್ ಜೀಜಾಬಾಯಿ ಮತ್ತು ಶಿವಾಜಿಗೆ ಒಂದು ರೀತಿಯಲ್ಲಿ ನಿರಾಶ್ರಿತರ ಶಿಬಿರದಂತೆಯೇ ಇತ್ತು. ಪೂರ್ಣ ಕುಟುಂಬ ವ್ಯವಸ್ಥೆಯಿಂದ ಶಿವಾಜಿ ವಂಚಿತನಾಗಿದ್ದನು. ಅವನು ಬಾಲ್ಯ ಅನಾಥತೆ, ಒಂಟಿತನಗಳನ್ನು ಅನುಭವಿಸುವಾಗ ಅವನ ಅಮ್ಮ ಜೀಜಾಬಾಯಿ ಪ್ರೀತಿ ವಾತ್ಸಲ್ಯದ ಧಾರೆಯೆರೆದು ಆತ್ಮವಿಶ್ವಾಸವನ್ನು ತುಂಬಿದವಳಾಗಿದ್ದಳು. ಎಲ್ಲಾ ಹೊಡೆತಗಳ ನಡುವೆಯೂ ಜೀಜಾಬಾಯಿಯ ಜೀವನೋತ್ಸಾಹಿ ಗುಣಸ್ವಭಾವ ಅವಳನ್ನು ಕ್ರಾಂತಿಕಾರಿ ಯನ್ನಾಗಿಸಿತು. ಫೀನಿಕ್ಸ್ ಹಕ್ಕಿಯಂತೆ ಹುಟ್ಟುವ, ಬೆಳೆಯುವ, ಹೋರಾಡುವ ಸ್ವಭಾವವನ್ನು ಶಿವಾಜಿಗೆ ತುಂಬುವಲ್ಲಿ ತನ್ನ ಉಳಿದೆಲ್ಲಾ ಜೀವನವನ್ನು ಸಮರ್ಪಿಸಿಕೊಂಡಳು.

ಅಗಾಧ ಶಕ್ತಿ ಸಾಮರ್ಥ್ಯ ಇದ್ದೂ ಅದರ ಅರಿವಿಲ್ಲದೆ ಅಣುಗಳಂತೆ ಸಿಡಿದುಹೋಗಿ ದಖ್ಖನ್ನಿನ ಶಕ್ತಿ ಕೇಂದ್ರಗಳಿಗೆ ಸೇವೆ ಸಲ್ಲಿಸುವ ಊಳಿಗದವರಂತೆ ಮರಾಠರು ಬದುಕುತ್ತಿದ್ದರು. ಅವರನ್ನು ಒಂದಾಗಿ ಬೆಸೆದು ಸ್ವತಂತ್ರ ಅಸ್ತಿತ್ವವನ್ನು ಮನನ ಮಾಡಿಕೊಡುವಲ್ಲಿ ಯಶಸ್ವಿಯಾಗಿದ್ದು ಶಿವಾಜಿಯ ವಿಶೇಷ ಸಾಧನೆ ಎಂಬ ಜೆ. ಎನ್. ಸರ್ಕಾರರ ಅಭಿಪ್ರಾಯವನ್ನು ಗಮನಿಸಬಹುದು. ಇದರಲ್ಲಿ ತಾಯಿ ಜೀಜಾಬಾಯಿಯ ಪ್ರಭಾವ-ಮಾರ್ಗದರ್ಶನದ ಪಾಲು ಪ್ರಮುಖವಾಗಿತ್ತು. ಈ ಪ್ರೇರಣೆ ಇಲ್ಲದಿದ್ದರೆ ಶಿವಾಜಿ ಸಾಗುತ್ತಿದ್ದ ಹಾದಿ, ತಲುಪುತ್ತಿದ್ದ ಗುರಿಯೇ ಬದಲಾಗಬಹುದಿತ್ತು. ಜೀಜಾಬಾಯಿ ಮತ್ತು ಶಿವಾಜಿ ಬಿಜಾಪುರಕ್ಕೆ ನೀಡಿದ ಭೇಟಿಯ ಸಂದರ್ಭವನ್ನು ಬರಹಗಾರ ಡೇವಿಡ್ ಕಿನ್‌ಸೈಡ್ ಸರಿಯಾಗಿಯೆ ಗುರುತಿಸಿರುವಂತೆ, ತಂದೆಯ ಪ್ರಭಾವಕ್ಕೆ ಶಿವಾಜಿ ಒಳಗಾಗಿ ಬಿಜಾಪುರದಲ್ಲೇ ಉಳಿದಿದ್ದರೆ ಕಾಲ ಕಳೆದಂತೆ ಬಿಜಾಪುರದ ಪಾಳೇಗಾರಿ ಜೀವನದ ಆಕರ್ಷಣೆಗೆ ಶರಣಾಗಿ ಅಲ್ಲಿಯೇ ಸಂತೋಷದಿಂದ ನೆಲೆಸಿ ಕ್ರಮೇಣ ಬಾಲ್ಯ ಜೀವನ ಮತ್ತು ಪ್ರಾರಂಭಿಕ ಬದುಕಿನ ಪ್ರಭಾವಿ ಗುರುತುಗಳನ್ನು ಮರೆಯುತ್ತಿದ್ದ. ಈ ಮಾತೇನೋ ಗಮನೀಯ. ಆದರೆ ಡೇವಿಡ್ ಕಿನ್‌ಸೈಡನ ಮಿತಿಯಿರುವುದು, ಬಿಜಾಪುರದ ಆಡಳಿತ ಫ್ಯೂಡಲ್ ಆಗಿ ಕಟೆ ಕಟೆ ಮೇಲೆ ನಿಂತು ಮರಾಠ ಶಿವಾಜಿಯ ಆಡಳಿತ ನಿರ್ದೋಷಿಯಾಗುವಲ್ಲಿ. ಆದರೆ ಇಡೀ ಶಕ್ತಿ ರಾಜಕಾರಣದ ನಡುವಿನ ಸಂಘರ್ಷ ಮತ್ತು ದೃಷ್ಟಿಕೋನ ಮೂಲ ಸ್ವರೂಪಿಯಾಗಿ ಊಳಿಗಮಾನ್ಯವಾದುದು ಎಂಬುದನ್ನು ಮರೆಯಲಾಗದು.

**ಹನಿ ಹನಿ...**

ಬತ್ತಿದರೇನು
ನದಿಗಳು,
ಹರಿಯುತ್ತಿವೆ
ನೆತ್ತರ ಹೊಳೆ !

ಮಹಿಳೆಯೊಬ್ಬಳ ಸಂಸಾರವಂಚಿತ ಬದುಕು ಸ್ವತಂತ್ರ ಮರಾಠ ರಾಜ್ಯ ನಿರ್ಮಾಣದಲ್ಲಿ ಫಲಿತವಾಗಿರುವುದನ್ನು ಉದಾತ್ತೀಕರಿಸುವುದು ರಾಜಶಾಹಿ-ಪುರೋಹಿತಶಾಹಿಯ ಮಾನದಂಡದಲ್ಲಿ ಮೌಲ್ಯವಾಗುತ್ತದೆ. ಹೆಣ್ಣಿನ ತ್ಯಾಗದ ವೈಭವೀಕರಣ ಆಳುವ ವರ್ಗವು ತೋರುವ ಅಹಂಕಾರದ ದೊಡ್ಡಸ್ತಿಕೆಯಾಗುತ್ತದೆ. ಪಾಳೇಗಾರಿ ವ್ಯವಸ್ಥೆಯ ಹಿನ್ನೆಲೆಯಲ್ಲಿ ರೂಪುಗೊಂಡ ಜೀಜಾಬಾಯಿಯ ಬದುಕು - ಬವಣೆಯನ್ನು ಮತ್ತು ಅವಳು ತಳೆದ ನಿಲುವನ್ನು ಸರಿಯಾಗಿ ಗುರುತಿಸದೆ ಮಧ್ಯಕಾಲೀನ ರಾಜಕೀಯದಲ್ಲಿ ಆಳುವ ಶಕ್ತಿಗಳ ಸಂಘರ್ಷ ಮುಖ್ಯವಾಗಿ ವರ್ಗ ಮತ್ತು ಭೂ ಹಿತಾಸಕ್ತಿಗಳಿಗೆ ಸಂಬಂಧಿಸಿರುವುದನ್ನು ನಿರ್ಲಕ್ಷಿಸಿ ಧರ್ಮಗಳೊಂದಿಗೆ ತಳುಕುಹಾಕುವ ರೂಢಿಗತ ಧೋರಣೆ ಪ್ರಶ್ನಾರ್ಹವಾದುದು. ಹಿಂದೂ ಆಶಾಕಿರಣದಂತೆ ಜೀಜಾಬಾಯಿ ಮತ್ತು ಶಿವಾಜಿಯನ್ನೂ, ಮಹಮದೀಯ ಆದಿಲ್‌ಷಾಹಿಗಳು ಆಳಿದ ಬಿಜಾಪುರವನ್ನು ಇಸ್ಲಾಮಿಕ್ ನಗರವೆಂದು ಕಂಡಿರಿಸಿ ಮುಖಾಮುಖಿಗೊಳಿಸುತ್ತಲೇ ಹಿಂದೂ ಸಿದ್ಧಾಂತಪರ ವಕಾಲತ್ತು ವಹಿಸುವ ನಮ್ಮ ಚರಿತ್ರೆ ಬರವಣಿಗೆಗಳು ನಿಜಸ್ಥಿತಿಗೆ ವಿಮುಖವಾಗಿ ಚರಿತ್ರೆಯನ್ನು ಕೋಮುವಾದೀಕರಣಗೊಳಿಸುತ್ತವೆ. ಇತ್ತಲಾಗಿ ಬಿಜಾಪುರದ ಆದಿಲ್‌ಷಾಹಿಗಳ ಸೇವೆಯಲ್ಲಿದ್ದ ಷಹಜಿ ಭೌನ್ಸಲಾನ ಸ್ವತಃ ಬಯಕೆಯೊ ಇಲ್ಲವೆ ಬಿಜಾಪುರದ ಆದಿಲ್‌ಷಾಹಿಗಳ ನಿರ್ದೇಶನದ ಮೇರೆಗೋ ಆಹ್ವಾನ ಪಡೆದು ಬಹುಶಃ ೧೬೪೦ ಮತ್ತು ೧೬೪೩ರ ಮಧ್ಯದ ಅವಧಿಯಲ್ಲಿ ಕೆಲ ಕಾಲದವರೆಗೆ ಜೀಜಾಬಾಯಿ ಮತ್ತು ಶಿವಾಜಿ ಬಿಜಾಪುರದಲ್ಲಿ ತಂಗಿದ್ದಾಗ ಸಿಗುವ ಚಿತ್ರಣವೇ ವಿವಾದ ಗ್ರಸ್ತವಾದುದು. ಶಿವಾಜಿಯ ವಿವಾಹಕ್ಕೆ ಸಂಬಂಧಿಸಿದಂತೆ ಏಳುವ ಪ್ರಶ್ನೆ, ಬಿಜಾಪುರ ಸ್ಥಳದಲ್ಲಿ ಮಗನ ಮದುವೆಗೆ ನಿರಾಕರಿಸುವ ಜೀಜಾಬಾಯಿ, ಆದಿಲ್‌ಷಾಹಿಗಳೊಂದಿಗೆ ಶಿವಾಜಿಯ ಸಿಡಿಲಮೊಗ್ಗಿನ ನಡವಳಿಕೆ ಇವೆಲ್ಲವನ್ನೂ ಅರ್ಥೈಸುವ ರೀತಿಯೆ ಸ್ಫೋಟನಾಕಾರಿಯಾದುದಾಗಿದೆ.

ತನ್ನ ಮಗನ ಸ್ಥಾನಮಾನ ಗೌರವ ಗಳಿಕೆಗಾಗಿ ತನ್ನ ಜೀವನವನ್ನೇ ಮುಡಿಪಿಟ್ಟಿದ್ದ ಜೀಜಾಬಾಯಿ ಮಾಡಿದ ವಾದ, ಹೂಡಿದ ಕಾರ್ಯತಂತ್ರ, ಒದಗಿಸಿದ ಸಮರ್ಥನೆ ಹಲವು ಹತ್ತು. ಶಿವಾಜಿಗೆ ಹನ್ನೆರಡು ವರ್ಷ ತುಂಬಿದಾಗ ಆ ಕಾಲದ ಸಂಪ್ರದಾಯದಂತೆ ವಿವಾಹ ಮಾಡುವ ಉತ್ಸಾಹವನ್ನು ತೋರಿದ್ದಳು. ಬಿಜಾಪುರದಲ್ಲಿದ್ದ ತನ್ನ ಗಂಡ ಶಹಜಿಗೆ ಪತ್ರ ಬರೆದು ಶಿವಾಜಿಯ ವಿವಾಹ ನೆರವೇರಿಸುವಂತೆ ಮತ್ತು ಅವನು ಮೊದಲ ದರ್ಜೆ ಸರದಾರನ ಮಗನಾಗಿದ್ದು, ಅವನಿಗೆ ಹೆಚ್ಚಿನ ಅವಕಾಶ ಕಲ್ಪಿಸಿಕೊಡಬೇಕು; ಅನೈತಿಕ ಮಗನ ರೀತಿ ಕೇವಲ ಜೀವನ ಹೊರೆಯಲಷ್ಟೆ ಸಾಕಾಗುವ ಸೌಲಭ್ಯ ನೀಡಬಾರದೆಂದು ಒತ್ತಾಯಿಸಿದ್ದಳು. ೧೬೪೦ರ ಹೊತ್ತಿಗೆ ಬೆಂಗಳೂರಿನ ಜಹಗೀರು ಷಹಜಿ ಭೌನ್ಸಲಾನಿಗೆ ಆದಿಲ್‌ಷಾಹಿಗಳಿಂದ ಲಭ್ಯವಾಗಿದ್ದು, ಅಲ್ಲಿಗೆ ಬಹುಶಃ ೧೬೪೧ರಲ್ಲಿ ಜೀಜಾಬಾಯಿ ಮತ್ತು ಶಿವಾಜಿ ಭೇಟಿ ನೀಡಿದ್ದರು. ಈ ಹಂತದಲ್ಲಿ ಅಂತಃಪುರದ ಘರ್ಷಣೆ ಮತ್ತಷ್ಟು ವಿಘಟನಕಾರಿಯಾಗಿ ವ್ಯಕ್ತಗೊಳ್ಳುತ್ತದೆ. ತಮ್ಮ ತಮ್ಮ ಮಕ್ಕಳಿಗೆ ಹಕ್ಕುದಾರಿಕೆ ಸ್ಥಾಪಿಸಲು ಪೈಪೋಟಿ ಜರುಗುತ್ತದೆ. ಶಿವಾಜಿ ತನ್ನ ತಂದೆಯಿಂದ ಬೆಂಗಳೂರು ಮತ್ತು ಇತರೆ ಹೊಸ ಪ್ರದೇಶಗಳ ಅಧಿಕಾರ ಮತ್ತು ಸಂಪತ್ತಿನಲ್ಲಿ ನ್ಯಾಯಯುತ ಪಾಲು ಪಡೆಯುವಲ್ಲಿ ವಂಚಿತನಾದ ಅಂಶವನ್ನು ಸಹಜವಾಗಿಯೇ ಜೀಜಾಬಾಯಿ ಷಹಜಿಯ ಗಮನಕ್ಕೆ ತಂದಿದ್ದಳು. ಕೊನೆಗೆ ರಾಜಿ ನಡೆದು ವಾರ್ಷಿಕ ರೂ. ೪೦,೦೦೦ ಆದಾಯ ತರುತ್ತಿದ್ದ ಪೂನಾ ಜಹಗೀರು ಷಹಜಿಯ ಮರಣದ ನಂತರ ಶಿವಾಜಿಗೆ ದಕ್ಕುವಂತೆ ಮಾಡುವಲ್ಲಿ ಸಫಲಳಾದಳು. ಬೆಂಗಳೂರು ಭೇಟಿಯ ನಂತರ ಪೋಷಕನಾಗಿದ್ದ ದಾದಾಜಿ ಕೊಂಡದೇವ ಪೂನಾ ಜಹಗೀರ್‌ನ ಕ್ಯಾಬಿನೆಟ್‌ಅನ್ನು ಮತ್ತು ಮಹಜರ್‌ಅನ್ನು ಜೀಜಾಬಾಯಿ ಮತ್ತು ಶಿವಾಜಿಯ ಜೊತೆಯಲ್ಲಿ ಹಂಚಿಕೊಂಡು ನಡೆಸತೊಡಗಿದನು. ಶಿವಾಜಿಯನ್ನು ನ್ಯಾಯಬದ್ಧಗೊಳಿಸುವ ಈ ನೂತನ ವ್ಯವಸ್ಥೆಯ ಜಾರಿಗೆ ಜೀಜಾಬಾಯಿಯ ಪ್ರಯತ್ನವೇ ಕಾರಣವೆಂಬುದು ಗಮನೀಯ. ಈ ನಂತರ ಶಿವಾಜಿಗೆ ಆಡಳಿತದ ಹೆಚ್ಚೆಚ್ಚು ಮಾಹಿತಿ, ಅನುಭವ ಲಭ್ಯವಾಗಿ ಸ್ವಾತಂತ್ರ್ಯಾಧಿಕಾರದ ಅಭೀಪ್ಸೆಯನ್ನು ತೀವ್ರಗೊಳಿಸಿತು.

ಕ್ರಿ. ಶ. ೧೬೬೪ರಲ್ಲಿ ಬಸವಾಪಟ್ಟಣದ ಬಳಿ ಷಹಜಿ ಮರಣಿಸಿದ ಸುದ್ದಿ ಜೀಜಾಬಾಯಿಗೆ ತೀವ್ರ ಆಘಾತ ತಂದಿತು. ಅವಳು ಸತಿ ಹೋಗಲು ನಿರ್ಧರಿಸಿದಳು. ಆದರೆ ಶಿವಾಜಿಯ ಕೋರಿಕೆಯನ್ನು ಮನ್ನಿಸಿ ಜೀಜಾಬಾಯಿ ಮುಂದೆ ಇನ್ನೂ ಹತ್ತು ವರ್ಷಗಳು ಅವನ ಜೊತೆ ಜೀವಿಸಿದ್ದಳು. ೧೬೭೪ರಲ್ಲಿ ರಾಯಗಢದಲ್ಲಿ ಶಿವಾಜಿ ಛತ್ರಪತಿ ಸ್ಥಾನಮಾನದೊಂದಿಗೆ ಪಟ್ಟಾಭಿಷಿಕ್ತನಾಗುವುದನ್ನು ಕಂಡಿದ್ದಳು. ''ಜೀಜಾಬಾಯಿ ತನ್ನ ಮಗ ಹಿಂದೂ ಸಿಂಹಾಸನಾಧಿಪತಿಯಾಗುವುದನ್ನು ಕಾಣುವ ಕ್ಷಣಕ್ಕಾಗಿ ಬದುಕಿದ್ದಳು; ಅದಕ್ಕಿಂತ ಹೆಚ್ಚಿನ್ನೇನೂ ಜೀವನದಲ್ಲಿ ಆಶಿಸಿರಲಿಲ್ಲ'' ಎಂದು ತೀವ್ರಗಾಮಿ ರಾಷ್ಟ್ರೀಯವಾದಿಯಾಗಿ ಗುರುತಿಸಿಕೊಂಡಿದ್ದ ಆರ್ಯ ಸಮಾಜಿ ಲಾಲಾ ಲಜಪತ್ ರಾಯ್‌ರ ಸಂತುಷ್ಟದ ಹಿಂದೆ ನಿಜವಾದ ಜೀಜಾಬಾಯಿಯ ನೆಲೆ ಮಸುಕಾಗಿ ಉಳಿದುಬಿಡುತ್ತದೆ.

ಡಾ|| ತಿಮ್ಮನಹಳ್ಳಿ ವೇಣುಗೋಪಾಲ್
ಇತಿಹಾಸ ಅಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಶಿರಾ - ೫೭೨ ೧೩೭, ತುಮಕೂರು ಜಿಲ್ಲೆ

# ಎನ್‌ಬಿಟಿಯ ಇತ್ತೀಚಿನ ಪ್ರಕಟಣೆಗಳು

ಜನಪ್ರಿಯ ಸಮಾಜ ವಿಜ್ಞಾನ ಮಾಲೆ

**ಬಂಡಾಯ 1857**
ಸಂ : ಪಿ. ಸಿ. ಜೋಶಿ — ಅನು : ಎಂ. ಅಬ್ದುಲ್ ರೆಹಮಾನ್ ಪಾಷ
ಪು. 374 — ರೂ. 110.00
**ಭಾರತೀಯ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ವಿಶ್ಲೇಷಣೆ.**

**ಮಾಹಿತಿ ಹಕ್ಕು ಕಾಯಿದೆ**
ಸುಚಿ ಪಾಂಡೆ, ಶೇಖರ್ ಸಿಂಗ್ — ಅನು : ಕೆ. ಎಚ್. ಶ್ರೀನಿವಾಸ
ಪು. 90 — ರೂ. 25.00
**ಮಾಹಿತಿ ಹಕ್ಕು ಕಾಯಿದೆ ಕುರಿತು ಒಂದು ಪರಿಚಯ ಹೊತ್ತಗೆ.**

**ಕಾಲಾಪಾನಿ**
ಪ್ರಮೋದ್ ಕುಮಾರ್ — ಅನು : ನಾ. ವುಜಿರೆ
ಪು. 142 — ರೂ. 55.00
**ಕಾಲಾಪಾನಿ ಶಿಕ್ಷೆಗೊಳಗಾದ ರಾಜಕೀಯ ಕೈದಿಗಳ ಅನುಭವಗಳ ದಾಖಲೆ.**

ಭಾರತ – ದೇಶ ಮತ್ತು ಜನ

**ಭಾರತದಲ್ಲಿ ಪಂಚಾಯತಿ ರಾಜ್**
ಎಂ. ಅಸ್ಲಂ — ಅನು : ಈಶ್ವರಚಂದ್ರ
ಪು. 234 — ರೂ. 90.00
**ಪಂಚಾಯತಿ ರಾಜ್ ವ್ಯವಸ್ಥೆಯ ವಿಕಾಸ ಹಾಗೂ ಆಶಯಗಳ ಮಾಹಿತಿ.**

ಜನಪ್ರಿಯ ವಿಜ್ಞಾನ ಮಾಲೆ

**ಮಕ್ಕಳು ಮತ್ತು ಅವರ ಆರೈಕೆ**
ಸುಭಾಷ್ ಆರ್ಯ — ಅನು : ಡಿ. ಎನ್. ಶ್ರೀನಾಥ್
ಪು. 212 — ರೂ. 75.00
**ಮಕ್ಕಳ ಆರೈಕೆ ಕುರಿತು ಪೋಷಕರಿಗೊಂದು ಉಪಯುಕ್ತ ಕೈಪಿಡಿ.**

ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ

**ಝಾನ್ಸಿಯ ರಾಣಿ ಲಕ್ಷ್ಮಿಬಾಯಿ**
ಪ್ರತಿಭಾ ರಾನಡೆ — ಅನು : ವಿಠಲರಾವ್ ಗಾಯಕ್ವಾಡ್
ಪು. 386 — ರೂ. 125.00
**ಲಕ್ಷ್ಮಿಬಾಯಿಯ ವ್ಯಕ್ತಿತ್ವ ಮತ್ತು ಹೋರಾಟದ ವಿವರ.**

**ಕಮಲಾದೇವಿ ಚಟ್ಟೋಪಾಧ್ಯಾಯ**
ಜಸಲೀನ್ ಧಮೀಜ — ಅನು : ಬಸು ಬೇವಿನಗಿಡದ
ಪು. 160 — ರೂ. 60.00
**ಕಮಲಾದೇವಿಯವರ ರಾಜಕೀಯ, ಸಾಮಾಜಿಕ ಮತ್ತು ಸೃಜನಶೀಲ ಬದುಕಿನ ಚಿತ್ರಣ.**

ನೆಹರೂ ಬಾಲ ಪುಸ್ತಕಾಲಯ

**ಭಾರತೀಯ ಸಂಗೀತ ಪರಂಪರೆ**
ಮಂಜರಿ ಜೋಶಿ — ಅನು : ನಾ. ವುಜಿರೆ
ಪು. 90 — ರೂ. 35.00
**ಸಂಗೀತ ಪರಂಪರೆಯ ಸರಳ ಹಾಗೂ ಸಂಕ್ಷಿಪ್ತ ಪರಿಚಯ.**

**ನನ್ನ ತಂಗಿ ನೇಹಾ**
ಮಧು ಬಿ. ಜೋಶಿ — ಅನು : ಎಚ್. ನಾಗರಾಜಪ್ಪ
ಪು. 16 — ರೂ. 19.00
**ಪುಟ್ಟ ಮಕ್ಕಳ ಆತ್ಮೀಯ ಸಂಬಂಧದ ಚಿತ್ರಣ.**

ನವಸಾಕ್ಷರ ಸಾಹಿತ್ಯ ಮಾಲೆ

**ಧನಿಯರ ಸತ್ಯನಾರಾಯಣ**
ಕೊರಡ್ಕಲ್ ಶ್ರೀನಿವಾಸರಾವ್ — ರೂಪಾಂತರ : ಲಿಂಗದೇವರು ಹಳೆಮನೆ
ಪು. 16 — ರೂ. 9.00
**ಜಮೀನುದಾರನೊಬ್ಬ ಬಡವರನ್ನು ಶೋಷಿಸುವ ಹೃದಯವಿದ್ರಾವಕ ಕತೆ.**

**ನನ್ನ ಭಾವ**
ಪಡುಕೋಣೆ ರಮಾನಂದರಾವ್ — ರೂಪಾಂತರ : ಕೃಷ್ಣಮೂರ್ತಿ ಹನೂರು
ಪು. 20 — ರೂ. 10.00
**ಅಸಂಬದ್ಧ ಪ್ರಶ್ನೆ ಕೇಳಿ ನಗೆಪಾಟಲಿಗೀಡುವ ಭಾವನೊಬ್ಬನ ಹಾಸ್ಯಮಯ ಪ್ರಸಂಗಗಳು.**

**ಶುದ್ಧ ಘಟಿಂಗ**
ಬಾಗಲೋಡಿ ದೇವರಾಯ — ರೂಪಾಂತರ : ನಾ. ದಾಮೋದರ ಶೆಟ್ಟಿ
ಪು. 12 — ರೂ. 9.00
**ಘಟಿಂಗ ಎನ್ನಿಸಿಕೊಂಡರೂ ಮಾನವೀಯತೆ ಮೆರೆವ ವ್ಯಕ್ತಿಯ ಕತೆ.**

ಹೆಚ್ಚಿನ ವಿವರ ಹಾಗೂ ಪ್ರತಿಗಳಿಗೆ ಸಂಪರ್ಕಿಸಿ :




ರೀಜನಲ್ ಮ್ಯಾನೇಜರ್
ದಕ್ಷಿಣ ಪ್ರಾದೇಶಿಕ ಕಾರ್ಯಾಲಯ
ನ್ಯಾಶನಲ್ ಬುಕ್ ಟ್ರಸ್ಟ್, ಇಂಡಿಯಾ
ಹಾಲ್ ನಂ. 1, ಬಿಡಿಎ ಶಾಪಿಂಗ್ ಕಾಂಪ್ಲೆಕ್ಸ್,
ಬನಶಂಕರಿ 2ನೇ ಹಂತ, ಬೆಂಗಳೂರು – 560 070
ದೂರವಾಣಿ, ಫ್ಯಾಕ್ಸ್ : 080 – 26711994

ನ್ಯಾಶನಲ್ ಬುಕ್ ಟ್ರಸ್ಟ್, ಇಂಡಿಯಾ
ನೆಹರೂ ಭವನ, 5,
ಇನ್‌ಸ್ಟಿಟ್ಯೂಶನಲ್ ಏರಿಯಾ ಫೇಸ್ - II
ವಸಂತ್ ಕುಂಜ್, ಹೊಸ ದೆಹಲಿ – 110 070
ದೂರವಾಣಿ : 011 – 26707700
ಫ್ಯಾಕ್ಸ್ : 011 – 26121883

# ಪನಾಮಾ ಲೂಟಿಗೆ ಕ್ಯಾಮಿನೊ ರಿಯಲ್



ಕದ್ದು ಸಾಗಿಸಲು ಕಳ್ಳಹಾದಿ

ಡಾ|| ಜಿ. ರಾಮಕೃಷ್ಣ

ದಕ್ಷಿಣ ಅಮೆರಿಕಾ ಮತ್ತು ಉತ್ತರ ಅಮೆರಿಕಾಗಳನ್ನು ಸೇರಿಸುವ ಭೂಭಾಗ ಕಡಿಮೆ ಎನಿಸುತ್ತದೆ. ಭೂಪಟಗಳು ನಿಜವಾದ ವಿಸ್ತೀರ್ಣವನ್ನು ಸ್ವಲ್ಪ ಮರೆಸಿಬಿಡುತ್ತವೆ. ಮೆಕ್ಸಿಕೋದಿಂದ ದಕ್ಷಿಣಕ್ಕೆ ಗ್ವಾಟೆಮಾಲ, ಎಲ್ ಸಾಲ್ವಡೋರ್, ಹೊಂಡುರಸ್, ನಿಕರಾಗ್ವ, ಕೋಸ್ಟ ರಿಕ, ಅವುಗಳ ನಂತರ ಪನಾಮ. ಅದಾದನಂತರ ಕೊಲಂಬಿಯ. ಪನಾಮ ಎಂಬುದನ್ನು ಹಾಗೆನ್ನಬೇಕೋ ಅಥವಾ ಪಾನಮ ಎನ್ನಬೇಕೋ ಎಂದು ಗಲಿಬಿಲಿ ಉಂಟಾಗುತ್ತಿತ್ತೆಂದು ಡಾ|| ಎಚ್. ನರಸಿಂಹಯ್ಯ ಹೇಳುತ್ತಿದ್ದರು. ಶಾಲೆಯಲ್ಲಿ ಹೇಳಿಕೊಟ್ಟಿದ್ದುದು 'ಪನಾಮಾ' ಎಂದು. ಆದರೆ ಓಹಾಯೋ ರಾಜ್ಯದಲ್ಲಿ ಅವರು ಪಿಎಚ್.ಡಿ.ಗಾಗಿ ವ್ಯಾಸಂಗ ಮಾಡಲು ಹೋಗಿದ್ದಾಗ ಹಾಗೆಂದು ಹೇಳಿದರೆ 'ಪಾನಮ' ಎಂದು ತಿದ್ದುತ್ತಿದ್ದರಂತೆ. ದೇಶಗಳನ್ನೇ ತಿದ್ದಿಹಾಕಿದ ಅಮೆರಿಕಾಕ್ಕೆ ಹೆಸರು ತಿದ್ದುವುದು ಏನು ಮಹಾ! ಈಗ ತಾನೆ ಹೆಸರಿಸಿದ ಎಲ್ಲ ದೇಶಗಳನ್ನೂ ಲೂಟಿ ಮಾಡಿ ಧ್ವಂಸಗೊಳಿಸಿದ ''ಕೀರ್ತಿ'' ವಾಷಿಂಗ್‌ಟನ್ ರಾಜಧಾನಿಯಾಗಿರುವ ಅಮೆರಿಕಾ ದೇಶದ್ದು.

ಭೂಪಟವನ್ನು ನೋಡಿ ಒಂದು ವ್ಯಂಗ್ಯಚಿತ್ರ ಕಲ್ಪಿಸಿಕೊಂಡರೆ ದಕ್ಷಿಣ ಅಮೆರಿಕಾವನ್ನು ಉತ್ತರ ಅಮೆರಿಕಾ ಲೂಟಿ ಮಾಡಿದ ವಿಧಾನ ತಿಳಿಯುತ್ತದೆ. ಈ ವ್ಯಂಗ್ಯಚಿತ್ರವನ್ನು ಹಲವು ದಶಕಗಳ ಹಿಂದೆ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ಮಾಸಿಕ 'ಸೆಚಾಬ' ಪ್ರಕಟಿಸಿತ್ತು. ಹುಲ್ಲಿನ ಟೋಪಿ ಧರಿಸಿದ ಒಬ್ಬ ರೈತ ದಕ್ಷಿಣ ಅಮೆರಿಕಾದ ದಕ್ಷಿಣದಲ್ಲಿ ಕೃಷಿ ಮಾಡಿ ತೆಂಗಿನ ಗಿಡ ಬೆಳೆಸುತ್ತಿದ್ದಾನೆ. ಅವನ ಮೈಮೇಲೆ ಬಟ್ಟೆ ಕಡಿಮೆ, ಬರಿಗಾಲು, ಕುರುಚಲು ಗಡ್ಡ, ಜೋರಾಗಿ ಗಾಳಿ ಬೀಸಿದರೆ ತೇಲಿಹೋಗುವಷ್ಟು ಕೃಶ ಶರೀರ ಅವನದು. ಗಿಡಕ್ಕೆ ನೀರುಣಿಸಿ, ಗೊಬ್ಬರ ಹಾಕಿ, ಬೆವರು ಸುರಿಸಿ ಕಂಗಾಲಾಗಿದ್ದಾನೆ. ಗಿಡವು ಅತ್ಯುತ್ತಮ ಫಲ ನೀಡಿದೆ. ಬೇರು ದಕ್ಷಿಣ ಅಮೆರಿಕಾದಲ್ಲಿ, ತೆಂಗಿನ ಕಾಯಿ ಗೊಂಚಲುಗಳು ಉತ್ತರ ಅಮೆರಿಕಾದಲ್ಲಿ. ಅಲ್ಲೊಬ್ಬ ನಕ್ಷತ್ರ ಮತ್ತು ಗೀಟುಗಳಿರುವ ಧ್ವಜವನ್ನು ಹೋಲುವ ಟಾಪ್ ಹ್ಯಾಟ್ ಧರಿಸಿ ಕಾಯಿ ಕಿತ್ತು ಬುಟ್ಟಿಗೆ ತುಂಬಿಕೊಳ್ಳುತ್ತಿದ್ದಾನೆ. ಅವನ ವೇಷಭೂಷಣ ಟಿಪ್-ಟಾಪ್. ನಗೆ ಮುಖ, ಹಲ್ಲು ಗಿಂಜುತ್ತಿದ್ದಾನೆ. ಶ್ರಮವೇ ಇಲ್ಲದೆ ಫಲ ದೊರೆಯುತ್ತಿದೆ, ಊರಗಲ ಮುಖ ಮಾಡದೆ ಇನ್ನೇನು ಮಾಡಬೇಕು!

ಎರಡು ವಿಶಾಲ ಭೂಭಾಗಗಳ ನಡುವಣ ಕಿರಿದಾದ ಭೂಭಾಗವನ್ನು ಹದಿನಾರನೆಯ ಶತಮಾನದಿಂದ ಸ್ಪೇನ್ ಆಕ್ರಮಿಸಿಕೊಂಡು, ಅಲ್ಲಿನ ಜನರನ್ನು ಕೊಚ್ಚಿಹಾಕಿ, ಸಂಪತ್ತನ್ನು ಹಡುಗುಗಳಲ್ಲಿ ತುಂಬಿಕೊಂಡು ಹೋಯಿತು. ಹತ್ತೊಂಬತ್ತನೆಯ ಶತಮಾನದಲ್ಲಿ ವಾಷಿಂಗ್‌ಟನ್‌ನಲ್ಲಿದ್ದ ಯಜಮಾನರು ಈ ದೇಶಗಳನ್ನು 'ನಾಗರಿಕತೆಯತ್ತ ಒಯ್ಯಲು' ಪರಮಾತ್ಮನ ಆದೇಶವಾಯಿತೆಂದು ಹೇಳಿಕೊಂಡು ಅಲ್ಲಿಗೆ ನುಗ್ಗಿ ಮನಬಂದಂತೆ ಜನರನ್ನು ಗುಲಾಮರನ್ನಾಗಿ ಮಾಡಿದರು, ಸಂಪತ್ತನ್ನು ಕದ್ದೊಯ್ದರು. ಇಪ್ಪತ್ತನೆಯ ಶತಮಾನವಿಡೀ ಈ ಭಯಾನಕ ಬರ್ಬರತೆಯನ್ನು ಪ್ರದರ್ಶಿಸಿದ ಅಮೆರಿಕಾಕ್ಕೆ ಪ್ರಸ್ತುತ ಶತಮಾನದಲ್ಲಿನ್ನೂ ದಾಹ ಹಿಂಗಿಲ್ಲದಿರುವುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಆ ಇತಿಹಾಸವನ್ನು ಕೆದಕಿದರೆ ಒಬಾಮ ಮತ್ತು ಅವನ ಪೂರ್ವದವರ ಸಂಸ್ಕೃತಿಯ ಪರಿಚಯವಾಗುತ್ತದೆ.

ಪನಾಮಾದ ಒಟ್ಟು ವಿಸ್ತೀರ್ಣ ೨೯,೦೦೦ ಚದುರ ಮೈಲಿಗಳು; ಅದರಲ್ಲಿ ಶೇಕಡ ಎಪ್ಪತ್ತು ಭಾಗದಲ್ಲಿ ಕಾಡು ಮತ್ತು ಪೊದೆಗಳು. ಈಗ ಶೇ. ೫೦ ಸಹ ಇಲ್ಲ. ಜನಸಂಖ್ಯೆ ಬಹುಶಃ ಒಂದು ಕೋಟಿಯೂ ಇರಲಾರದು. ಆದರೆ ಪನಾಮಾ ನಗರದ ವಿಮಾನ ನಿಲ್ದಾಣವು ಬಹಳ ದೊಡ್ಡದು. ನಿಮಿಷಕ್ಕೊಂದು ವಿಮಾನ ಹಾರುತ್ತದೆಯೋ ಎನಿಸಿಬಿಟ್ಟೀತು. ಇದಕ್ಕೆ ಕಾರಣ ಅದು 'ಹಬ್', ಅಂದರೆ ಕೇಂದ್ರಸ್ಥಾನ. ಎರಡೂ ಅಮೆರಿಕಾಗಳ ಎಲ್ಲ ದೇಶಗಳವರೂ ಇಲ್ಲಿ ಪಾದಸ್ಪರ್ಶ ಮಾಡಿ ನಂತರ ತಮಗೆ ಬೇಕಾದೆಡೆಗೆ ಹಾರುತ್ತಾರೆ. ಅಂತಹ ''ಗೌರವ'' ಪನಾಮಾಕ್ಕೆ! ಪೆಸಿಫಿಕ್ ಮತ್ತು ಕೆರಿಬಿಯನ್ ಸಾಗರಗಳ ನಡುವೆ ಪನಾಮಾ ಕಾಲುವೆಯ ಮೂಲಕ ಹಡಗುಗಳು ಹಾದುಹೋಗುತ್ತವೆ. ಆದ್ದರಿಂದ ಆ ದೇಶಕ್ಕೆ ಪ್ರಾಶಸ್ತ್ಯ. ಕಾಲುವೆ ಇಲ್ಲದಿದ್ದರೆ ಸಾವಿರಾರು



ಅಂದಿನ ಕಳ್ಳಹಾದಿಯ ಇಂದಿನ ಅನ್ವೇಷಕರು

ಎರಡು ವಿಶಾಲ ಭೂಭಾಗಗಳ ನಡುವಣ ಕಿರಿದಾದ ಭೂಭಾಗವನ್ನು ಹದಿನಾರನೆಯ ಶತಮಾನದಿಂದ ಸ್ಪೇನ್ ಆಕ್ರಮಿಸಿಕೊಂಡು, ಅಲ್ಲಿನ ಜನರನ್ನು ಕೊಚ್ಚಿಹಾಕಿ, ಸಂಪತ್ತನ್ನು ಹಡುಗುಗಳಲ್ಲಿ ತುಂಬಿಕೊಂಡು ಹೋಯಿತು. ಹತ್ತೊಂಬತ್ತನೆಯ ಶತಮಾನದಲ್ಲಿ ವಾಷಿಂಗ್‌ಟನ್‌ನಲ್ಲಿದ್ದ ಯಜಮಾನರು ಈ ದೇಶಗಳನ್ನು 'ನಾಗರಿಕತೆಯತ್ತ ಒಯ್ಯಲು' ಪರಮಾತ್ಮನ ಆದೇಶವಾಯಿತೆಂದು ಹೇಳಿಕೊಂಡು ಅಲ್ಲಿಗೆ ನುಗ್ಗಿ ಮನಬಂದಂತೆ ಜನರನ್ನು ಗುಲಾಮರನ್ನಾಗಿ ಮಾಡಿದರು , ಸಂಪತ್ತನ್ನು ಕದ್ದೊಯ್ದರು. ಇಪ್ಪತ್ತನೆಯ ಶತಮಾನವಿಡೀ ಈ ಭಯಾನಕ ಬರ್ಬರತೆಯನ್ನು ಪ್ರದರ್ಶಿಸಿದ ಅಮೆರಿಕಾಕ್ಕೆ ಪ್ರಸ್ತುತ ಶತಮಾನದಲ್ಲಿನ್ನೂ ದಾಹ ಹಿಂಗಿಲ್ಲದಿರುವುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ.



ಸ್ಥಳೀಯರೊಡನೆ ಹಾದಿಯ ಚರ್ಚೆಯಲ್ಲಿ ಸ್ಪ್ರಾಸಿಂಗ್

ಮೈಲಿಗಳನ್ನು ಸುತ್ತಿ ಹೋಗಬೇಕಾಗುತ್ತಿತ್ತು. ಕೆರಿಬಿಯನ್ ಸೇರಿದರೆ ನಂತರ ಅಟ್ಲಾಂಟಿಕ್ ಸೇರಬಹುದು. ಇಷ್ಟು ಮುಖ್ಯವಾದ ಕಾಲುವೆ ನಿರ್ಮಿಸಲು ಆ ದೇಶವನ್ನು ಯಾರು ತಾನೆ ಸೂರೆಮಾಡದೆ ಬಿಟ್ಟಾರು! ಅದೇ ಆ ದೇಶಕ್ಕೆ ಶಾಪವಾಗಿ ಪರಿಣಮಿಸಿತು. ೧೯೭೫ರಷ್ಟು ಈಚೆಗೆ ಕೂಡ ಪನಾಮಾ ತನ್ನ ಸಾಲಗಳನ್ನು ತೀರಿಸಲು ಒಟ್ಟು ರಫ್ತು ಮಾಡಿ ಗಳಿಸಿದ ಹಣದಲ್ಲಿ ಶೇ. ೫೫ರಷ್ಟನ್ನು ಬಡ್ಡಿಯಾಗಿ ಪಾವತಿ ಮಾಡುತ್ತಿತ್ತು. (ಅದೇನು ವಿಶೇಷ, ಭಾರತವೂ ಹೆಚ್ಚು ಕಡಿಮೆ ಅದನ್ನೇ ಮಾಡುತ್ತಿದೆ ಎಂದು ಹೇಳಿ ತಣ್ಣಗೆ ಕೂರಬಹುದು ಬೇಕಾದರೆ). ಅದೇ ಸುಮಾರಿನಲ್ಲಿ ಪನಾಮಾ ತನ್ನ ಕಾಲುವೆಯನ್ನು ಅಮೆರಿಕಾದ ವಸಾಹತು ಹಿಡಿತದಿಂದ ಮರಳಿ ಪಡೆಯಲು ಇನ್ನೂ ತಿಣುಕಾಡುತ್ತಿತ್ತು. ಈಗ ಅದು ''ಸ್ವತಂತ್ರ'' ದೇಶ, ಅಂದರೆ, ವಾಷಿಂಗ್‌ಟನ್‌ನಿಂದ ಬರುವ ಆಣತಿಯನ್ನು ಶಿರಸಾ ವಹಿಸಿ ಮಾಡಲು ಸ್ವತಂತ್ರ, ಅಷ್ಟೆ. ಹಾಗೆ ಮಾಡುವುದಿಲ್ಲವೆಂದೇನಾದರೂ ಹೇಳಿದರೆ ಅಮೆರಿಕಾದ ಸೈನ್ಯ ಪ್ರತ್ಯಕ್ಷವಾಗುತ್ತದೆ. ಇಪ್ಪತ್ತನೆಯ ಶತಮಾನದಲ್ಲಿ ಅದು ಹಲವು ಬಾರಿ ಘಟಿಸಿತು. ಅಮೆರಿಕಾವು ಪನಾಮಾಕ್ಕೆ ''ಸ್ವಾತಂತ್ರ್ಯ ಕೊಟ್ಟಿದ್ದೇ ಪನಾಮಾ ಕಾಲುವೆಯನ್ನು ಕಟ್ಟಿ ಸ್ವಾಧೀನ ಪಡಿಸಿಕೊಳ್ಳುವುದಕ್ಕೆ'' ಎಂದು ಹವರ್ಡ್ ಜ಼ಿನ್ ವ್ಯಥೆ ವ್ಯಕ್ತಪಡಿಸಿದ್ದಾನೆ. ೧೯೧೨ರಲ್ಲಿ ಆಗಿನ ಅಮೆರಿಕಾದ ಅಧ್ಯಕ್ಷ ವಿಲಿಯಂ ಟ್ಯಾಫ್ಟ್ ಹೇಳಿದ್ದ: ''ನಮ್ಮ ನಕ್ಷತ್ರ-ಗೀಟುಗಳ ಮೂರು ಧ್ವಜಗಳು ಕೆಲವೇ ದಿನಗಳಲ್ಲಿ ಮೂರು ದೂರದೂರದ ಪ್ರದೇಶಗಳಲ್ಲಿ ಹಾರಾಡಲಿವೆ; ಅವು ನಮ್ಮ ಎಲ್ಲೆಗಳಾಗುತ್ತವೆ. ಒಂದು ಉತ್ತರ ಧ್ರುವದಲ್ಲಿ, ಇನ್ನೊಂದು ಪನಾಮಾ ಕಾಲುವೆಯ ಬಳಿ, ಮತ್ತೊಂದು ದಕ್ಷಿಣ ಧ್ರುವದಲ್ಲಿ. ಎರಡು ಖಂಡಗಳೂ ನಮ್ಮವೇ. ಈಗಾಗಲೆ ನೈತಿಕವಾಗಿ ಅವು ನಮ್ಮವಾಗಿವೆ. ನಮ್ಮ ಜನಾಂಗವು ಬೇರೆ ಜನಾಂಗಗಳಿಗಿಂತಲೂ ಹೆಚ್ಚು ಶ್ರೇಷ್ಠವಾಗಿರುವುದರಿಂದ ಕೆಲಕಾಲದಲ್ಲಿ ಅವು ಭೌಗೋಳಿಕವಾಗಿಯೂ ನಮ್ಮದೇ ಆಗುತ್ತವೆ.'' ಇದನ್ನು ಸಾಧಿಸಲು ತಾನೆ ಅಂದಿನ ಮೆಕ್ಸಿಕೋ (ಅದನ್ನು 'ಮೇಹಿಕೊ' ಎನ್ನುತ್ತಾರೆ) ದೇಶವನ್ನು ಛಿದ್ರಗೊಳಿಸಿ ಕ್ಯಾಲಿಫೋರ್ನಿಯ, ನ್ಯೂ ಮೆಕ್ಸಿಕೊ, ಟೆಕ್ಸಾಸ್, ಮುಂತಾದ ರಾಜ್ಯಗಳನ್ನು ಅಮೆರಿಕಾ ''ತನ್ನದನ್ನಾಗಿ'' ಮಾಡಿಕೊಂಡಿದ್ದು! ಕೆಲವರ್ಷಗಳ ಹಿಂದೆ ಒಬ್ಬ ಮೆಕ್ಸಿಕೋ ಪ್ರಜೆಯನ್ನು ಅಮೆರಿಕಾದಲ್ಲಿ ದಸ್ತಗಿರಿ ಮಾಡಿ ಎಲ್ಲೆಯನ್ನು ಉಲ್ಲಂಘಿಸಿ ಅಕ್ರಮವಾಗಿ ಅಮೆರಿಕಾಕ್ಕೆ ಪ್ರವೇಶಿಸಿದನೆಂದು ಮೊಕದ್ದಮೆ ಹೂಡಿದ್ದರಂತೆ. ಆಗ ಅವನು ನ್ಯಾಯಾಲಯದಲ್ಲಿ ಹೇಳಿದ್ದ ಮಾತು ಈಗ ಪ್ರಸಿದ್ಧವಾಗಿದೆ: ''ನಾನು ಮೆಕ್ಸಿಕೋದ ಎಲ್ಲೆಯನ್ನು ದಾಟಿಬರಲಿಲ್ಲ; ಮೆಕ್ಸಿಕೋದ ಎಲ್ಲೆಯು ನನ್ನನ್ನು ದಾಟಿ ಬಂದುಬಿಟ್ಟಿತು.'' ಅದಿರಲಿ, ಮತ್ತೆ ಪನಾಮಾಕ್ಕೆ ಮರಳೋಣ.




ಆಗಿನ್ನೂ ಪನಾಮಾ ಕಾಲುವೆ ಇರಲಿಲ್ಲ. ಈಗ ಪ್ರಸಿದ್ಧವಾಗಿರುವ ಹೆದ್ದಾರಿಗಳು, ರೈಲು ರಸ್ತೆಗಳು, ಇರಲಿಲ್ಲ. ಸಂಪತ್ತನ್ನು ದೋಚುತ್ತಿದ್ದ ಸ್ಪೇನ್ ಕಾಡುಮೇಡುಗಳ ಮುಖಾಂತರ ಕೆರಿಬಿಯನ್ ಸಮುದ್ರ ತೀರಕ್ಕೆ ಅದನ್ನು ಸಾಗಿಸಿ ಆಮೇಲೆ ಹಡಗುಗಳಲ್ಲಿ ಸ್ಪೇನಿಗೆ ಅದನ್ನು ರವಾನಿಸಿಕೊಳ್ಳುತ್ತಿತ್ತು. ಅದರಲ್ಲಿಯೂ ಎರಡು ಬಗೆಯ ಲೂಟಿಗಳು : ಒಂದು, ನೇರವಾಗಿ ಸ್ಪೇನ್ ಸರ್ಕಾರದ ಪರವಾದ್ದು, ಬಹಿರಂಗವಾದ್ದು; ಇನ್ನೊಂದೂ ಸ್ಪೇನಿನದೇ, ಆದರೆ ನೇರವಾಗಿ ಸರ್ಕಾರದ್ದಲ್ಲ. ಆದ್ದರಿಂದ ಕದ್ದು ಮುಚ್ಚಿ ಸಮುದ್ರ ತೀರಕ್ಕೆ ಮುಟ್ಟಿಸಬೇಕಾಗಿತ್ತು. ಎರಡು ಬಗೆಯ ಸಾಗಣೆಗೂ ಒಂದೇ ರಸ್ತೆ: ಕಾಡುಮೇಡಿನ ರಸ್ತೆ. ಸ್ಪೇನಿನ ವಿರೋಧಿಗಳಿಗೆ ಆ ರಸ್ತೆ ತಿಳಿಯದಂತೆ ರಹಸ್ಯವಾಗಿಡಲಾಗಿತ್ತು. ಆ ರಸ್ತೆ ಇದ್ದುದು ಎಲ್ಲಿ ಎಂಬ ಕುತೂಹಲದಿಂದ ಆಸ್ಟ್ರಿಯಾದ ವಿಜ್ಞಾನಿ ಕ್ರಿಶ್ಚಿಯನ್ ಸ್ಪ್ರಾಸಿಂಗ್ ಅದನ್ನು ಅರಸ ಹೊರಟ. ೧೭೫೦ರ ಸುಮಾರಿಗಾಗಲೆ ಆ ರಸ್ತೆಯನ್ನು ಉಪಯೋಗಿಸುವ ಪದ್ಧತಿ ಕೊನೆಗೊಂಡಿತ್ತು. ಅದಕ್ಕೆ ಮುಂಚೆ ೨೦೦ ವರ್ಷಗಳ ಕಾಲ ಆ ರಸ್ತೆಯಲ್ಲಿ ಚಿನ್ನ, ಬೆಳ್ಳಿ ಮತ್ತು ಸಾವಿರಾರು ಗುಲಾಮರನ್ನು ಸಾಗಿಸಲಾಗಿತ್ತು. ಒಂದು ವರ್ಷದಲ್ಲಿ ಸುಮಾರು ೨೦೦ ಟನ್ ಬೆಳ್ಳಿಯನ್ನು ಪನಾಮಾದಿಂದ ಸೂರೆಮಾಡಲಾಗುತ್ತಿತ್ತೆಂದು ಸ್ಪ್ರಾಸಿಂಗ್ ಲೆಕ್ಕ ಹಾಕಿದ್ದಾನೆ. ಚಿನ್ನದ ಪರಿಮಾಣ ಸಹ ಬಹಳವೇ ಇತ್ತೆಂದು ಆತ ಹೇಳಿದ್ದಾನೆ. ರಸ್ತೆಯ ಹೆಸರು 'ಕ್ಯಾಮಿನೊ ರಿಯಲ್' ಎಂದು. ಅದು ೪ ಅಡಿ ಅಗಲದ ಪಾದಚಾರಿ ರಸ್ತೆ, ಉದ್ದಕ್ಕೂ ಕಲ್ಲುಗಳನ್ನು ಜೋಡಿಸಿ ಮಾಡಿಸಿದ್ದ ರಸ್ತೆ. ಕೆಲವೊಮ್ಮೆ ಸಂಪತ್ತು ಸಾಗಿಸುತ್ತಿದ್ದವರ ಮೇಲೆ ಸ್ಥಳೀಯರು ಧಾಳಿ ನಡೆಸುತ್ತಿದ್ದರಂತೆ. ಅವರನ್ನು ಸ್ಪೇನಿನ ರಾಣಿ ''ಕಳ್ಳರು, ಲೂಟಿಕೋರರು'' ಎಂದು ಕರೆದಿದ್ದಳು. ನಿಜವಾದ ಕಳ್ಳರು ಯಾರೆಂದು ಇಂದು ಇತಿಹಾಸಕ್ಕೆ ಗೊತ್ತು. ೧೫೫೦ರಿಂದ ೧೭೦೦ರವರೆಗೆ ಈ ಪನಾಮಾದಿಂದ ಲೂಟಿಮಾಡಲಾದ ಒಟ್ಟು ಸಂಪತ್ತಿನ ಶೇ. ೬೦ರಷ್ಟನ್ನು ಈ ರಸ್ತೆಯಲ್ಲಿ ಸಾಗಿಸಲಾಗಿತ್ತು.

ಪನಾಮಾದಲ್ಲಿ ಮೊದಲು ಕಟ್ಟಲಾದ ಪಟ್ಟಣ ನೋಂಬ್ರ್ ದ ಡಿಯೋಸ್ ಎಂಬುದು, ೧೫೧೯ರಲ್ಲಿ; ಪನಾಮಾ ನಗರವನ್ನು ಕಟ್ಟಿದ್ದು ೧೫೧೯ರಲ್ಲಿ. ಮಳೆ, ನದಿ, ಕ್ರಿಮಿಕೀಟಗಳು, ಇವುಗಳ ಬಾಧೆಯ ನಡುವೆಯೇ ಸಂಪತ್ತಿನ ಸಾಗಣೆ. ಅದಕ್ಕಾಗಿ ೫೯ ಮೈಲಿ ಉದ್ದದ ಈ ಕಳ್ಳ ಕಲ್ಲು ಪಾದಚಾರಿ ರಸ್ತೆ. ಈಗ ಆ ರಸ್ತೆ ಇದ್ದಲ್ಲಿ ಹೆದ್ದಾರಿಯ ಭಾಗಗಳಿವೆ. ಕಾಡಿದೆ, ಊರುಗಳಿವೆ, ಬೆಟ್ಟಗಳಿವೆ. ಸ್ಪ್ರಾಸಿಂಗ್ ಅದನ್ನು ಪತ್ತೆಹಚ್ಚಿದ್ದು ೨೦೦೪ರಲ್ಲಿ. ರೋಸಿಯೋ ಗ್ರಿಮಾಲ್ಡೊ ಮತ್ತು ಕಾರ್ಲೋಸ್ ಗೋಮೆಜ್ ಎಂಬಿಬ್ಬರನ್ನು ೨೦೧೦ರಲ್ಲಿ ಸ್ವತಃ ಸ್ಪ್ರಾಸಿಂಗ್ ಆ ಮುನ್ನೂರು ವರ್ಷಗಳ ಹಿಂದಿನ ರಸ್ತೆಯುದ್ದಕ್ಕೂ ನಡೆದು, ದೋಣಿಗಳಲ್ಲಿ ಸಂಚರಿಸಿ, 'ಕ್ಯಾಮಿನೊ ರಿಯಲ್' ತೋರಿಸಿದ. ಅಲ್ಲಲ್ಲಿ ಕಾಡಿನಲ್ಲಿ ಈಗಲೂ ಆ ಹಳೆಯ ರಸ್ತೆಯ ಕಲ್ಲುಗಳು ಹಾಗೆಯೇ ಉಳಿದಿವೆಯಂತೆ. ಚಾಗ್ರಿಸ್ ನದಿಗೆ ೧೯೩೫ರಲ್ಲಿ ಒಂದು ಅಣೆಕಟ್ಟು ಕಟ್ಟಿದಾಗ ಸುಮಾರು ಎಂಟು ಮೈಲಿಯಷ್ಟು ರಸ್ತೆ ಅದರಲ್ಲಿ ಸೇರಿಕೊಂಡುಬಿಟ್ಟಿತು. ಕಟ್ಟೆಯಲ್ಲಿ ನೀರು ಖಾಲಿಯಾದಾಗ ಹಳೆಯ ರಸ್ತೆಯ ಕಲ್ಲುಗಳು ಹೀಗೇಕೆ ಜೋಡಿಸಲ್ಪಟ್ಟಿವೆಯೆಂದು ನೋಡುಗ ಅಚ್ಚರಿಪಡುತ್ತಾನೆ. ಈ ಚಾಗ್ರಿಸ್ ನದಿ ಮೊಸಳೆಗಳಿಗೆ ಹೆಸರಾದ್ದು. ಚಾಗ್ರಿಸ್ ರಾಷ್ಟ್ರೀಯ ಪಾರ್ಕ್ ಈಗ ಪನಾಮಾದಲ್ಲಿ ಬಹಳ ಪ್ರಸಿದ್ಧ. ಅಲ್ಲಿಂದಲೇ ಪನಾಮಾ ನಗರಕ್ಕೆ ನೀರು ಸರಬರಾಜು. ಪನಾಮಾ ಕಾಲುವೆಯ ನೀರಿನ ಶೇ. ೪೦ರಷ್ಟು ಇದೇ ಅಣೆಕಟ್ಟಿನಿಂದ ಭರಿಸಲಾಗುತ್ತದೆ. ಅಲ್ಲಿಂದಾಚೆಗೆ ಕ್ಯಾಮಿನೊ ರಿಯಲ್ ಕಾಡನ್ನು ಪ್ರವೇಶಿಸುತ್ತದೆ. ಉದ್ದಕ್ಕೂ ಸುಣ್ಣದ ಕಲ್ಲಿನ ೪ ಅಡಿ ಅಗಲದ ರಸ್ತೆ, ಸುತ್ತಲೂ ಬಿದಿರುಮೆಳೆಗಳು. ದಾರಿಯಲ್ಲಿ ಕಳ್ಳ ಸಾಗಣೆದಾರರಿಗೆಂದು ಸ್ಯಾನ್ ಹುವಾನ್ ಎಂಬಲ್ಲಿ ತಂಗುದಾಣಗಳು ಬೇರೆ! ಅದೀಗ ಅಲಾಯುಯೇಲ ಎಂಬ ಸರೋವರದಲ್ಲಿ ಮುಳುಗಿಹೋಗಿದೆ.

ತನ್ನ ಅನ್ವೇಷಣೆಯ ಕಾಲದಲ್ಲಿ ಸ್ಪ್ರಾಸಿಂಗ್ ರಸ್ತೆಯ ಕೆಲವೆಡೆ ಕೊಡಲಿ, ಬಾಣ, ಬೀಸುಗಲ್ಲು ಮತ್ತು ಕೆಲವು ಉಪಕರಣಗಳನ್ನು ಶೋಧಿಸಿದ್ದ. ಅವು ಪನಾಮಾದ ಮೂಲನಿವಾಸಿಗಳದ್ದಾಗಿರಬೇಕು. ಈಗಿನ ಕಲ್‌ಜ಼ಾ ದ

ಲಾರ್ಗ ಎಂಬ ಊರಿನ ಕೆಲವು ಮನೆಗಳನ್ನು ಹಳೆಯ ಕ್ಯಾಮಿನೊ ರಿಯಲ್ ರಸ್ತೆಗೆ ಬಳಸಲಾಗಿದ್ದ ಕಲ್ಲುಗಳಿಂದ ಕಟ್ಟಲಾಗಿದೆ ಎನ್ನುತ್ತಾರೆ. ಈಗಿನ ಕ್ಯಾಸ್ಕೊ ಆಂಟಿಗುವೊ ಎಂಬ ಪಟ್ಟಣ ಇರುವಲ್ಲಿಯೂ ಇದೇ ರಸ್ತೆಯ ಒಂದು ಭಾಗ ಸೇರಿಹೋಗಿದೆ. ಕ್ಯಾಮಿನೊ ರಿಯಲ್‌ನ ಮುಂದುವರಿದ ಭಾಗವಿರುವುದು ಪಿಕಿನಿ ಮತ್ತು ಬೊಕೆರೋನ್ ನದಿಗಳ ನಡುವಣ ಬೆಟ್ಟದ ಪಂಕ್ತಿಯಲ್ಲಿ. ಆ ಪ್ರದೇಶದ ಹಳ್ಳಿಗಳು ಈಗ ಎಂಬೆರಾ ನೃತ್ಯಕ್ಕೆ ಬಹಳ ಹೆಸರುವಾಸಿಯಂತೆ. ಎಂಬೆರಾ ಪಂಗಡದ ಮ್ಯಾಕ್ಸಿಮಿಲಿಯಾನೊ ಮೊದಲಿಗೆ ಸ್ಟ್ರಾಸಿಂಗ್ ಜೊತೆಯಲ್ಲಿ ರಸ್ತೆಯ ಅನ್ವೇಷಣೆಗೆ ಹೋಗಿದ್ದ. ಈ ಪ್ರದೇಶದಲ್ಲೇ ಒಂದೆಡೆ ಎರಡು ಶತಮಾನಗಳ ಹಿಂದೆ ಫ್ರಾನ್ಸಿಸ್ ಡ್ರೇಕ್ ಎಂಬೊಬ್ಬನು ಚಿನ್ನ ಸಾಗಣೆದಾರರನ್ನು ತಡೆದು ಸೆಣಸಿದ್ದ. ಸ್ವತಃ ಎಂಬೆರಾಗಳು ಮೂಲತಃ ಈ ಪ್ರದೇಶದವರಲ್ಲ, ಅವರು ಕೊಲಂಬಿಯಾದವರು. ಡಾರಿಯೇನ್ ಮುಖಾಂತರ ಇಲ್ಲಿಗೆ ಬಂದು ನೆಲೆಸಿದ್ದಾರೆ. ಇಲ್ಲಿಯ ಮೂಲನಿವಾಸಿಗಳನ್ನು ೧೭ನೆಯ ಶತಮಾನದಲ್ಲೇ ನಿರ್ನಾಮ ಮಾಡಲಾಯಿತೆಂದು ಸ್ಟ್ರಾಸಿಂಗ್ ಹೇಳಿದ್ದಾನೆ. ಸದ್ಯದಲ್ಲಿ ಕ್ಯಾಮಿನೊ ರಿಯಲ್‌ನ ಈ ಭಾಗದ ಸನಿಹದಲ್ಲಿ ಸುಮಾರು ಮೂರು ಸಾವಿರ ನಿವಾಸಿಗಳಿದ್ದಾರೆ. ಕೃಷಿ ಮತ್ತು ಮೀನುಗಾರಿಕೆ ಅವರ ಕಸುಬು. ಅಲ್ಲಿಯ ನಿವಾಸಿ ಗೆನಾರೊ ಹೆರ್ನಾಂಡಿಸ್ ಪ್ರಕಾರ ಇಪ್ಪತ್ತು ವರ್ಷಗಳ ಹಿಂದೆ ಕೂಡ ಕ್ಯಾಮಿನೊ ರಸ್ತೆ ಅಸ್ತಿತ್ವದಲ್ಲಿತ್ತು; ಮರಗಳನ್ನು ಕಡಿಯ ಬಂದವರು ಅದನ್ನು ಹಾಳುಗೆಡವಿದರು.

ಪ್ರವಾಸಿಗರನ್ನು ಆಕರ್ಷಿಸಲು ಆ ಹಳೆಯ ಲೂಟಿಕೋರರ ರಸ್ತೆ ಎಲ್ಲೆಲ್ಲಿ ಲಭ್ಯವಿದೆಯೋ ಅಲ್ಲಿ ಅದನ್ನು ದುರಸ್ತಿಗೊಳಿಸಿ ಪ್ರದರ್ಶನಕ್ಕಿಡುವ ಯೋಜನೆ ಇದೆಯೆಂದು ಹೇಳಲಾಗಿದೆ. ಅದಕ್ಕೆ ಏನಿಲ್ಲವೆಂದರೂ ಮೂರು ಲಕ್ಷ ಡಾಲರ್ ವೆಚ್ಚವಾಗುತ್ತದೆಂದು ಸ್ಟ್ರಾಸಿಂಗ್ ಹೇಳಿರುವುದುಂಟು. ಕ್ಯಾಮಿನೊ ರಿಯಲ್ ನಂತರ ನಿರ್ಮಾಣಗೊಂಡಿದ್ದು ಕ್ಯಾಮಿನೊ ದ ಕ್ರೂಸೆಸ್ ಎಂಬ ರಸ್ತೆ. ಇದನ್ನು ಮಳೆಗಾಲದಲ್ಲಿ ಬಳಸಲಾಗುತ್ತಿತ್ತು. ಆದರೆ ಚಿನ್ನ- ಬೆಳ್ಳಿ ಸಾಗಣೆಗೆ ಯಾವಾಗಲೂ ಕ್ಯಾಮಿನೊ ರಿಯಲ್ ರಸ್ತೆಯೇ ಬಳಕೆಯಲ್ಲಿತ್ತು.

ಅನ್ವೇಷಣೆಯ ಹಾದಿಯಲ್ಲಿ

ಪನಾಮಾದಲ್ಲಿ ಈಗ ಚಿನ್ನ- ಬೆಳ್ಳಿ ಇರಲಿ, ಬೇರೆ ಖನಿಜಗಳು ಕೂಡ ಅಷ್ಟಕ್ಕಷ್ಟೆ. ಖಾಲಿ ಪರ್ವತ ಪ್ರದೇಶಗಳನ್ನು ಬಿಟ್ಟು ಅಲ್ಲಿದ್ದ ಖನಿಜಗಳನ್ನೆಲ್ಲ ಸ್ಪೇನ್ ಮತ್ತು ಬ್ರಿಟನ್ ವಸಾಹತು ''ವೀರರು'' ಶತಮಾನಗಳ ಹಿಂದೆಯೇ ಹೊತ್ತೊಯ್ದಿದರು. ಈ ದಶಕದ ಪನಾಮಾ ನಾಗರಿಕರು ತಮ್ಮ ಸಂಪತ್ತು ಹೊರಹೋಗಲು ನಿರ್ಮಿಸಲಾಗಿದ್ದ ಕಳ್ಳದಾರಿಯ ತುಣುಕುಗಳನ್ನಷ್ಟೆ ಕಂಡು ನಿಟ್ಟುಸಿರಿಡಬೇಕು. ಅದಲ್ಲದೆ ಇನ್ನೇನಾದರೂ ಕಾಣುತ್ತದೆಯೇ ಎಂದರೆ, ಹೌದು ಕಾಣುತ್ತದೆ: ಈ ಶತಮಾನದ ಅಮೆರಿಕಾದ ಸೈನಿಕರು, ಆಯುಧಗಳು, ''ಸ್ವತಂತ್ರ'' ಪನಾಮಾಕ್ಕೆ ಆದೇಶ ನೀಡುವ ಅಮೆರಿಕಾದ ರಾಯಭಾರ ಕಚೇರಿಯ ಅಧಿಕಾರಿಗಳು ಮತ್ತು ಸಿ.ಐ.ಎ. ಗುಪ್ತದಳದ ಕಾರ್ಯಕರ್ತರು. ಪನಾಮಾ ನಗರದ ವಿಮಾನ ನಿಲ್ದಾಣದ ಗಲಾಟೆಯಲ್ಲಿ ಇವರೆಲ್ಲರೂ ಇದ್ದಾರೆಂಬ ಅರಿವು ಸರ್ವಥಾ ಮೂಡುವುದಿಲ್ಲ. ಅಲ್ಲಿ ಕಾಣುವುದು ದಕ್ಷಿಣ ಅಮೆರಿಕಾ ಖಂಡದ ಎಲ್ಲ ದೇಶಗಳ ಗಂಡಸರು, ಹೆಂಗಸರು ಮತ್ತು ಮಕ್ಕಳು. ಲಗುಬಗೆಯಿಂದ ಓಡೋಡಿ ಅವರವರ ವಿಮಾನಗಳನ್ನೇರಿ ಹೊರಹೋಗಿಬಿಡುತ್ತಾರೆ. ಶತಮಾನಗಳ ಲೂಟಿಯನ್ನು ಮರೆತಿರುವ ಅನೇಕ ಪನಾಮಾದ ಜನ ಯಥಾಪ್ರಕಾರ ದೈನಂದಿನ ಸಂಪಾದನೆಯ ತುರ್ತಿನಲ್ಲಿ ಭೂತಕಾಲವನ್ನು ನೆನಪಿಸಿಕೊಳ್ಳುವುದು ಅಪರೂಪವೆನಿಸುತ್ತದೆ.

ಡಾ|| ಜಿ. ರಾಮಕೃಷ್ಣ
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ,
ಕತ್ತರಿಗುಪ್ಪೆ ವಾಟರ್ ಟ್ಯಾಂಕ್ ಹತ್ತಿರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

## ನಿರಾಕಾರ

ಬೆಳಕಿಂಡಿಯಿಂದ ತೂರಿಬಂದ
ಬಿಸಿಲ - ಏಣಿ ಏರಿ, ಆಗಸದಲ್ಲಿ
ಹಾರಿಹೋದೆ, ಬಾನಾಡಿಗಳ
ಸಂಗದಲ್ಲಿ, ಮೇಘಮೆತ್ತೆಗಳ
ತೋಳಿನಲ್ಲಿ ಓಲಾಡಿ ಬಂದೆ.
ಪುಕ್ಕದ ಗರಿಯಂತೆ ತೇಲಿ - ಚಿಮ್ಮಿ,
ಮರ - ಗಿಡಗಳ ಹಸಿರಿನೊಳಗೆ
ತಂಗಾಳಿಯಂತೆ ತೂರಿ - ಹಾರಿ
ಜೀವಕ್ಕೆಲ್ಲಾ ತಂಪು - ಕಂಪು.
ಇಂಪಾದ ಗಾನ ಕೇಳಿ,
ಮುದಗೊಂಡ ಮನಕ್ಕೆ
ಕೇಳೇಬಿಟ್ಟೆ, ನಿಜಕ್ಕೂ
ಅಗತ್ಯವೇ ಹೇಳು, ಪ್ರಿಯ ಸಖನೇ
ನೂರಾರು ಬಂಧನಗಳ ಭವಕಾಯ ?

ಎಂ. ಕುಸುಮ
ನಂ. ೪೩, ಜಯಲಕ್ಷ್ಮಿ ನಿಲಯ, ಕೆಐಎಂಸಿಓ ಎದುರು
ಬಿ.ಎಂ.ರಸ್ತೆ, ಹಾಸನ - ೫೭೩೨೦೧

# ಶಿಕ್ಷಣವೇ ಶಕ್ತಿ ಎಂಬ ರೂಪಕ



'ಜ್ಞಾನವೇ ಶಕ್ತಿ' ಎಂಬುದು ಪ್ರಾಚೀನ ಕಾಲದಿಂದಲೂ ಕೇಳಿಬಂದಿರುವ ಮಾತು. ಈ ಮಾತು ಜ್ಞಾನದ ಅವಶ್ಯಕತೆ ಮತ್ತು ಶಿಕ್ಷಣದ ವ್ಯಾಪಕತೆ ಹಾಗೂ ಅದರ ಮಹತ್ವವನ್ನು ಸಾರುತ್ತದೆ. ಮನುಷ್ಯ ತನ್ನ ಜೀವನವಿಡೀ ಆಂತರಿಕವಾಗಿ ಪ್ರಬುದ್ಧತೆ ಹೊಂದಲು ಜ್ಞಾನದ ಅವಶ್ಯಕತೆ ಇದೆ. ಜ್ಞಾನದ ಮುಂದೆ ಉಳಿದೆಲ್ಲಾ ಸಂಪತ್ತುಗಳು ಶೂನ್ಯ.

ವ್ಯಕ್ತಿಯ ಬದುಕಿನ ಓಟ 'ಜ್ಞಾನ'ದ ಮೂಲ ಸೆಲೆಯಿಂದ ನಡೆಯುವಂಥದ್ದು. ಜ್ಞಾನ ಮತ್ತು ಅಜ್ಞಾನ ಒಂದೇ ನಾಣ್ಯದ ಎರಡು ಮುಖಗಳಾದರೂ ಒಂದು ಶಕ್ತಿ, ಮತ್ತೊಂದು ಶೂನ್ಯ. ಅದರ ಆಯ್ಕೆಯ ಸ್ವಾತಂತ್ರ್ಯ ಮಾತ್ರ ನಮ್ಮದು. 'ನ ಹಿ ಜ್ಞಾನೇನ ಸದೃಶಂ' ಎಂಬ ವಾಣಿ ಅದನ್ನೇ ಹೇಳುತ್ತದೆ.

ಜ್ಞಾನವು ಮನುಷ್ಯನ ಆಂತರಂಗಿಕ ವಿಕಾಸಕ್ಕೆ ಹಾಗೂ ಬದುಕಿನ ನಡಿಗೆಗೆ ತೀರ ಅವಶ್ಯಕ. ಹಿರಿಯ ಕವಿ 'ಸರ್ವಜ್ಞ'ನ ಮಾತುಗಳಲ್ಲಿ ಹೇಳುವುದಾದರೆ :

ವಿದ್ಯೆ ಉಳ್ಳವನ ಮುಖವು
ಮುದ್ದು ಬರುವಂತಿಕ್ಕು ವಿದ್ಯೆ ಇಲ್ಲದವನ
ಬರಿ ಮುಖವು ಹಾಳೂರು ಹದ್ದಿನಂತಕ್ಕು ಸರ್ವಜ್ಞ

ಈ ಸಾಲುಗಳು ಸುಶಿಕ್ಷಿತ ವ್ಯಕ್ತಿಯ ಲಕ್ಷಣ ಹಾಗೂ ಆತನ ಮಹತ್ವವನ್ನು ಸಾರುತ್ತವೆ.

'ಶಿಕ್ಷಣ' ಇಂಗ್ಲಿಷ್‌ನ 'ಎಜುಕೇಶನ್' ಎಂಬ ಪದಕ್ಕೆ ಸಂವಾದಿಯಾದುದು. 'ಎಜುಕೇರ್' ಎಂಬ ಲ್ಯಾಟಿನ್ ಪದದಿಂದ ಉದ್ಭವವಾದ ಈ ಎಜುಕೇಶನ್ ಎಂಬುದು ''ಮಗುವಿನ ಆಂತರಂಗಿಕ ಸುಪ್ತಪ್ರತಿಭೆಯನ್ನು ಹೊರಗೆಳೆಯುವ ಪ್ರಕ್ರಿಯೆಯ ಶಿಕ್ಷಣ'' ಎಂದು ಹೇಳುತ್ತದೆ.

ಭಾರತದ ರಾಷ್ಟ್ರಪತಿಗಳೂ ಹಾಗೂ ಶಿಕ್ಷಣ ತಜ್ಞರೂ ಆಗಿದ್ದ ಡಾ|| ಸರ್ವಪಲ್ಲಿ ರಾಧಾಕೃಷ್ಣನ್ ಅವರು ಶಿಕ್ಷಣದ ಬಗ್ಗೆ ಹೀಗೆ ಹೇಳುತ್ತಾರೆ : ''ಮಕ್ಕಳು ಮಾನವರಾಗಿ, ನಾಗರಿಕರಾಗಿ, ಇತರರೊಡನೆ ಉತ್ತಮ ಬಾಂಧವ್ಯದಿಂದ, ಗೌರವ, ಘನತೆಗಳಿಂದ ವರ್ತಿಸುವಂತೆ ಮಾಡಿ ಅವರಲ್ಲಿ ಉದಾರತೆ, ಸಹೋದರತ್ವ ಭಾವನೆ, ಸಹಾನುಭೂತಿ ಮೂಡುವಂತೆ ಮಾಡುವುದೇ ಶಿಕ್ಷಣ.''

ಮಗುವು ತಾನಿರುವ ಸಮಾಜದಲ್ಲಿ ಹೊಂದಿಕೊಂಡು ಬಾಳಲು ತನ್ನ ದೇಶದ ಸಭ್ಯ ಪ್ರಜೆಯಾಗಿ ಬದುಕಲು ಶಿಕ್ಷಣದ ಅವಶ್ಯಕತೆ ಇದೆ. ಏಕೆಂದರೆ ಶಿಕ್ಷಣವೆಂಬ ಮರದಲ್ಲಿ ಜ್ಞಾನದ ಫಲದ ಹಸನಾದ ಬೆಳೆ ತೆಗೆಯುವ ಅವಶ್ಯಕತೆ ಇದೆ. ವಿದ್ಯೆಯಿಲ್ಲದವನ ಬಾಳು ಪಶುವಿನ ಬಾಳಿಗಿಂತಲೂ ಕೀಳು. ಪ್ರತಿಯೊಬ್ಬ ವ್ಯಕ್ತಿಗೆ ಯಾವುದಾದರೂ ಒಂದು ವಿದ್ಯೆ ಕರಗತವಾಗಿರಬೇಕು. ಅದು ಶಾಲೆಯಲ್ಲೇ ಕಲಿತಿರಬೇಕು ಎಂಬ ಔಪಚಾರಿಕ ಚೌಕಟ್ಟುಗಳು ಬೇಡ. ಆ ವಿದ್ಯೆ ಈಜುವುದು ಆಗಿರಬಹುದು, ಮರ ಹತ್ತುವುದು, ಬೆಟ್ಟ ಏರುವುದು, ಕಲ್ಲಿನಲ್ಲಿ ಸುಂದರವಾದ ಮೂರ್ತಿಯೊಂದನ್ನು ಕೆತ್ತುವುದು, ನೇಗಿಲು ಹಿಡಿದು ಹೊಲ ಉಳುವುದು, ಹೀಗೆ ಬಡಗಿ, ಕುಂಬಾರಿಕೆ, ನೇಕಾರಿಕೆ ಯಾವುದೇ ವಿದ್ಯೆಯಾಗಿರಬಹುದು. ಆದರೆ ಇವನ್ನೆಲ್ಲ ಸ್ವಲ್ಪ ಅಕ್ಷರ ಜ್ಞಾನದೊಡನೆ ಮೇಳೈಸುವ ಶಕ್ತಿ ದೊರೆತರೆ ಅದು ಆತನ ಬದುಕನ್ನು ಉನ್ನತ ಸ್ಥಾನಕ್ಕೇರಿಸುತ್ತದೆ. ವಿದ್ಯೆಯ ಬೆಲೆ ಅರಿಯಬೇಕಾದಲ್ಲಿ ಓದು ಮತ್ತು ಬದುಕಿನ ನಡುವಿನ ಮಹತ್ವವನ್ನು ಕಂಡುಕೊಳ್ಳಬೇಕಾಗುತ್ತದೆ. ಯಾಕೆಂದರೆ ಎರಡು ದೋಣಿಗಳಲ್ಲಿ, ಒಂಟಿಕಾಲಿನ ಪ್ರಯಾಣದಲ್ಲಿ ಅಂತಿಮ ಗುರಿ ತಲುಪುವ ದೃಢತೆ ಇರಬೇಕು. ಆದ್ದರಿಂದಲೇ ಹೇಳುವುದು : ''ಓದು ಮತ್ತು ಬದುಕುಗಳ ನಡುವಿನ ಸಾಮ್ಯತೆಯೇ ಶಿಕ್ಷಣ.''

ಒಂದು ಮಗುವಿನ ಶಿಕ್ಷಣವು ಪ್ರಾಥಮಿಕ ಹಂತದಿಂದ ಪ್ರಾರಂಭವಾಗುತ್ತದೆ. ಮನೆಯೇ ಮೊದಲ ಪಾಠಶಾಲೆಯೆಂದರೆ ತಾಯಿ ತಾನೆ ಮೊದಲ ಗುರು. ಮಗುವಿನ ಜೀವನದಲ್ಲಿ ಈ ಮೂಲಕ ವಿದ್ಯೆ ಎಂಬ ಸಾಧನದ ಮೂಲಕ ವಿಚಾರಗಳನ್ನು ವ್ಯಕ್ತಿ ಅರಿಯುತ್ತಾ ಹೋಗುತ್ತಾನೆ. ಏಕೆಂದರೆ ತಾಯಿಗರ್ಭದಲ್ಲಿಯೇ ಮಗುವಿನ ಕಲಿಕೆ ಆರಂಭವಾಗುತ್ತದೆ. ಪ್ರಕೃತಿಯನ್ನು ನೋಡುವ, ಅದರೊಟ್ಟಿಗೆ ವಿಸ್ಮಯದ ಭಾವವನ್ನು ಹೊಂದುವ ಅನುಕರಣ ಪ್ರವೃತ್ತಿಯನ್ನು ಅನುಸರಿಸುವ ಮೂಲಕ ಮಗು ಕಲಿಯತೊಡಗುತ್ತದೆ.

ಈ ದಿಶೆಯಲ್ಲಿ, ''ಶಿಕ್ಷಣ ಕೇವಲ ಭರವಸೆಯ ಕೂಸಲ್ಲ. ಶಿಕ್ಷಣವೆಂದರೆ ಕೇವಲ ಮಾಹಿತಿಯನ್ನು ನೀಡುವುದಲ್ಲ. ಜೀವನವಿಡೀ ಗೊಂದಲದಲ್ಲಿ ಮುಳುಗಿಸುವ ಅಜೀರ್ಣವಾದ ಒಣ ಜ್ಞಾನವೂ ಅಲ್ಲ. ಶಿಕ್ಷಣದಿಂದ ಉತ್ತಮ ವಿಚಾರಗಳು ಕರಗತವಾಗಬೇಕು. ಜೀವನದಲ್ಲಿ ಚೈತನ್ಯ ಮೂಡುವಂತಾಗಬೇಕು'' ಎನ್ನುವ ಸ್ವಾಮಿ ವಿವೇಕಾನಂದರ ಮಾತು ಎಲ್ಲಕ್ಕೂ ಸ್ಫೂರ್ತಿ. ಇಂತಹ ಶಿಕ್ಷಣದ ಅವಶ್ಯಕತೆಯಲ್ಲಿ ನಾವಿದ್ದೇವೆ. ಈ ಮೂಲಕ 'ಶಿಕ್ಷಣವೇ ಶಕ್ತಿ' ಎಂಬ ರೂಪಕವನ್ನು ಅರ್ಥವತ್ತಾಗಿಸುವ ಅವಶ್ಯಕತೆ ಇದೆ.

**ಗುಂಡೀಗೆರೆ ವಿಶ್ವನಾಥ**
ನಂ. ೧೪/೨, ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ, ಭೈರವೇಶ್ವರನಗರ
ಮೂಡಲಪಾಳ್ಯ, ಬೆಂಗಳೂರು - ೫೬೦ ೦೭೨



**''ಮಕ್ಕಳು ಮಾನವರಾಗಿ, ನಾಗರಿಕರಾಗಿ, ಇತರರೊಡನೆ ಉತ್ತಮ ಬಾಂಧವ್ಯದಿಂದ, ಗೌರವ, ಘನತೆಗಳಿಂದ ವರ್ತಿಸುವಂತೆ ಮಾಡಿ ಅವರಲ್ಲಿ ಉದಾರತೆ, ಸಹೋದರತ್ವ ಭಾವನೆ, ಸಹಾನುಭೂತಿ ಮೂಡುವಂತೆ ಮಾಡುವುದೇ ಶಿಕ್ಷಣ.''**

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

